# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು


**ಗುಜರಾತ್ ಅಭಿವೃದ್ಧಿ ಮಾದರಿ V/s ಮಾನವ ಅಭಿವೃದ್ಧಿ ಮಾದರಿ**
*ಟಿ. ಆರ್. ಚಂದ್ರಶೇಖರ* ... ೧೭

**ಸರ್ದಾರ್ ಪಟೇಲರ ನಕಲಿ ವಾರಸುದಾರರು** *ಸನತ್‌ಕುಮಾರ ಬೆಳಗಲಿ* ... ೪೩

**ನಮ್ಮ ನಾಡಿನ ಹೆಮ್ಮೆಯ ವಿಜ್ಞಾನಿ 'ಭಾರತ ರತ್ನ' ಸಿ. ಎನ್. ಆರ್. ರಾವ್ ಸಂದರ್ಶನ** ... ೪೧

**ಋಗ್ವೇದ ಪ್ರವೇಶಿಕೆ – ಐತಿಹ್ಯ ಮತ್ತು ವಾಸ್ತವ** *ಜಿ. ರಾಮಕೃಷ್ಣ* ... ೧೩

**ಅಂಬೇಡ್ಕರ್ ವೈಚಾರಿಕತೆ ಮತ್ತು ಪೂನಾ ಒಪ್ಪಂದದ ಮರುಚಿಂತನೆ**
*ಡಾ॥ ಅಪ್ಪಗೆರೆ ಸೋಮಶೇಖರ* ... ೫೭

**ಶಾಸ್ತ್ರೀಯ ಭಾಷೆಯ ಚಾರಿತ್ರಿಕ ವಿಶ್ಲೇಷಣೆ** *ಡಾ॥ ಕೆ. ಮೋಹನ್‌ಕೃಷ್ಣ ರೈ* ... ೨೩

**ಕೊಡವ ಭಾಷೆ ಕನ್ನಡ ಭಾಷಾಜನ್ಯವೇ ?** *ಡಾ॥ ಎಂ. ಟಿ. ರತಿ* ... ೩೫

**ಕಾವ್ಯಧಾರೆ** ೧೧, ೩೦, ೩೮, ೪೮, ೫೩, ೫೬

**ವಧುವಿನ ಪೈಜಾಮ** *ಕಾಶ್ಮೀರಿ ಮೂಲ : ಅಖ್ತರ್ ಮೊಹಿಯುದ್ದೀನ್*
*ಕನ್ನಡಕ್ಕೆ : ತಂಬ್ರಹಳ್ಳಿ ರಾಮನಮಲಿ* ... ೫೨

**ಬಡತನದ ರೇಖೆಯ ಬವಣೆ** *ಅನಂತ ಕಲ್ಲೋಳ* ... ೨೯

**ಫೂತಾವೊ ಘೂ ನಾಂಗ್ ಪರ್ವತಗಳ ಕಥೆ**
*ಎಚ್. ಕೆ. ರಾಮಚಂದ್ರಮೂರ್ತಿ* ... ೨೭

**ಅಮರ ಗಾಯಕ ಮನ್ನಾ ಡೇ** *ಕೆ. ಸಿ. ರಮೇಶ್* ... ೩೧

**ಅಭಿವೃದ್ಧಿ ಬುಲ್ಡೋಜರ್ ಅಡಿಯಲ್ಲಿ ನಲುಗಿಹೋಗುತ್ತಿರುವ ಜೀವಜಾಲ**
*ಪ್ರೊ॥ ಶಿವರಾಮಯ್ಯ* ... ೩೭

**ಹೂಡಿಕೆ ಮಾಡದಿರುವುದು ಬೆಲೆಯೇರಿಸುವುದು ಉದ್ದೇಶಪೂರ್ವಕವೇ ?**
*ಕೆ. ಎಸ್. ಪಾರ್ಥಸಾರಥಿ* ... ೪೫

**ಮಿಥ್ಯೆಗಳ ಮಡುವಿನಲ್ಲಿ 'ಹಾಸನಾಂಬೆ' ದೇವಸ್ಥಾನ**
*ಜ. ಹೊ. ನಾರಾಯಣಸ್ವಾಮಿ* ... ೪೯

**ನಾನು ಓದಿದ ಪುಸ್ತಕ : ಮುಂದಣ ಭವಿಷ್ಯತ್ತಿಗೆ ಹಿಂದಣ ಇತಿಹಾಸ ಬೆಳಕಾಗಬೇಕು** *ಬಾ. ಹ. ರಮಾಕುಮಾರಿ* ... ೫೫

**ವಿಶ್ವವೀಕ್ಷಣೆ : ಕಾಮನ್‌ವೆಲ್ತ್ ಕೂಟ – ಶ್ರೀಲಂಕಾ – ಭಾರತ**
*ಸೀಯಾರ್ಕೆ* ... ೬೨

**ನಭಾವಲೋಕನ : ಶನಿ ಮತ್ತು ಚಂದ್ರರ ಸಮಾಗಮ**
*ಡಾ॥ ಬಿ. ಎಸ್. ಶೈಲಜಾ* ... ೩೪

**ಹೊಸ ಓದು** *ಇಂದಿರಾಕುಮಾರಿ* ... ೪೦

**ಕ್ಷ–ಕಿರಣ** *ಪ್ರಕಾಶ್ ಎಸ್.* ... ೧೨



**ಚಿತ್ರಗಳು :** ತನು, ರವಿ ಹೆಗ್ಗಡಿ, ಕಮಲಂ ಅರಸು, ಪ್ರತೀಕ್ ಸಿನ್ಹಾ, ಶ್ರೀಹರಿ, ವಿ. ಗೋಪಾಲ್, ಜಿಎಂಬೊ, ಗೋಪಿ, ವಿ. ಆರ್. ಸಿ. ಶೇಖರ್, ವಿಜಯಾನಂದ

**ಮುಖಪುಟ :** ಸಿ. ಎನ್. ಆರ್. ರಾವ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ರಾಜ್ಯದ ಎರಡು ವೋಲ್ವೊ ಬಸ್ಸುಗಳು ಒಂದು ವಾರದ ಅಂತರದಲ್ಲಿ ಸುಟ್ಟು ಭಸ್ಮವಾಗಿವೆ, ಹಲವು ಪ್ರಯಾಣಿಕರ ಜೀವಂತ ದಹನವಾಗಿದೆ. ಎರಡೂ ಖಾಸಗಿ ಮಾಲೀಕತ್ವದಲ್ಲಿ ಇದ್ದಂಥವು. ನಾವು 'ಅಯ್ಯೋ' ಎಂದರೆ ಸತ್ತವರು ಹಿಂದಿರುಗುವುದಿಲ್ಲ, ಅವರ ಕುಟುಂಬಗಳವರು ಸಾಂತ್ವನಗೊಳ್ಳುವುದಿಲ್ಲ. ಆದರೂ ಸಂತಾಪ ವಾಸ್ತವವಾದ್ದು. ಇಂತಹ ಘೋರ ಘಟನೆಗಳು ನಡೆಯದಂತಾಗಲು ಸಾಧ್ಯವಿಲ್ಲವೆ, ಎಂದು ಸಂಬಂಧಪಟ್ಟವರು, ವಿಶೇಷತಃ ಸಾರಿಗೆ ವಿಭಾಗದ ಎಲ್ಲ ಅಧಿಕಾರಿಗಳು ಯೋಚಿಸಬೇಕು. ನಮಗೆಲ್ಲಾ ಮಾನವ ಹೃದಯಗಳಿವೆ. ಆದರೆ ಆ ಹೃದಯಗಳಿಗೆ ಸರಿಹೊಂದುವ ಆಲೋಚನೆಗಳಿಲ್ಲ, ನಿಯಂತ್ರಕ ಕ್ರಿಯೆಗಳಿಲ್ಲ. ಏನೋ ಅನಾಹುತ ಸಂಭವಿಸಿತೆಂದು ಒಂದು ದಿನ ಪರಿತಪಿಸಿ, ಮತ್ತೆ ಹಿಂದಿನ ಪದ್ಧತಿಗಳನ್ನೇ ಅಂತಂತೆಯೇ ಅನುಸರಿಸುವುದು ನಮ್ಮ ಜಾಯಮಾನವಾಗಿಹೋಗಿದೆ. ಬಸ್ಸುಗಳಿಗೆ ಬೆಂಕಿಬಿದ್ದ ನಂತರದ ಎರಡು–ಮೂರು ದಿನ ಒಂದಷ್ಟು ಕಾನೂನು ಸೂತ್ರಗಳನ್ನು ನೆನಪಿಸಿಕೊಳ್ಳುತ್ತಾರೆ, ಆಮೇಲೆ ಅದೇ ಜಡ್ಡುಗಟ್ಟಿದ ಮನಸ್ಸಿಗೆ ಹಿಂದಿರುಗುತ್ತಾರೆ. ಚಾಲಕ ನಿದ್ದೆ ಮಾಡಿರಲಿಲ್ಲ, ಚಾಲಕನು ನಿಗದಿತ ವೇಗವನ್ನು ಮೀರಿ ಬಸ್ಸನ್ನು ಓಡಿಸುತ್ತಿದ್ದ, ಬಸ್ಸಿಗೆ ಲಗ್ಗೇಜು ವಿಪರೀತ ತುಂಬಿದ್ದರು ಮತ್ತು ಅದರಲ್ಲಿ ಸ್ಫೋಟಕ ಸಾಮಗ್ರಿ ಇದ್ದಿರಬಹುದು, ಕಿಟಕಿಗಳನ್ನು ತೆಗೆಯಲಾಗಲಿಲ್ಲ, ಒಬ್ಬ ಬದಲಿ ಡ್ರೈವರ್ ಲಗ್ಗೇಜುಗಳ ಬದಿಯ ಪೆಟ್ಟಿಗೆಯಲ್ಲಿ ನಿದ್ರಿಸುತ್ತಿದ್ದ, ಪೆಟ್ರೋಲ್ ಶೇಖರಣೆಯ ಟ್ಯಾಂಕು ಕಲ್ಲಿಗೆ ಬಡಿಯಿತು, ಇತ್ಯಾದಿ. ಇವು ಯಾವುವೂ ಜನರ ಗಮನಕ್ಕೆ ಬರದೆ ಇರುವಂಥವಲ್ಲ. ಆದರೆ ಖಾಸಗಿ ಮಾಲೀಕನ ಲಾಭದಾಸೆಯು ಎಲ್ಲವನ್ನೂ ಗೌಣವಾಗಿಸುತ್ತದೆ. ಒಂದೇ ಪರವಾನಗಿ ಪತ್ರ ಇಟ್ಟುಕೊಂಡು ನಾಲ್ಕೈದು ಬಸ್ಸುಗಳನ್ನು ಅದೊಂದರ ಹೆಸರಿನಲ್ಲೇ ಓಡಿಸುತ್ತಿದ್ದರೆ ಅದು ಅಧಿಕಾರಿಗಳಿಗೆ ತಿಳಿಯುವುದಿಲ್ಲವೆ, ತಿಳಿದರೂ ಕಣ್ಣು ಮುಚ್ಚಿರುತ್ತಾರೆ ಏಕೆ ? ಕತ್ತಲಲ್ಲಿ ಅಧಿಕಾರಿಗಳ ಜೇಬಿಗೆ ಹಣ ಸೇರುತ್ತಿರುತ್ತದೆ, ಅದಕ್ಕೆ ! ನನಗೆ ಅಕಲಾಯವಾಗಿ ಹಣ ದಕ್ಕುವಂತಿದ್ದರೆ ಯಾರದೋ ಪ್ರಾಣದ ಕಾಳಜಿ ನನಗೇಕೆ ? ಇದು ನಮ್ಮ ಮಾನವತೆ, ನೀತಿ ಮತ್ತು ಸಂಸ್ಕೃತಿ. ಎರಡಲ್ಲ, ಐದು ಬಸ್ಸು ಸುಟ್ಟರೂ ನಮ್ಮ ಪ್ರಜ್ಞೆಯು ಮಂದವಾಗಿಯೇ ಉಳಿಯುವುದು ಒಂದು ಸೋಜಿಗ. ಕುಟುಂಬಗಳವರು ಅಳುತ್ತಾರೆ, ಒಂದಿಷ್ಟು ಪರಿಹಾರ ಪಡೆಯುತ್ತಾರೆ, ಅದಕ್ಕೂ ಸ್ವಲ್ಪ ಲಂಚ ಕೊಡುತ್ತಾರೆ, ಪತ್ರಿಕೆಗಳಲ್ಲಿ ಚಿತ್ರಗಳನ್ನು ನೋಡುತ್ತೇವೆ, ಒಂದು ಪುಟದಷ್ಟು ಹೇಳಿಕೆಗಳಿರುತ್ತವೆ – ಅವನ್ನೆಲ್ಲಾ ಓದಿಕೊಳ್ಳುತ್ತೇವೆ ಮತ್ತು ಮಾರನೆಯ ದಿನದ ಪತ್ರಿಕೆಗಳಿಗಾಗಿ ಕಾಯುತ್ತೇವೆ. ಎಲಿಯಟ್ ಎಂಬ ಆಂಗ್ಲ ಕವಿ ಒಂದು ಪದ್ಯದಲ್ಲಿ ಹೇಳಿದಂತೆ 'ಜನ ಬಂದು ಪ್ರದರ್ಶನ ನೋಡಿ ಹೋಗುತ್ತಿದ್ದಾರೆ, ಅದು ನಡೆಯುತ್ತಲೇ ಇದೆ.' ಇದೆಂತಹ ಜಡತೆ ಎಂಬುದರ ಸಂಶೋಧನೆ ಆಗಬೇಕಿದೆ. ನಮ್ಮ ಘನ ಸರ್ಕಾರದ ಹಿಂದಿನ ಮತ್ತು ಇಂದಿನ ಮಂತ್ರಿಗಳು ವೋಲ್ವೊ ಬಸ್ಸುಗಳನ್ನು ಆತುರದಿಂದ ಕೊಳ್ಳಲು ತುದಿಗಾಲ ಮೇಲೆ ನಿಂತಿರುತ್ತಾರೆ. ಆ ಕಂಪನಿಗೆ ಭೂಮಿ ಕೊಟ್ಟಾಯಿತು, ಕಂಪನಿಯ ನೌಕರರ ಮೇಲೆ ದಬ್ಬಾಳಿಕೆ ನಡೆಸುವುದನ್ನು ನೋಡಾಯಿತು, ಬಸ್ಸುಗಳನ್ನು ಕೊಂಡಾಯಿತು, ಜೇಬುಗಳನ್ನು ತುಂಬಿಕೊಂಡಾಯಿತು, ಇನ್ನೇನಾಗಬೇಕು ? ಕೆಲಕಾಲ ಜನ ಆ ಬಸ್ಸುಗಳನ್ನು ಹತ್ತದಿದ್ದರೆ ವೋಲ್ವೊ ಬಸ್ಸುಗಳನ್ನು ರಿಯಾಯಿತಿ ದರದಲ್ಲಿ ಮಾರಿ ಮತ್ತೆ ಜೇಬು ತುಂಬಿಕೊಳ್ಳುವ ಕಳ್ಳ–ದುರುಳ–ಅಧಿಕಾರಿಗಳು, ಮಂತ್ರಿಗಳು ಇದ್ದಾರೆ.

ರಾಜ್ಯೋತ್ಸವ ಮಾಸ ಮುಗಿದಿದೆ, ಆದರೂ ಉತ್ಸವದ ಸಭೆಗಳಲ್ಲಿ ಪಾಲ್ಗೊಳ್ಳಲು ಈ ಮಹಾಮಹಿಮರನ್ನು ಕರೆದರೆ ಅವರು ಬರುತ್ತಾರೆ, 'ಜೈ ಕರ್ನಾಟಕ' ಎಂದು ಘೋಷಣೆ ಮೊಳಗಿಸುತ್ತಾರೆ. ಮೋದಿ ಬಂದುಹೋಗಿ ಇದ್ದ ಕತ್ತಲನ್ನು ಹೆಚ್ಚಿಸಿದ್ದಾಗಿದೆ, ಜೊತೆಗೆ ವೋಲ್ವೊ ಪಾತಕಗಳೂ ಇವೆ. "ಇನ್ನೂ ಏನೇನು ಕಾದಿದೆಯೋ ಏನೋ, ಹೃದಯವನ್ನು ಗಟ್ಟಿ ಮಾಡಿಕೊಳ್ಳಿ" ಎಂದು ಮೊನ್ನೆ ಬೆಂಗಳೂರಿನ ಪುರಸಭೆಯೆದುರು ಯಾರೋ ಭಾಷಣ ಕುಟ್ಟುತ್ತಿದ್ದರು. 'ಭಾರತವನ್ನು ಗೆಲ್ಲಿಸಿ' ಎನ್ನುತ್ತಿರುವವರು ಗೆಲ್ಲುವ ಮೊದಲೇ

*(೭ನೇ ಪುಟಕ್ಕೆ)*




ಸಂಪುಟ-೧೫ ಸಂಚಿಕೆ-೫ ಡಿಸೆಂಬರ್ ೨೦೧೩



■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೬೭೪೨೬

■ **ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಮೌಢ್ಯೋದ್ಯಮಿಗಳ ಹುನ್ನಾರ

ರಾಜ್ಯದ ಸುಬ್ರಮಣ್ಯ ಕ್ಷೇತ್ರದ ಪಕ್ಕದ ಹಳ್ಳಿಯಿಂದ ಮತ್ತೊಂದು ಆಘಾತಕರ ಸುದ್ದಿ ಬಂದಿದೆ. ಸಾರಿಕಾ ಎಂಬ ಎರಡು ವರ್ಷದ ಹೆಣ್ಣು ಮಗುವಿನ ತಲೆ ಮತ್ತು ಬಲಗೈಯಿಲ್ಲದ ಮೃತದೇಹ ಸಿಕ್ಕಿದೆ. ಇದು ನಿಧಿಗಾಗಿ ನಡೆದ ನರಬಲಿ ಎಂಬುದು ಸುದ್ದಿ. ಇದೇ ರೀತಿ ರಾಜ್ಯದಲ್ಲಿ ನಿಧಿಗಾಗಿ ಮಕ್ಕಳ ನರಬಲಿ ನಡೆದ ಸಾಕಷ್ಟು ಘಟನೆಗಳ ಉದಾಹರಣೆಗಳಿವೆ. ವಿಜ್ಞಾನ, ನಾಗರಿಕತೆ ಸಾಕಷ್ಟು ಬೆಳೆದ ನಾಡಿನ ಒಡಲಲ್ಲಿಯೇ ನರಬಲಿ ಮತ್ತು ಅಸಂಖ್ಯ ವಿವಿಧ ಮಾದರಿಯ ಮೌಢ್ಯ ಆಚರಣೆಗಳು ನಡೆಯುತ್ತಲೇ ಇವೆ. ಅಮಾಯಕ ಜನ ಇಂಥ ಮೂಢನಂಬಿಕೆಗಳಿಗೆ ಬಲಿಯಾಗುತ್ತಿದ್ದಾರೆ. ಇಂಥ ಅನಾಗರಿಕ ನಂಬಿಕೆಗಳು, ಆಚರಣೆಗಳು ಎಲ್ಲ ಧರ್ಮ, ಜಾತಿಯವರಿಂದಲೂ ನಡೆಯುತ್ತಿವೆ. ಅದರಲ್ಲೂ ಧನವಂತರ ಮೌಢ್ಯಾಚರಣೆಗಳು ಧನಹಾನಿ ಮಾಡುತ್ತವೆ. ಆದರೆ ಬಡವರ ಮೌಢ್ಯಾಚರಣೆಗಳು ಜೀವಹಾನಿಯನ್ನೇ ಮಾಡುತ್ತವೆ. ಧನವಂತರ ಕುಟುಂಬಗಳಲ್ಲಿ ಮಾನಸಿಕ ಕಾಯಿಲೆಗಳಿಗೆ ಮಾನಸಿಕ ತಜ್ಞರ ಚಿಕಿತ್ಸೆಯಾಗುತ್ತದೆ. ಆದರೆ ಬಡವರ, ಗ್ರಾಮೀಣರ ಮಾನಸಿಕ ಅನಾರೋಗ್ಯಗಳನ್ನು ಭೂತ, ದೆವ್ವ ಎಂದು ನಂಬಿ ಅತಿಮಾನುಷ ಶಕ್ತಿಯುಳ್ಳವರೆಂದು ಹೇಳಿಕೊಳ್ಳುವ ವ್ಯಕ್ತಿಯ ಬಳಿ ಹೋಗಿ ರೋಗ ಹೆಚ್ಚಿಸಿಕೊಳ್ಳುತ್ತಾರೆ. ಮಾಟ, ಮಂತ್ರ, ಬೂದಿ, ಪ್ರಸಾದದ ಹುಸಿ ಚಿಕಿತ್ಸೆಗಳಿಗೆ ಬಲಿಯಾಗಿ ಬದುಕನ್ನೇ ಕಳೆದುಕೊಳ್ಳುತ್ತಾರೆ. ಅಸಹಜ ವರ್ತನೆಗಳಿಗೆ ದೈವೀಶಕ್ತಿಯೇ ಪರಿಹಾರವೆಂಬ ವಾತಾವರಣ ನಮ್ಮಲ್ಲಿದೆ. ಇಂಥ ಸಾವಿರಾರು ಮೂಢನಂಬಿಕೆಗಳು ಆಚರಣೆಯಲ್ಲಿ ಇರುವಾಗ ನಾಗರಿಕ ಸಮಾಜವಾಗಲೀ, ಸರಕಾರವಾಗಲೀ ಆ ಕುರಿತು ಚಿಂತಿಸಲೇಬಾರದೆ ? ನಾವು ನಮ್ಮ ಸುತ್ತಲಿನ ಸಾಮಾಜಿಕ, ಮಾನವಿಕ ಪರಿಸರದ ಕುರಿತು ಚಿಂತಿಸಲೇಬಾರದೆ ? ಇಂಥ ಒಂದು ಚಿಂತನೆಯ ಪ್ರಯತ್ನವೇ ಮೂಢನಂಬಿಕೆ ಆಚರಣೆಗಳ ಪ್ರತಿಬಂಧಕ ವಿಧೇಯಕದ ಕರಡು ಸಲ್ಲಿಕೆ. ರಾಷ್ಟ್ರೀಯ ಕಾನೂನು ಶಾಲೆ ಹಾಗೂ ಹಲವಾರು ಸಾಮಾಜಿಕ ಚಿಂತಕರು, ಕಾನೂನು ತಜ್ಞರು ಸೇರಿ ಸರಕಾರಕ್ಕೆ ಸಲ್ಲಿಸಿದ ಈ ಕರಡು ಮಸೂದೆ ಈಗ ರಾಜ್ಯದಲ್ಲಿ ವಿವಾದದಲ್ಲಿದೆ.

ಜನರ ಮೌಢ್ಯವನ್ನೇ ತಮ್ಮ ಬಂಡವಾಳ ಮಾಡಿಕೊಂಡು ಬಿ.ಜೆ.ಪಿ.ಯವರು ಈ ಮಸೂದೆ ಜಾರಿಯಿಂದ ತಮ್ಮ ತಳಪಾಯವೇ ಕುಸಿದಂತೆ ಕೂಗಾಡುತ್ತಿದ್ದಾರೆ. ಇದು ಸಹಜ. ಧಾರ್ಮಿಕ ಮೌಢ್ಯವೇ ಅವರ ತಳಪಾಯವಾದ್ದರಿಂದ ಅವರು ಈ ವಿಷಯದಲ್ಲಿ ಸಮಾಜದ, ಮಾನವಕುಲದ ಆರೋಗ್ಯ ಹಾಳಾದರೂ ಚಿಂತೆಯಿಲ್ಲ ನಂಬಿಕೆಗಳ ಹೆಸರಿನಲ್ಲಿ ಮೂಢನಂಬಿಕೆಗಳನ್ನು ಉಳಿಸಿಕೊಳ್ಳಲು ತನ್ಮೂಲಕ ರಾಜಕಾರಣ ಮಾಡಲು ಹೋರಾಡುತ್ತಾರೆ. ಜಾತ್ಯತೀತ ಜನತಾದಳದ ನಾಯಕರು, ದೇವೇಗೌಡರಾದಿಯಾಗಿ ಈ ಮಸೂದೆಯ ವಿರುದ್ಧ ಕಿರುಚುತ್ತಿದ್ದಾರೆ. ಸ್ವತಃ ಜನತಾದಳದ ನಾಯಕರುಗಳೂ ಹೋಮ, ಹವನ, ಜೋತಿಷ್ಯ, ಮಾಟ–ಮಂತ್ರಗಳಲ್ಲಿ ಅಪಾರ ನಂಬಿಕೆ ಉಳ್ಳವರಾದ್ದರಿಂದ ಅವರಿಗೆ ಜನಾರೋಗ್ಯಕ್ಕಿಂತ ತಮ್ಮ (ಮೌಢ್ಯ) ನಂಬಿಕೆ, ಆ ಮೂಲಕ ಅವರು ಮುನ್ನಡೆಸುತ್ತಿರುವ ಅವರ ಪಕ್ಷ ಮುಖ್ಯ. ಇನ್ನು ಕಾಂಗ್ರೆಸ್‌ನವರು ಮೇಲಿನ ಎರಡೂ ಪಕ್ಷಗಳಿಗೆ ಭಿನ್ನವಾದವರೇನಲ್ಲ. ಮುಖ್ಯಮಂತ್ರಿ ಸಿದ್ದರಾಮಯ್ಯನವರು ಸಮಾಜವಾದಿ ಚಿಂತನೆಯ ವ್ಯಕ್ತಿಯಾಗಿದ್ದರಿಂದ ಇಂಥ ಮಸೂದೆಯನ್ನು ತರಬೇಕೆಂಬ ವಿಚಾರಕ್ಕೆ ಚಾಲನೆ ಸಿಕ್ಕಿತು. ಆದರೆ ಜನಾರ್ಧನ ಪೂಜಾರಿಯಂಥವರು ತಮ್ಮ ಪೂಜಾರಿಕೆಯೇ ಹೋಯಿತು ಎನ್ನುವಂತೆ ವರ್ತಿಸಿ ಇಂಥ ಮಸೂದೆಯ ಜಾರಿಗೆ ಅಡ್ಡಿ ಮಾಡುತ್ತಿದ್ದಾರೆ. ನಮ್ಮ ನಾಡನ್ನು ವೈಜ್ಞಾನಿಕ ಮನೋಭಾವದತ್ತ ತನ್ಮೂಲಕ ಅಭಿವೃದ್ಧಿಯತ್ತ ಕೊಂಡೊಯ್ಯಬೇಕಾದ ಜನನಾಯಕರೇ ಹೀಗಾದರೆ ನಾಡಿನ ಗತಿಯೇನು ?

'ಕಲ್ಲ ನಾಗರ ಕಂಡರೆ ಹಾಲನೆರೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ', " 'ಮಾಟಕೂಟ, ಫಲಪ್ರಾಪ್ತಿ' ಎಂಬ ಮಾತು ಕೇಳಲಾಗದು" ಎಂದು ೧೨ನೇ ಶತಮಾನದಲ್ಲಿಯೇ ಬಸವಣ್ಣನವರು ಹೇಳಿದರು. ಮೌಢ್ಯದ ಕುರಿತು ಅಂದು ಇದ್ದ ಎಚ್ಚರ ಈ ಮಸೂದೆಯನ್ನು ವಿರೋಧಿಸುವ ಇಂದಿನ ಧರ್ಮಗುರುಗಳಿಗೆ ಇಲ್ಲ ಎಂಬುದು ವಾಸ್ತವವಾದರೂ ಇಂದು ಜನರ ಮೂಢನಂಬಿಕೆ ಬಹುತೇಕ ಎಲ್ಲ ಧರ್ಮಗಳ ಧರ್ಮಗುರುಗಳ, ಜಗದ್ಗುರುಗಳ (ಜಗತ್ತು?) ಸ್ವಯಂಘೋಷಿತ ದೇವಮಾನವರ, ಮಂತ್ರವಾದಿಗಳ ಉದರ ಪೋಷಣೆಗೆ, ಅನೈತಿಕ ಸಂಪತ್ತಿನ ಗಳಿಕೆಗೆ ಆಧಾರವಾಗಿದ್ದರಿಂದ ಅವರೆಲ್ಲರಿಗೆ ಜನರಲ್ಲಿ ಮೂಢನಂಬಿಕೆ ಇರಬೇಕು ಮತ್ತು ಬೆಳೆಯಬೇಕು. ಅಂಥವರು ತೀವ್ರವಾಗಿಯೇ ವಿರೋಧಿಸುತ್ತಿದ್ದಾರೆ. ಮೌಢ್ಯಕ್ಕೆ ಬಲಿಯಾದವರೂ ಮೌಢ್ಯದ ಪರವಾಗಿರುತ್ತಾರೆ. ವಿಚಾರವಾದಿಗಳು ಅನಾಥಪ್ರಜ್ಞೆಯನ್ನು ಎದುರಿಸುತ್ತಾರೆ. ರಾಜ್ಯದ ಕೆಲವೇ ಕೆಲವು ಪ್ರಗತಿಪರ ಮಠಾಧೀಶರು ಕರಡು ಮಸೂದೆಯನ್ನು ಸ್ವಾಗತಿಸಿದ್ದಾರೆ.

ಮೂಢನಂಬಿಕೆ ಆಚರಣೆಗಳ ಪ್ರತಿಬಂಧಕ ವಿಧೇಯಕ ಕರಡಿನಲ್ಲಿ ಏನಿದೆ ಎಂಬುದನ್ನರಿಯದೇ ಕೆಲವರು, ನಂಬಿಕೆಗಳನ್ನೇ ಮೂಢನಂಬಿಕೆ ಎನ್ನುತ್ತಿದ್ದಾರೆ ಎಂದು ಉದ್ದೇಶಪೂರ್ವಕವಾಗಿ ಇನ್ನು ಕೆಲವರು ವಿರೋಧಿಸುತ್ತಿದ್ದಾರೆ. ಆದರೆ ವಾಸ್ತವವಾಗಿ ಕರಡು ಮಸೂದೆಯಲ್ಲಿ ಯಾವ ಧರ್ಮವನ್ನೂ ಯಾವ ನಂಬಿಕೆಯನ್ನು ಗುರಿಯಾಗಿಟ್ಟುಕೊಂಡಿಲ್ಲ. ಅದರಲ್ಲಿರುವುದಿಷ್ಟೆ: "(ಜೆ) "ಮೂಢನಂಬಿಕೆ ಆಚರಣೆ" ಎಂದರೆ, ಇನ್ನೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಕಾಯಿಲೆಯನ್ನು ಅಥವಾ ಸಂಕಟವನ್ನು ಪರಿಹರಿಸುವ ಭರವಸೆ ನೀಡಿ ಅಥವಾ ಅವರಿಗೆ ಲಾಭ ಉಂಟಾಗುತ್ತದೆಂದು ತಿಳಿಸಿ ಅಥವಾ

ಪ್ರತಿಕೂಲ ಪರಿಣಾಮ ಉಂಟಾಗುತ್ತದೆಂದು ಹೆದರಿಸಿ ಅತಿಮಾನುಷ ಶಕ್ತಿಯನ್ನು ಆಹ್ವಾನಿಸುವ (ಇಲ್ಲಿ 'ಆಹ್ವಾನಿಸಿದಂತೆ ನಟಿಸುವ' ಎಂದಿರಬೇಕಿತ್ತು.) ಮೂಲಕ ಅವರಿಗೆ –

ಎ) ತೀವ್ರತರವಾದ ದೈಹಿಕ ಅಥವಾ ಮಾನಸಿಕ ಹಾನಿಯನ್ನುಂಟುಮಾಡುವ ಅಥವಾ

ಬಿ) ಹಣಕಾಸಿನ ಅಥವಾ ಯಾವುದೇ ಲೈಂಗಿಕ ಶೋಷಣೆಯನ್ನುಂಟುಮಾಡುವ ಅಥವಾ

ಸಿ) ಮನುಷ್ಯನ ಘನತೆಗೆ ಘಾಸಿಯುಂಟುಮಾಡುವ ಯಾವುದೇ ಕೃತ್ಯ; ಅಥವಾ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕೃತ್ಯ."

ಯಾವುದನ್ನು 'ಮೂಢನಂಬಿಕೆ ಆಚರಣೆ' ಎಂದು ಕರೆಯಬಹುದೆಂದು ಸ್ಪಷ್ಟವಾಗಿ ಇಲ್ಲಿ ಹೇಳಿದೆ. ಇದನ್ನು ಅರ್ಥಮಾಡಿಕೊಳ್ಳದೇ ಅಥವಾ ಅರ್ಥವಾದರೂ ಮುಚ್ಚಿಟ್ಟು ಮಸೂದೆಯನ್ನು ವಿರೋಧಿಸುವ ಮತ್ತು ಅದರ ಹೆಸರಲ್ಲೂ ಜನಾಂಗವನ್ನು ಒಡೆಯುವ ಹುನ್ನಾರ ನಡೆಯುತ್ತಿದೆ. ಇದನ್ನು ಹೊರತುಪಡಿಸಿ ಒಂದು 'ನೀತಿ ನಿರೂಪಣಾ ಪರಿಕಲ್ಪನಾ ಟಿಪ್ಪಣಿ'ಯನ್ನು ಸಮಿತಿ ಸಲ್ಲಿಸಿದೆ. ಪರಿಕಲ್ಪನಾ ಟಿಪ್ಪಣಿ ವಿಧೇಯಕದ ಭಾಗವಲ್ಲ. ಎಲ್ಲ ಪರ – ವಿರೋಧ ಅಭಿಪ್ರಾಯಗಳಂತೆ ಅದೂ ಒಂದು. ಅದೇನೇ ಇದ್ದರೂ ರಾಜಕಾರಣಿ, ರಾಜಕೀಯ ಪಕ್ಷಗಳಾದಿಯಾಗಿ ಮಸೂದೆ ವಿರೋಧಿಗಳೆಲ್ಲ ಮೊದಲು ಮೂಢನಂಬಿಕೆಗಳ ನಿರ್ಮೂಲನೆ ಬೇಕೋ ಬೇಡವೋ ಎಂಬುದನ್ನು ಸ್ಪಷ್ಟಪಡಿಸಲಿ. ಬೇಕು ಎಂಬುದಾದರೆ ಯಾವುದು ನಂಬಿಕೆ, ಯಾವುದು ಮೂಢನಂಬಿಕೆ ಎಂಬುದನ್ನು ಸರಕಾರಕ್ಕೆ ತಿಳಿಸಲಿ. ಈ ಮಸೂದೆ ಮುಖ್ಯಮಂತ್ರಿ, ಕಾನೂನು ಮಂತ್ರಿಗಳ ಮನೆಯಲ್ಲಾಗುವುದಿಲ್ಲ, ಶಾಸನ ಸಭೆಯಲ್ಲಿ ಮಂಡಿಸಿ ಕಾನೂನು ಮಾಡಬೇಕಾಗುತ್ತದೆ. ಆಗ ಅದರಲ್ಲಿ ಆಕ್ಷೇಪಾರ್ಹ ಅಂಶಗಳೇನಾದರೂ ಇದ್ದರೆ ಆಡಳಿತಪಕ್ಷವನ್ನೂ ಒಳಗೊಂಡು ಎಲ್ಲ ಪಕ್ಷಗಳ ಶಾಸಕರಿಗೂ ತಿದ್ದುಪಡಿ ಮಾಡುವ ಅವಕಾಶ ಇದ್ದೇ ಇರುತ್ತದೆ. ಪರಿಕಲ್ಪನಾ ಪಟ್ಟಿಯಲ್ಲಿನ ತಮಗೆ ಒಪ್ಪಿಗೆ ಆಗದ ಅಂಶಗಳನ್ನಿಟ್ಟುಕೊಂಡು ವಿಧೇಯಕವನ್ನೇ ವಿರೋಧಿಸುವುದು ಮೂರ್ಖತನ.

ಮೂಢನಂಬಿಕೆ ನಿರ್ಮೂಲನೆಗಾಗಿ ಕಾನೂನು ಮಾಡಬೇಕಾದಂಥ ಸಂದರ್ಭದಲ್ಲಿ ಅದರ ಕರಡನ್ನು ಸಾರ್ವಜನಿಕರ ಮುಂದಿಡಬೇಕಾದದ್ದು ಸರಕಾರದ ಜವಾಬ್ದಾರಿ. ಈಗಲೂ ಆ ಕೆಲಸವಾಗಲಿ. ಸಮಯಸಾಧಕ, ಮೂಢ ರಾಜಕಾರಣಿಗಳ ಹುನ್ನಾರಕ್ಕೆ ಇಂಥ ಒಂದು ಮಹತ್ವದ ಮಸೂದೆ ಬಲಿಯಾಗಕೂಡದು. ಮೂಢನಂಬಿಕೆಗಳನ್ನೇ ಬಂಡವಾಳ ಮಾಡಿಕೊಂಡು ಮೌಢ್ಯೋದ್ಯಮ ನಡೆಸುತ್ತಿರುವ ಬುರುಡೆ ಬಾಬಾಗಳ ಕುತಂತ್ರ, ಅಪಪ್ರಚಾರಕ್ಕೆ ಇಂಥ ಒಂದು ಐತಿಹಾಸಿಕ ಅವಕಾಶ ತಪ್ಪಬಾರದು. ಎಲ್ಲ ಧರ್ಮಗಳಲ್ಲಿನ, ಜಾತಿಗಳಲ್ಲಿನ ಮೌಢ್ಯತೆಯನ್ನು ತೊಡೆದುಹಾಕಿ ಮಾನವನ ಘನತೆಯನ್ನು ಎತ್ತಿ ಹಿಡಿಯಲು ಸರಕಾರ ಬದ್ಧವಾಗಬೇಕು. ಇಂಥ ಕಾರ್ಯಕ್ಕೆ ನರೇಂದ್ರ ದಾಭೋಲ್ಕರ್ ಅವರಂಥ ಸಾಕಷ್ಟುಜನ ತಮ್ಮ ಜೀವ ತೆತ್ತಿದ್ದಾರೆ. ರಾಜ್ಯದ ಪ್ರಜ್ಞಾವಂತರು ಈ ಮಸೂದೆಯ ಉದ್ದೇಶ, ಗುರಿಯನ್ನು ಅರ್ಥಮಾಡಿಕೊಂಡು ಅಭಿಪ್ರಾಯ, ಚಳುವಳಿ, ಹೋರಾಟಗಳ ಮೂಲಕ ಸರಕಾರದ ಮೇಲೆ ಒತ್ತಡ ತರಲಿ. ಇಂಥ ಮಸೂದೆ ತರಬೇಕೆನ್ನುವ ಸರಕಾರದ ಒಳಗಿನ, ಹೊರಗಿನ ವ್ಯಕ್ತಿ, ಶಕ್ತಿಗಳ ಕೈ ಬಲಪಡಿಸಲಿ.

ಸಿದ್ದನಗೌಡ ಪಾಟೀಲ

## ವಿಶ್ವಾಸ ಮೂಡಿಸುವಂಥ ಸಿಬಿಐ ವ್ಯವಸ್ಥೆ ರೂಪುಗೊಳ್ಳಲಿ

ಈಚಿನ ದಿನಗಳಲ್ಲಿ ಸದಾ ಸುದ್ದಿಯಲ್ಲಿರುವ ಒಂದು ಸಂಸ್ಥೆ ಎಂದರೆ ಸಿಬಿಐ – ಕೇಂದ್ರ ತನಿಖಾ ಸಂಸ್ಥೆ. ದೇಶದ ಯಾವುದೇ ಮೂಲೆಯಲ್ಲಿ ಸಂಭವಿಸುವ ದುರ್ಘಟನೆ, ಭ್ರಷ್ಟಾಚಾರ, ಕೊಲೆ, ಅತ್ಯಾಚಾರ ಇತ್ಯಾದಿಗಳಿಗೆ ಸಿಬಿಐ ತನಿಖೆಗೆ ಒತ್ತಾಯ ಬರುತ್ತಿರುತ್ತದೆ. ನಿಷ್ಪಕ್ಷಪಾತ ತನಿಖೆ ಈ ಸಿಬಿಐ ಸಂಸ್ಥೆಯಿಂದ ಸಾಧ್ಯ ಎಂಬ ನಂಬಿಕೆಯೇ ಇದಕ್ಕೆ ಕಾರಣ. ಆದರೆ ಈ ಸಂಸ್ಥೆಯು ಅಷ್ಟೇ ವಿವಾದಾಸ್ಪದವೂ ಆಗಿದೆ. ಕೇಂದ್ರ ಸರಕಾರದ ಅಧೀನದಲ್ಲಿರುವ ಈ ತನಿಖಾ ಸಂಸ್ಥೆ ಎಷ್ಟು ಸ್ವತಂತ್ರವಾಗಿದೆ? ಇದು ಪ್ರಶ್ನೆಯಾಗಿಯೇ ಉಳಿಯುತ್ತದೆ? ಅಧಿಕಾರದಲ್ಲಿರುವ ಸರ್ಕಾರದ ಮರ್ಜಿಗೆ, ಆದೇಶಕ್ಕೆ ತಕ್ಕ ಹಾಗೆ ಈ ಸಂಸ್ಥೆಯ ಅಧಿಕಾರಿಗಳು ನಡೆದುಕೊಳ್ಳುತ್ತಾರೆ ಎಂಬ ಆರೋಪ ಇದೆ. ಇದು ತಕ್ಕಮಟ್ಟಿಗೆ ನಿಜವೂ ಹೌದು. ಮುಖ್ಯವಾಗಿ ಸರಕಾರದ ಅವ್ಯವಹಾರಗಳು, ಭ್ರಷ್ಟಾಚಾರದ ತನಿಖೆ ವಿಚಾರದಲ್ಲಿ ಹಸ್ತಕ್ಷೇಪ ಇಲ್ಲದೇ ಹೋಗಿಲ್ಲ. ಹಾಗಾಗಿ ಸಿಬಿಐ ತನಿಖೆ ಎಷ್ಟು ನಿಷ್ಪಕ್ಷಪಾತ ಎಂಬುದೇ ಪ್ರಶ್ನೆ. ಸರಕಾರದ ಆಜ್ಞೆಯ ಮೇರೆಗೆ, ಅನುಮತಿಯ ಮೇರೆಗೆ ಸಿಬಿಐ ಪ್ರಕರಣದ ತನಿಖೆಯನ್ನು ಕೈಗೆತ್ತಿಕೊಳ್ಳುತ್ತದೆಯೇ ಹೊರತು ಸ್ವಪ್ರೇರಣೆಯಿಂದಲ್ಲ. ಕೆಲವೊಮ್ಮೆ ನ್ಯಾಯಾಲಯದ ಆದೇಶದ ಮೇರೆಗೆ ಅದು ನಡೆದುಕೊಳ್ಳಬಹುದು. ಇದು ಸಿಬಿಐನ ಈಗಿನ ಸ್ಥಿತಿ. ಇದು ಅಂತ್ಯಗೊಂಡು ಸಿಬಿಐ ಸ್ವತಂತ್ರ ತನಿಖಾ ಸಂಸ್ಥೆಯಾಗಬೇಕು. ಸರಕಾರದ ಹಸ್ತಕ್ಷೇಪದಿಂದ ಮುಕ್ತವಾಗಿರಬೇಕು ಎಂಬುದೇ ಜನಸಾಮಾನ್ಯರ ಅಪೇಕ್ಷೆ. ಇದು ಅಗತ್ಯವೂ ಹೌದು. ಏಕೆಂದರೆ ಇತ್ತೀಚಿನ ಹಗರಣಗಳ ತನಿಖೆಯ ವಿಚಾರದಲ್ಲಿ, ಮುಖ್ಯವಾಗಿ ಕಲ್ಲಿದ್ದಲು ಹಗರಣಗಳ ವಿಷಯದಲ್ಲಿ ಸರಕಾರದ ಹಸ್ತಕ್ಷೇಪ ಎದ್ದು ಕಾಣುವಂಥದ್ದು. ಪ್ರಕರಣವೊಂದರ ತನಿಖೆಯನ್ನು ಸಿಬಿಐಗೆ ವಹಿಸಿಕೊಟ್ಟ ಮೇಲೆ ಸರಕಾರದ ಹಸ್ತಕ್ಷೇಪಕ್ಕೆ ಅವಕಾಶವಿಲ್ಲದ ಹಾಗೆ ಸಿಬಿಐ ರೂಪುಗೊಳ್ಳಬೇಕು.

ಅಂಥ ಪುನರ್‌ರಚನೆಗೆ ಈಗ ಕಾಲ ಬಂದಿದೆ. ಗೌಹಾತಿ ಉಚ್ಚ ನ್ಯಾಯಾಲಯದ ತೀರ್ಪು ಸಿಬಿಐ ಕ್ರಮಬದ್ಧವಾಗಿ




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೫/- |
| ವಾರ್ಷಿಕ ಚಂದಾ | ರೂ. ೨೦೦/- |
| ಮೂರು ವರ್ಷಕ್ಕೆ | ರೂ. ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
☎ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಸ್ಥಾಪಿತವಾಗಿರುವ ಸಂಸ್ಥೆಯಲ್ಲ ಎಂದು ಸಾರಿದ ಬಳಿಕ ಈ ಪ್ರಶ್ನೆ ಉದ್ಭವಿಸಿದೆ. ದೇಶದ ಸರ್ವೋಚ್ಚ ನ್ಯಾಯಾಲಯ ನೀಡಿರುವ ತಡೆಯಾಜ್ಞೆಯಿಂದ ಸದ್ಯಕ್ಕೆ ಸಿಬಿಐ ಉಳಿದುಕೊಂಡಿದೆ. ಸಿಬಿಐ ಅಸ್ತಿತ್ವಕ್ಕೆ ಬಂದಿದ್ದು ೧೯೬೩ರಲ್ಲಿ ಕೇಂದ್ರ ಸರಕಾರದ ಗೃಹ ಸಚಿವಾಲಯ ಅಂಗೀಕರಿಸಿದ ನಿರ್ಣಯ ಒಂದರಿಂದ. ೧೯೪೧ರಲ್ಲಿ ಬ್ರಿಟಿಷ್ ಸರಕಾರ ಭ್ರಷ್ಟಾಚಾರ ತಡೆಗಟ್ಟಲು ವಿಶೇಷ ಪೊಲೀಸ್ ವ್ಯವಸ್ಥೆಯೊಂದನ್ನು ಸ್ಥಾಪಿಸಿತು. ೧೯೪೬ರಲ್ಲಿ ದೆಹಲಿ ವಿಶೇಷ ಪೊಲೀಸ್ ವ್ಯವಸ್ಥೆ ಕಾಯಿದೆ ಪ್ರಕಾರ ಅದು ಶಾಸನಬದ್ಧವಾಯಿತು. ೧೯೬೩ರಲ್ಲಿ ಅದು ಸಿಬಿಐಗೆ ವರ್ಗಾವಣೆ ಯಾಯಿತು. ಇಷ್ಟು ವರ್ಷಗಳು ಕಾರ್ಯ ನಿರ್ವಹಿಸುತ್ತ ಬಂದಿರುವ ಸಿಬಿಐ ಈಗ ಗೌಹಾತಿ ಉಚ್ಚ ನ್ಯಾಯಾಲಯದ ತೀರ್ಪಿನಿಂದಾಗಿ ಅತಂತ್ರ ಸ್ಥಿತಿಯಲ್ಲಿದೆ.

ಸರ್ವೋಚ್ಚ ನ್ಯಾಯಾಲಯದ ತಡೆಯಾಜ್ಞೆ ಇರುವವರೆಗೆ ಅದರ ಅಸ್ತಿತ್ವ ಹಾಗೂ ಕಾರ್ಯಗಳಿಗೆ ಚ್ಯುತಿ ಇಲ್ಲ. ಹಾಗಾಗಿ ಅದನ್ನು ಸಂವಿಧಾನಬದ್ಧವಾದ ವ್ಯವಸ್ಥೆಯಾಗಿ ರೂಪಿಸುವ ಅಗತ್ಯತೆ ಉಂಟಾಗಿದೆ. ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಪೊಲೀಸ್ ವ್ಯವಸ್ಥೆ ಸಂಪೂರ್ಣವಾಗಿ ಸರಕಾರದ ನಿಯಂತ್ರಣದಲ್ಲಿದೆ. ಆಡಳಿತದಲ್ಲಿರುವ ಪಕ್ಷವು ಪೊಲೀಸ್ ಪಡೆಯನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಳ್ಳುವುದು ವಾಡಿಕೆಯಾಗಿಬಿಟ್ಟಿದೆ. ಪೊಲೀಸ್ ಅಧಿಕಾರಿಗಳ ವರ್ಗಾವಣೆ ವಿಚಾರದಲ್ಲಿ ಶಾಸಕರು ಮೂಗು ತೂರಿಸುವುದನ್ನು ನೋಡಿದ್ದೇವೆ. ಅಂಥ ಸ್ಥಿತಿ ಸಿಬಿಐಗೆ ಬರಕೂಡದು. ಅದು ಸ್ವತಂತ್ರ ಸ್ವಾಯತ್ತ ಸಂಸ್ಥೆಯಾಗಿ ರೂಪುಗೊಳ್ಳಬೇಕಾಗಿದೆ. ಸರಕಾರ ಆ ದಿಶೆಯಲ್ಲಿ ಕ್ರಮಕೈಗೊಂಡು ಜನತೆಯಲ್ಲಿ ವಿಶ್ವಾಸ ಮೂಡುವಂತೆ ಮಾಡಬೇಕು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸುಭದ್ರತೆ ಕಾಪಾಡಲು, ಅಕ್ರಮ ವ್ಯವಹಾರ, ಭ್ರಷ್ಟಾಚಾರಗಳಿಗೆ ಕಡಿವಾಣ ಹಾಕಲು ಇದು ಅಗತ್ಯ. ಸಾರ್ವಜನಿಕರಲ್ಲಿ ವಿಶ್ವಾಸ ಉಂಟುಮಾಡುವಂಥ ಮುಕ್ತವಾದ ತನಿಖಾ ವ್ಯವಸ್ಥೆ ನಿರ್ಮಾಣವನ್ನು ಅಪೇಕ್ಷಿಸೋಣ.

## ವಿದೇಶಿ ಮತ್ತು ಖಾಸಗಿ ಬ್ಯಾಂಕ್‌ಗಳ ಅನಾವರಣ

**ಭಾ**ರತದ ಸಂವಿಧಾನದ ಮುನ್ನುಡಿಯ ಆಶಯಗಳು ಸಂವಿಧಾನವನ್ನು ಅರ್ಥೈಸುವಲ್ಲಿ ಬಹಳ ಪ್ರಮುಖ ಅಂಶಗಳೆಂದು ದೇಶದ ಸರ್ವೋಚ್ಚ ನ್ಯಾಯಾಲಯ ತನ್ನ ಹಲವಾರು ತೀರ್ಪುಗಳಲ್ಲಿ ವ್ಯಾಖ್ಯಾನಿಸಿದೆ. ಈ ಆಶಯಗಳಲ್ಲಿ ಸಮಾಜವಾದಿ ವ್ಯವಸ್ಥೆಯ ಸ್ಥಾಪನೆಯೂ ಒಂದು. ಕೇಂದ್ರ ಮತ್ತು ರಾಜ್ಯಗಳಲ್ಲಿ ಅಧಿಕಾರಕ್ಕೇರುವ ರಾಜಕೀಯ ಪಕ್ಷಗಳು ಸಂವಿಧಾನದ ಆಶಯಗಳನ್ನು ಸಾಕಾರಗೊಳಿಸಬೇಕಾದದ್ದು ಅವುಗಳ ಕರ್ತವ್ಯ ಹಾಗೂ ಜವಾಬ್ದಾರಿ. ೧೯೯೨ರ ನಂತರ ಕೇಂದ್ರ ಸರ್ಕಾರದ ಅಧಿಕಾರ ಹಿಡಿದ ರಾಜಕೀಯ ಪಕ್ಷಗಳಾದ ಕಾಂಗ್ರೆಸ್, ಭಾರತೀಯ ಜನತಾ ಪಕ್ಷ ಮತ್ತು ಇವುಗಳ ಮೈತ್ರಿಕೂಟ ಪಕ್ಷಗಳು (ಎಡ ಪಕ್ಷಗಳನ್ನು ಹೊರತುಪಡಿಸಿ) ಸಂವಿಧಾನದ ಆಶೋತ್ತರಗಳಿಗೆ ವಿರುದ್ಧವಾಗಿ ನಡೆದುಕೊಂಡು ಬರುತ್ತಿರುವುದು ಎದ್ದು ಕಾಣುತ್ತಿದೆ. ಬಂಡವಾಳಶಾಹಿ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ನೀತಿ ಮತ್ತು ಪ್ರಕ್ರಿಯೆಗಳು ಸಂವಿಧಾನದ ಗೊತ್ತು – ಗುರಿಗಳನ್ನು ಬುಡಮೇಲು ಮಾಡಿವೆ. ಕಡಿವಾಣವಿಲ್ಲದ ಖಾಸಗಿ ಕ್ಷೇತ್ರ ಅಪರಿಮಿತ ಅಸಮಾನತೆ ಹುಟ್ಟುಹಾಕಿದೆಯೆಂದು ಅನೇಕ ಆರ್ಥಿಕ ತಜ್ಞರ ಅಭಿಪ್ರಾಯ. ಖಾಸಗಿ ಬಂಡವಾಳದ ವರ್ಗದ ಗುಣವೇ ಅದು. ೧೯೬೯ರ ಬ್ಯಾಂಕ್ ರಾಷ್ಟ್ರೀಕರಣದ ಮುಂಚಿನ ಸನ್ನಿವೇಶ ಇದಕ್ಕೊಂದು ಉದಾಹರಣೆ. ೧೯೫೧ರಿಂದ ೧೯೬೮ರ ಅವಧಿಯಲ್ಲಿ ಅಂದಿನ ಖಾಸಗಿ ಬ್ಯಾಂಕ್‌ಗಳು ಕೈಗಾರಿಕೆಗಳಿಗೆ ನೀಡಿದ ಸಾಲ ಅವುಗಳ ಒಟ್ಟು ಸಾಲದ ಶೇ. ೩೪ರಿಂದ ಶೇ. ೬೮ಗೆ ಏರಿದರೆ, ಇದೇ ಅವಧಿಯಲ್ಲಿ ಈ ಬ್ಯಾಂಕ್‌ಗಳು ಕೃಷಿ ಕ್ಷೇತ್ರಕ್ಕೆ ಕೊಟ್ಟ ಸಾಲ ಶೇ. ೨ ಮಾತ್ರ. ಪ್ರಾದೇಶಿಕ ಅಸಮಾನತೆ, ಗ್ರಾಮ – ನಗರಗಳ ನಡುವಿನ ಅಸಮಾನತೆ, ಕೈಗಾರಿಕೆ – ಕೃಷಿಗೆ ನೀಡುವ ನೆರವಿನಲ್ಲಿ ಅಸಮಾನತೆ, ಒಟ್ಟಾರೆ ಬಂಡವಾಳದ ವಿತರಣೆಯಲ್ಲಿದ್ದ ಅಸಮಾನತೆಯೇ ಖಾಸಗಿ ಬ್ಯಾಂಕ್‌ಗಳ ರಾಷ್ಟ್ರೀಕರಣಕ್ಕೆ ಪ್ರಮುಖ ಕಾರಣವಾಯಿತು.

ವಿತ್ತ ಕ್ಷೇತ್ರದ ಬೆಳವಣಿಗೆಯ ಭಾಗವಾದ ಬ್ಯಾಂಕಿಂಗ್ ಉದ್ದಿಮೆಯ ಚರಿತ್ರೆ ಕೈಗಾರಿಕಾ ಬಂಡವಾಳದ ಚರಿತ್ರೆಯಷ್ಟೇ ಹಳೆಯದು. ಅನೇಕ ಹಂತಗಳನ್ನು ದಾಟಿ ಈಗ ಇದು ಬೃಹತ್ ಉದ್ದಿಮೆಯಾಗಿ ಬೆಳೆದು ನಿಂತಿದೆ. ಬ್ಯಾಂಕ್‌ಗಳ ವಾರ್ಷಿಕ ಬೆಳವಣಿಗೆಯ ದರ ಶೇ. ೨೩ರಷ್ಟಾದರೆ ಇವು ರಾಷ್ಟ್ರೀಯ ಒಟ್ಟು ಉತ್ಪನ್ನಕ್ಕೆ ಶೇ. ೮ ಪಾಲು ನೀಡಿರುವುದು ಮತ್ತು ಸುಮಾರು ೧೧ ಲಕ್ಷಕ್ಕೂ ಮೀರಿ ಉದ್ಯೋಗಗಳನ್ನು ಸೃಷ್ಟಿಸಿರುವುದನ್ನು ಗಮನಿಸಿದಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಬ್ಯಾಂಕಿಂಗ್ ಉದ್ಯಮದ ಮಹತ್ತರ ಪಾತ್ರದ ಅರಿವಾಗುತ್ತದೆ. ಈ ಅಭಿವೃದ್ಧಿಯ ಶ್ರೇಯ ಸ್ಟೇಟ್ ಬ್ಯಾಂಕ್ ಮತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳಿಗೆ ಸಲ್ಲಬೇಕು. ೨೦೦೮ರಲ್ಲಿ ಅಮೆರಿಕದ ಲೇಮನ್ ಬ್ರದರ್ಸ್, ಫ್ರೆಡಿ ಮ್ಯಾಕ್ ಇತ್ಯಾದಿ ಖಾಸಗಿ ಬ್ಯಾಂಕ್‌ಗಳು ದಿವಾಳಿಯಾಗಿ ಅಮೆರಿಕದ ಮತ್ತು ವಿಶ್ವದ ಅನೇಕ ದೇಶಗಳ ಆರ್ಥಿಕ ವ್ಯವಸ್ಥೆಯನ್ನು ಅಲ್ಲೋಲಕಲ್ಲೋಲಗೊಳಿಸಿ ವಿತ್ತ ಬಂಡವಾಳದ ನಿರಂಕುಶ ಹಾಗೂ ಅರಾಜಕ ಗುಣವನ್ನು ಪರಿಚಯಿಸಿತು. ಭಾರತದ ವಿತ್ತ ಕ್ಷೇತ್ರದ ಮೇಲೆ ಇದರ ದುಷ್ಪರಿಣಾಮ ತೀವ್ರವಾಗಿ ಬೀರದಂತೆ ತಡೆದದ್ದು ಈ ದೇಶದ ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳು, ಸ್ಟೇಟ್ ಬ್ಯಾಂಕ್‌ಗಳು ಮತ್ತು ವಿಮಾ ಕಂಪನಿಗಳೆಂಬುದು ಸಾಬೀತಾದ ವಿಷಯ. ಇದನ್ನು ಕೇಂದ್ರದ ವಿತ್ತಮಂತ್ರಿ ಚಿದಂಬರಂ ಕೂಡ ಹಿಂಸೆಪಟ್ಟು ಒಪ್ಪಿಕೊಳ್ಳ ಬೇಕಾಯಿತು. ೨೦೦೮ರ ಆರ್ಥಿಕ ಸಂಕಟಕ್ಕೆ ತನ್ನ ಕಾಣಿಕೆಯನ್ನು ಧಾರಾಳವಾಗಿ ನೀಡಿದ್ದ ಅಮೆರಿಕದ ಜೆ. ಪಿ. ಮಾರ್ಗನ್ ಚೇಸ್ ಕಂಪನಿಯು ಸಿವಿಲ್ ಮೊಕದ್ದಮೆಯಲ್ಲಿ ಇತ್ತೀಚೆಗೆ ೧೩ ಬಿಲಿಯನ್ ಡಾಲರ್ಸ್ ಪರಿಹಾರ ಕೊಟ್ಟದ್ದು ಖಾಸಗಿ ಬ್ಯಾಂಕ್‌ಗಳು ನಿರಂತರವಾಗಿ ನಡೆಸುವ ದುರ್ವ್ಯವಹಾರಗಳಿಗೊಂದು ನಿದರ್ಶನ.

ಸ್ಟೇಟ್ ಬ್ಯಾಂಕ್‌ಗಳು, ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳು ಮತ್ತು ವಿಮಾ ಕಂಪನಿಗಳೂ ಈ ದೇಶದ ಆರ್ಥಿಕ ವ್ಯವಸ್ಥೆಯ ಸಮತೋಲನವನ್ನು ಮಹತ್ತರ ಪಾತ್ರವನ್ನು ವಹಿಸಿದ್ದರೂ ಕೇಂದ್ರ ಸರ್ಕಾರ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಆರ್ಥಿಕ ಕ್ಷೇತ್ರದ ಸುಧಾರಣೆಗಳ ನೆಪದಲ್ಲಿ ಈ ಕ್ಷೇತ್ರದ ಬ್ಯಾಂಕ್‌ಗಳನ್ನು ಖಾಸಗೀಕರಣದ ಹಾದಿಯಲ್ಲಿ ಕೊಂಡೊಯ್ಯುತ್ತಿದೆ. ೧೯೯೨ರ ನಂತರ ಸುಮಾರು ೩೦ ವಿದೇಶಿ ಬ್ಯಾಂಕ್‌ಗಳು ಭಾರತದಲ್ಲಿ ನೆಲೆಯೂರಿವೆ ಮತ್ತು ವ್ಯವಹಾರ ನಡೆಸುತ್ತಿವೆ. ಇಷ್ಟು ಸಾಲದೆಂಬಂತೆ ಜನವರಿ ೨೦೧೪ರಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಕೈಗಾರಿಕೋದ್ಯಮಿಗಳಿಗೆ ತಮ್ಮದೇ ಆದ ಖಾಸಗಿ ಬ್ಯಾಂಕ್‌ಗಳನ್ನು ಸ್ಥಾಪಿಸಲು ಪರವಾನಗಿ ನೀಡಲು ಎಲ್ಲ ತಯಾರಿ ನಡೆಸಿದೆ. ಅಂದರೆ ಇನ್ನು ಮುಂದೆ ಟಾಟಾ, ಬಿರ್ಲಾ, ಅಂಬಾನಿ ಹೀಗೆ ಹಲವಾರು ಭಾರಿ ಶ್ರೀಮಂತ ವಾಣಿಜ್ಯೋದ್ಯಮಿಗಳು ತಮಗೆ ಅಗತ್ಯವಾದ ಬಂಡವಾಳವನ್ನು ತಾವೇ ಸಂಗ್ರಹಿಸಲು ಮತ್ತು ಅದನ್ನು ತಮ್ಮ ವೈಯಕ್ತಿಕ ಲಾಭಕ್ಕಾಗಿ ಬಳಸಲು ಅನುವು ಮಾಡಿಕೊಡುವಂತಹ ಖಾಸಗಿ ಬ್ಯಾಂಕ್‌ಗಳು ಹುಟ್ಟಲಿವೆ. ಹಾಗೆಯೇ ವಿದೇಶಿ ಬ್ಯಾಂಕ್‌ಗಳು ಈ ದೇಶದ ಸ್ಥಳೀಯ ಬ್ಯಾಂಕ್‌ಗಳನ್ನು ಖರೀದಿಸಿದಲ್ಲಿ ಅಂತಹ ವಿದೇಶಿ ಬ್ಯಾಂಕ್‌ಗಳಿಗೆ ರಾಷ್ಟ್ರೀಯ ಬ್ಯಾಂಕ್‌ಗಳ ಸ್ಥಾನ–ಮಾನ ನೀಡಲಾಗುವುದೆಂದು ರಿಸರ್ವ್ ಬ್ಯಾಂಕ್‌ನ ರಾಜ್ಯಪಾಲ ರಘುರಾಮ್ ರಾಜನ್ ಅಮೆರಿಕದಲ್ಲಿ ಹೇಳಿಕೆ ನೀಡಿದ್ದಾರೆ. ಕಾಲಚಕ್ರವನ್ನು ಹಿಂದಕ್ಕೆ ಸರಿಸುವ ಪ್ರಯತ್ನವೇ ಇದು. ವಿತ್ತ ಕ್ಷೇತ್ರದ ಲಗಾಮು ರಿಸರ್ವ್ ಬ್ಯಾಂಕ್ ಕೈಲಿರುವುದರಿಂದ ಖಾಸಗಿ ಮತ್ತು ವಿದೇಶಿ ಬ್ಯಾಂಕ್‌ಗಳು ತಮ್ಮ ನಿಯಂತ್ರಣದಲ್ಲಿರುತ್ತವೆ ಎಂಬ ಇವರ ಹೇಳಿಕೆ ಕೇವಲ ವಂಚನೆಯ ಮಾತುಗಳಷ್ಟೆ. ಏಕೆಂದರೆ ಆಳುವ ವರ್ಗ ಇಡೀ ದೇಶವನ್ನೇ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಗೆ ಒತ್ತೆಯಿಟ್ಟಿರುವಾಗ ಈ ಹೇಳಿಕೆಗಳು ಅರ್ಥರಹಿತ. "ಯಾರಿಗೆ ಬಂತು, ಎಲ್ಲಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ; ಟಾಟಾ ಬಿರ್ಲರ ಜೇಬಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ" ಎಂಬ ಬಂಡಾಯದ ಹಾಡು ನಮ್ಮ ಕಿವಿಗಳಿಗೆ ಅಪ್ಪಳಿಸಿ ಎಚ್ಚರಿಸುತ್ತಿದೆ. ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳ ಮತ್ತು ವಿಮಾ ಕಾರ್ಪೊರೇಷನ್‌ಗಳ ಉಳಿವಿಗಾಗಿ ನಿರಂತರ ಹೋರಾಟಗಳನ್ನು ನಡೆಸುತ್ತಿರುವ ಬ್ಯಾಂಕ್ ಮತ್ತು ವಿಮಾ ನೌಕರರ ಸಂಘಟನೆಗಳಿಗೆ ಇಡೀ ಕಾರ್ಮಿಕ ವರ್ಗ ಸ್ಪಂದಿಸಿ ಕೈಜೋಡಿಸಬೇಕಾಗಿದೆ. ಸಮಸಮಾಜದ ಸೃಷ್ಟಿಯೇ ಹೋರಾಟಗಳ ಗುರಿಯಾಗಬೇಕಾಗಿದೆ.

*ಈ ತಿಂಗಳು (೩ನೇ ಪುಟದಿಂದ)*

ಇಷ್ಟು ಕತ್ತಲೆ, ಇನ್ನು ಅವರು ಗೆದ್ದರೆ ಗಾಢಾಂಧಕಾರ ಹೇಗಿರಬಹುದು! ಭಾರತ ಗೆಲ್ಲಬೇಕು, ಆದರೆ 'ಗೆಲ್ಲಿಸಿ' ಎಂದು ಬೆದರಿಸುತ್ತಿರುವವರನ್ನು ಸೋಲಿಸಿ ಭಾರತವನ್ನು ಗೆಲ್ಲಿಸಬೇಕು. ವೋಲ್ವೊ ಬಸ್ಸುಗಳನ್ನು ಸ್ವೀಡನ್ನಿಗೆ ಹಿಂದಿರುಗಿಸಿದರೂ ದುರಂತಗಳ ಸರಮಾಲೆ ಉಳಿದಿರುತ್ತವೋ ಏನೋ. ವೋಲ್ವೊ ಹೋದರೇನು, ನಾವಿದ್ದೇವಲ್ಲ, ಎನ್ನುವ ಭೀಕರ ಜನ ಇದ್ದಾರೆ: ವೋಲ್ವೊ ಬೇರೆಯಲ್ಲ, ಮೋದಿ ಬೇರೆಯಲ್ಲ. ಪೆಟ್ರೋಲ್ ಟ್ಯಾಂಕ್ ಸಿಡಿಯುತ್ತದೆ, ಎಚ್ಚರ, ಎಂದು ಮೋಡಿಯ ಮೋದಿ ಹೇಳಿಹೋಗಿದ್ದಾರೆ, ಎಚ್ಚರವಿರಲಿ.

✶ ✶ ✶

ಮುಂಬೈನ ಕ್ಯಾಂಪ ಕೋಲ ಬಹು ಅಂತಸ್ತಿನ ಮಹಡಿ ಮನೆಗಳನ್ನು ಕೊಂಡು ಅಲ್ಲಿ ವಾಸಿಸುತ್ತಿರುವವರು ಅನಕ್ಷರಸ್ಥರಲ್ಲ, ದಿನಕ್ಕೆ ಕೇವಲ ೨೦ ರೂಪಾಯಿಗಳ ಆದಾಯ ಉಳ್ಳವರಲ್ಲ. ಕಡಿಮೆ ಬೆಲೆಗೆ ಸಿಕ್ಕಿತೆಂದು ಮುಸಿಮುಸಿ ನಗುತ್ತಾ ಫ್ಲಾಟ್‌ಗಳನ್ನು ಕೊಂಡ ಈ ಮಂದಿಗೆ ಆಗಲೇ ತಿಳಿದಿತ್ತು ಆ ಕಟ್ಟಡವು ಕಾನೂನು ಉಲ್ಲಂಘಿಸಿ ಕಟ್ಟಿದ್ದೆಂದು. ಮನೆಗಳನ್ನು ಮಾರಿದವನು ಕೋಟಿಗಟ್ಟಲೆ ರೂಪಾಯಿಗಳ ಲಂಚ ನೀಡಿರುತ್ತಾನೆ, ಅದರ ಲಾಭ ನಮಗೂ ಸ್ವಲ್ಪ ಇರಲಿ, ಎಂದುಕೊಂಡೇ ಮನೆಗಳನ್ನು ಖರೀದಿಸಿರುವವರು ಇವರು. ಕಾನೂನು ಪಾಲಿಸಬೇಕಾದ ಅಧಿಕಾರಿಗಳ ಮತ್ತು ಮಂತ್ರಿಗಳ ಕಣ್ಣಿಗೆ ಬೀಳದೆ ರಾತ್ರೋರಾತ್ರಿ ನಿರ್ಮಾಣಗೊಂಡ ಪಾರ್ಕುಗಳಲ್ಲಿನ ಬೇರೆ ಬೇರೆ ಧರ್ಮಗಳವರ ಪೂಜಾಸ್ಥಾನವಲ್ಲ ಈ ಕಟ್ಟಡ. ಹಲವು ವರ್ಷಗಳ ಕಾಲ ಎಲ್ಲರ ಮೂಗಿನಡಿಯಲ್ಲೇ ಕಟ್ಟಲಾದ ಬೃಹತ್ ಕಟ್ಟಡ ಇದು.

ದೆಹಲಿಯಲ್ಲಿರುವ ಸರ್ವೋಚ್ಚ ನ್ಯಾಯಾಲಯಕ್ಕೂ ಇದು ತಿಳಿದಿದೆ. ಆದರೆ, ಪಾಪ, ಅಲ್ಲಿಯ ನ್ಯಾಯಮೂರ್ತಿಯೊಬ್ಬರಿಗೆ ಇಡೀ ರಾತ್ರಿ ನಿದ್ದೆ ಬರಲಿಲ್ಲವಂತೆ. ಕ್ಯಾಂಪ ಕೋಲದ ನಿವಾಸಿಗಳು ಬೀದಿಗೆ ಬೀಳುತ್ತಾರಲ್ಲ, ಎಂಬುದು ಅವರ ಚಿಂತೆಯಾಗಿತ್ತಂತೆ. ಕಟ್ಟಡವು ಕಾನೂನುಬಾಹಿರವಾಗಿ ನಿರ್ಮಾಣಗೊಂಡಿದೆಯಾದ್ದರಿಂದ ಅದನ್ನು ಒಡೆದುಹಾಕಿ ಎಂದಿದ್ದದ್ದೂ ಇದೇ ಸರ್ವೋಚ್ಚ ನ್ಯಾಯಾಲಯ. ಆಗ ಅಲ್ಲಿ ಯಾರಿಗೂ ನಿದ್ರಾದೇವಿಯ ಆಲಿಂಗನ ತಪ್ಪಿಹೋಗಿರಲಿಲ್ಲ. ಒಂದಲ್ಲ ಎರಡಲ್ಲ, ೧೦೨ ಅನಧಿಕೃತ ಫ್ಲಾಟ್‌ಗಳನ್ನು ಹೊಂದಿರುವ ವಸತಿ ಸಂಕೀರ್ಣ ಈ ಕ್ಯಾಂಪ ಕೋಲ. ಅಲ್ಲಿರುವವರ ಬಗೆಗಿನ ಸಾಂತ್ವನವನ್ನು ಟೀಕಿಸುವುದು ಬೇಡ, ಹೇಗೂ ಅವರಿಗೆ ಮುಂದಿನ ಮೇ ೩೧ರವರೆಗೆ ಜೀವದಾನ ದೊರಕಿದೆ. ಆಮೇಲೆ ಮತ್ತೆ ಯಾರೋ ನಿದ್ದೆ ಕೆಡಿಸಿಕೊಂಡು ಇನ್ನಷ್ಟು ಕಾಲ ಜೀವದಾನ ಮಾಡುತ್ತಾರೆಂಬುದು ಕ್ಯಾಂಪ ಕೋಲ ಫ್ಲಾಟ್ ಮಾಲೀಕರ ಆಶಯ. ಅದೇ ಸರ್ವೋಚ್ಚ ನ್ಯಾಯಾಲಯವು ಎರಡು ವರ್ಷಗಳ ಹಿಂದೆ ಒಂದು ಆಜ್ಞೆಯನ್ನು ನೀಡಿತ್ತು, ನೆನಪಿದೆಯೆ? ಬಹುಶಃ ಇರಲಾರದು. ಸರ್ವೋಚ್ಚ ನ್ಯಾಯಾಲಯಕ್ಕೂ ನೆನಪಿನಲ್ಲಿ ಉಳಿದಿಲ್ಲವೆನಿಸುತ್ತದೆ. ಆಗಿನ ಪ್ರಸಂಗ ಇದು: ದೆಹಲಿಯಲ್ಲಿ ಯಮುನಾ ನದಿ ಹರಿಯುತ್ತದೆ. ಅದರ ಪಾತ್ರದಲ್ಲಿ ಕೆಲವು ಕಡು ಬಡವರು ಒಂದಷ್ಟು ಟೆಂಟ್‌ಗಳನ್ನು ಹಾಕಿಕೊಂಡು ಅವುಗಳಲ್ಲಿ ವಾಸವಾಗಿದ್ದರು. ಅವರ ಟೆಂಟುಗಳು 'ಅನಧಿಕೃತ' ಎಂಬ ಕಾರಣಕ್ಕೆ ಅವನ್ನು ತೆರವುಗೊಳಿಸಬೇಕೆಂದು ಸರ್ವೋಚ್ಚ ನ್ಯಾಯಾಲಯವು ಆಜ್ಞೆಯಿತ್ತಿತ್ತು. ಆ ಟೆಂಟ್‌ಗಳನ್ನು ಕ್ಷಣಾರ್ಧದಲ್ಲಿ ಕಿತ್ತುಹಾಕಬಹುದಿತ್ತು. ಎಲ್ಲಾ ನಾಲ್ಕು ಕೋಲುಗಳ ಮೇಲೆ ಹರಡಿಕೊಂಡಿದ್ದ ಹರಿದ ಪ್ಲಾಸ್ಟಿಕ್ ಹಾಳೆಗಳು! ಸರಿ, ಅಧಿಕಾರಿಗಳು ಕಿತ್ತುಹಾಕಿದರು. ನೂರಾರು ಜನ ಬಟ್ಟೆ–ಬರೆ ಇಲ್ಲದ ಅಜ್ಜಿಗಳು, ಮಕ್ಕಳು, ಮಹಿಳೆಯರು ತಮ್ಮ "ಮನೆ"ಗಳನ್ನು ಕಳೆದುಕೊಂಡರು. ಸಾರ್ವಜನಿಕ ಹಿತಾಸಕ್ತಿ ಅರ್ಜಿಯೊಂದನ್ನು ಯಾರೋ ಮಹಾನುಭಾವ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ, ಈ ನಿರ್ವಸಿತರನ್ನು ಅಲ್ಲೇ ಇರಲು ದಯಮಾಡಿ ಬಿಡಿ, ಎಂದು ಅಂಗಲಾಚಿದ. ಸರ್ವೋಚ್ಚ ನ್ಯಾಯಾಲಯ ಹೇಳಿತು, 'ಎಲ್ಲಾದರೂ ಉಂಟೇ! ಕಾನೂನುಬಾಹಿರವಾಗಿ ಎದ್ದಿರುವ ಟೆಂಟುಗಳನ್ನು ನದೀಪಾತ್ರದಲ್ಲಿ ಉಳಿಸುವುದು ತರವೇ? ಹಾಗೇನಾದರೂ ಉಳಿಸಿದರೆ ಪಿಕ್–ಪಾಕೆಟ್‌ಗಳಿಗೆ ರಕ್ಷಣೆ ಒದಗಿಸಿದಂತಾಗುತ್ತದೆ,' ಎಂದು. ಜಮುನಾ ಪಾತ್ರದ ಟೆಂಟ್ ನಿವಾಸಿಗಳು ಕಳ್ಳರಂತೆ! ದಿನಕ್ಕೆ ಹತ್ತು ಗಂಟೆ ಶ್ರಮ ಮಾಡಿ ಬದುಕುತ್ತಿದ್ದ ಅಬ್ಬೇಪಾರಿಗಳು ಪಿಕ್–ಪಾಕೆಟ್‌ಗಳು!! ಹಾಗೆ ನಿರ್ವಸಿತರಾದ ನೂರಾರು ಮಂದಿಯ ಸ್ಥಿತಿಗೆ ಮರುಗಿ ಯಾವ ನ್ಯಾಯಾಧೀಶರೂ ನಿದ್ದೆ ಕೆಡಿಸಿಕೊಂಡಿದ್ದು ವರದಿಯಾಗಿರಲಿಲ್ಲ. ನಮ್ಮ ಬೆಂಗಳೂರಿನದೇ ಈಜೀಪುರದಲ್ಲಿ ಅದೆಷ್ಟು ಜನ ಅತಿ ಬಡವರು ನಿರ್ವಸಿತರಾದರು? ಈಗ ಅವರೆಲ್ಲಾ ಎಲ್ಲಿ ವಾಸವಾಗಿದ್ದಾರೆ? ಕ್ಯಾಂಪ ಕೋಲದ ನಿವಾಸಿಗಳಿಗೆ ದೊರೆತ ಕರುಣೆ ಇವರಿಗೇಕೆ ದೊರೆಯಲಿಲ್ಲ? ಕ್ಯಾಂಪ ಕೋಲದ ನಿವಾಸಿಗಳು ಪೊಲೀಸರು, ಕಾರ್ಪೊರೇಷನ್ ಅಧಿಕಾರಿಗಳು, ಒಳಗೆ ಬಾರದಂತೆ ತಡೆಗೋಡೆ (ಬ್ಯಾರಿಕೇಡ್) ನಿರ್ಮಿಸಿಕೊಂಡರಂತೆ. ಯಮುನಾ ಮತ್ತು ಈಜೀಪುರದ ಪಾಪದ ಜನ ಅದನ್ನು ಮಾಡಿಕೊಳ್ಳಲು ಆಗಲಿಲ್ಲವೇಕೆ? ನ್ಯಾಯಾಲಯಗಳಲ್ಲಿ ನ್ಯಾಯದೇವತೆಯ ಮೂರ್ತಿಯೊಂದಿರುತ್ತದೆ. ಅವಳ ಕೈಯಲ್ಲಿ ತಕ್ಕಡಿ ಇರುತ್ತದೆ ಮತ್ತು ಅವಳು ಕಣ್ಣಿಗೆ ಕಪ್ಪು ಬಟ್ಟೆ ಕಟ್ಟಿಕೊಂಡಿರುತ್ತಾಳೆ. ಆದರೆ ಕ್ಯಾಂಪ ಕೋಲದ ಜನ ಅವಳಿಗೆ ಕಾಣಿಸುತ್ತಾರೆ; ಯಮುನಾ–ಈಜೀಪುರದ ಜನ ಮನುಷ್ಯರಲ್ಲ, ಅವರು ಕಲ್ಲುಗಳು, ಆದ್ದರಿಂದ ಅವರು ಅವಳಿಗೆ ಕಾಣಿಸುವುದಿಲ್ಲ! ಕ್ಯಾಂಪ ಕೋಲ–ಯಮುನಾ–ಈಜೀಪುರ ಎಲ್ಲ ಕಡೆಯವರೂ ಸಾರ್ವಭೌಮ ಭಾರತ ಗಣರಾಜ್ಯದ ಸಂವಿಧಾನ ದಡಿಯೇ ಇದ್ದಾರೆ; ಆದರೆ ಕೆಲವರು ಗೆದ್ದು ಪಟಾಕಿ ಸಿಡಿಸುತ್ತಾರೆ, ಏಕೆಂದರೆ ಅವರು ಕ್ಯಾಂಪ ಕೋಲದ ಮಂದಿ. ಇನ್ನು ಕೆಲವರು ಎಲ್ಲೋ ಮಾಯವಾಗುತ್ತಾರೆ, ಯಾರ ಕಣ್ಣನ್ನೂ ಕುಕ್ಕುವುದಿಲ್ಲ, ಸಿಡಿಸಲು ಅವರಲ್ಲಿ ಮದ್ದಿಲ್ಲ. ಇರುವುದೆಲ್ಲಾ ಒಡೆದ ಮಡಕೆಗಳು, ಒಡೆದ ಮನಸ್ಸುಗಳು. ಆ ಜನ ಮನಮೋಹನ ಸಿಂಗರ ದೃಷ್ಟಿಗೆ ಬೀಳುವುದಿಲ್ಲ ಮತ್ತು ಅಂಥವರಿದ್ದಾರೆಂದು ಮೋದಿ ನಂಬುವುದೂ ಇಲ್ಲ. ಆದರೆ ೨೦೧೪ರ ಚುನಾವಣೆಯಲ್ಲಿ ನಮ್ಮನ್ನೇ ಆರಿಸಿ ಗೆಲ್ಲಿಸಿ, ನಿಮಗೆ ಸ್ವರ್ಗಕ್ಕೆ ಏಣಿ ಹಾಕಿಕೊಡುತ್ತೇವೆ, ಎಂದು ಇಬ್ಬರೂ ಯಮುನಾ–ಈಜೀಪುರದ ಜನರಿಗೆ ಕಾಕಾ ಹೊಡೆಯುತ್ತಾರೆ. ಇದೆಂಥಾ ಲೋಕವಯ್ಯಾ, ಎಂದು ಸುಮ್ಮನೆ ಹಾಡಿದರೆ ನಮ್ಮ ದಾಸರು! ಆದರೆ ಎಂತಹ ಕೌತುಕ ನೋಡಿ, ನಿದ್ದೆ ಕಳೆದುಕೊಳ್ಳುವಂತಹ ನ್ಯಾಯಮೂರ್ತಿಗಳಿರುವ ಸರ್ವೋಚ್ಚ ನ್ಯಾಯಾಲಯದ ಯಾರೋ ನಿವೃತ್ತ ಮಹನೀಯರೊಬ್ಬರು ಅವರ ಬಳಿಗೆ ತರಬೇತಿ ಪಡೆಯಲು ಬರುತ್ತಿದ್ದ ಅವರ ಮೊಮ್ಮಗಳ ವಯಸ್ಸಿನ ಯುವತಿಯ ಮೇಲೆ ಕಣ್ಣು ಹಾಕಿದ್ದಷ್ಟೇ ಅಲ್ಲ, ಕೈಯನ್ನೂ ಹಾಕಿದ್ದರಂತೆ. ಹಾಗೆಂದು ಆ ಯುವತಿ ಬರೆದುಕೊಂಡಿದ್ದಾಳೆ, ಅವಳು ಬರೆದ ನಂತರ ಇನ್ನೂ ಕೆಲವರು ಬರೆಯಹೊರಟಿದ್ದಾರೆ, ಈಗ ತನಿಖೆಗೆ ಆಜ್ಞೆ ಮಾಡಲಾಗಿದೆ. ಕಣ್ಣುಮುಚ್ಚಿರುವ ನ್ಯಾಯದೇವತೆ ಏನು ತೀರ್ಪು ಕೊಡುತ್ತಾಳೋ ಕಾದು ನೋಡೋಣ ಮತ್ತು ಸಮಯ ಬಂದರೆ ಯಮುನಾ ಪಾತ್ರದ ನಿರ್ವಸಿತರಂತೆ ನಾವೂ ಮಾಯವಾಗಿಬಿಡೋಣ.

✶ ✶ ✶

ಸಚಿನ್ ನಿರ್ಗಮನದ ನಂತರವೂ ಪ್ರಪಂಚ ಮತ್ತು ಜೀವನ ಉಳಿದಿರುತ್ತವೆಯೆ? 'ಹೊಸತು' ಪತ್ರಿಕೆಯನ್ನು ಕೈಯಲ್ಲಿ ಹಿಡಿದು ಓದುತ್ತಿದ್ದೀರಾದ್ದರಿಂದ ಉತ್ತರ ಗೊತ್ತೇ ಇದೆ. ಹಿಂದೆ ಅಮೆರಿಕಾದಲ್ಲಿ ಒಬ್ಬ ದೈತ್ಯ ಬ್ಯಾಸ್ಕೆಟ್‌ಬಾಲ್ ಆಟಗಾರನಿದ್ದ. ಅವನ ಹೆಸರು ಮೈಕೇಲ್ ಜೋರ್ಡನ್. ಅವನು ಸ್ಪರ್ಧಾತ್ಮಕ ಆಟಕ್ಕೆ ವಿದಾಯ ಹೇಳಿದಾಗ ಅಮೆರಿಕಾದ ಮಾಧ್ಯಮಗಳು ಒಂದರ ಮೇಲೊಂದು ಬಿದ್ದು, ಅವನಿಲ್ಲದೆ ಜೀವನ ಎಷ್ಟು ಬರಡು ಎಂದು ಕಣ್ಣೀರು ಸುರಿಸಿದುವು. ತಿಂಗಳುಗಟ್ಟಲೆ ಇದು ನಡೆಯಿತು. ನಮ್ಮ ಶೂರ ಸಚಿನ್ ಹೊರಹೋದಾಗ ನಮ್ಮ ಮಾಧ್ಯಮಗಳು ಅಮೆರಿಕಾದ ಮಾಧ್ಯಮಗಳನ್ನು ಮೀರಿಸಿದವು. ಈ ಯುವಕನಿಗೆ ನಲವತ್ತು ವರ್ಷ ಆಗಿದೆ, ೧೮–೨೦ ವರ್ಷದ ಯುವಕರಿಗೆ ಇನ್ನಾದರೂ ಒಂದು ಸ್ಥಾನ ಸಿಗಬಹುದಲ್ಲಾ ಎಂಬ ನೆಮ್ಮದಿಯು ಯಾವ ಮಾಧ್ಯಮದಲ್ಲೂ ವ್ಯಕ್ತವಾಗಲಿಲ್ಲ. ನಮ್ಮ ದೇಶದ ಇಂದಿನ ಸನ್ನಿವೇಶದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಒಂದೊಂದು 'ಮಿಥ್ಯಾ ಪ್ರಜ್ಞೆ' ಬೇಕಾಗಿದೆ; ಸಚಿನ್ ಅದನ್ನು ದಯಪಾಲಿಸಿ ಹೊರನಡೆದಿದ್ದಾನೆ. ನಮ್ಮ ಕ್ರೀಡಾವಲಯದಲ್ಲೂ 'ವೋಲ್ವೊ' ಪಿಡುಗು ತುಂಬಿಕೊಂಡಿದೆ. ಅಧಿಕಾರಿಗಳ ಪೈಪೋಟಿಯಿಂದಾಗಿ ಕ್ರೀಡಾಳುಗಳ ಭವಿಷ್ಯವು ಸುಟ್ಟು ಕರಕಲಾಗಬಹುದೆಂಬ ಸನ್ನಿವೇಶವಿದೆ, ಆದರೆ ಸರ್ಕಾರವು ಸ್ಥಿತಪ್ರಜ್ಞನಂತೆ ತಣ್ಣಗೆ ಕೂತಿದೆ. ನಮ್ಮ ದೇಶದ ಒಲಿಂಪಿಕ್ ಸಮಿತಿಯು ಭ್ರಷ್ಟಾಚಾರದ ಆಗರ. ಅದನ್ನು ನೋಡಿ ಬೇಸತ್ತ ಅಂತರರಾಷ್ಟ್ರೀಯ ಒಲಿಂಪಿಕ್ ಸಮಿತಿ ಹೇಳಿತು, "ಈ ಅಯೋಗ್ಯ ಭ್ರಷ್ಟರನ್ನು ಸಮಿತಿಯ ಚುನಾವಣೆಯಲ್ಲಿ ಅಭ್ಯರ್ಥಿಗಳಾಗಲು ಬಿಡಬೇಡಿ; ಹಾಗೇನಾದರೂ ಬಿಟ್ಟರೆ ನಿಮ್ಮ ಭಾರತದ ಒಲಿಂಪಿಕ್ ಸಮಿತಿಗೆ ನಮ್ಮ ಅಂತರರಾಷ್ಟ್ರೀಯ ಒಲಿಂಪಿಕ್ ಸಮಿತಿಯ ಮಾನ್ಯತೆಯನ್ನು ರದ್ದುಗೊಳಿಸುತ್ತೇವೆ" ಎಂದು. ಅಂದರೆ, "ನಿಮ್ಮ ಕ್ರೀಡಾಪಟುಗಳು ಇನ್ನು

ಮುಂದೆ ಒಲಿಂಪಿಕ್ ಕ್ರೀಡೆಗಳಲ್ಲಿ ಭಾಗವಹಿಸಲಾಗುವುದಿಲ್ಲ" ಎಂದರ್ಥ. ಅದಕ್ಕೆ ಭಾರತ ಒಲಿಂಪಿಕ್ ಸಮಿತಿಯ ತಿರುಗೇಟು ಹೇಗಿದೆ ನೋಡಿ : "ಯಾರಾದರೂ ಭ್ರಷ್ಟ ಅಭ್ಯರ್ಥಿಗಳಿದ್ದಾರೆಯೇ ಎಂಬುದನ್ನು ಪರಿಶೀಲಿಸಲು ನಮ್ಮ ಆಂತರಿಕ ಶಿಸ್ತು ಸಮಿತಿಗೆ ಹೇಳಿದ್ದೇವೆ." ಆ ಆಂತರಿಕ ಶಿಸ್ತು ಸಮಿತಿಯಲ್ಲಿ ಭ್ರಷ್ಟರಿರಬಾರದೇನು ? ಒಟ್ಟಿನಲ್ಲಿ ನಮ್ಮ ಕ್ರೀಡಾಪಟುಗಳು ಒಲಿಂಪಿಕ್ ಕ್ರೀಡೆಗಳಿಗೆ ಹೋಗುವುದೂ ಬೇಡ, ಅಲ್ಲಿ ಪದಕಗಳನ್ನು ಪಡೆಯುವುದೂ ಬೇಡ ! ಯುವಕರಿಗೆ ಎಂತಹ ಅದ್ಭುತ ಪ್ರೋತ್ಸಾಹ ಮತ್ತು ಮಾರ್ಗದರ್ಶನ, ಅಲ್ಲವೆ ?

✶ ✶ ✶

ಕರ್ನಾಟಕದಲ್ಲಿರುವ ಮಠಾಧೀಶರುಗಳ ಪೈಕಿ ರಾಜಕಾರಣ ಮಾಡುವುದರಲ್ಲಿ ಹೆಸರುವಾಸಿಯಾಗಿರುವವರು ಪೇಜಾವರ ಮಠಾಧೀಶ ವಿಶ್ವೇಶ್ವರ ತೀರ್ಥ ಸ್ವಾಮಿಗಳು. ಸಂನ್ಯಾಸಿಗೆ ರಾಜಕೀಯ ಏಕೆ ಎಂದು ನೀವು ಕೇಳಬಹುದು. ಇದಕ್ಕೆ ಉತ್ತರ ಸಂನ್ಯಾಸವೇ ರಾಜಕಾರಣ ! ಜಾತಿಗೊಂದು, ಉಪಜಾತಿಗೊಂದು ಮಠಸ್ಥಾಪನೆಯಾಗುತ್ತಿರುವ ಈ ಕಾಲದಲ್ಲಿ ಮಠಾಧೀಶರಾಗುವವರು ರಾಜಕಾರಣ ಮಾಡದೇ ಇರಲು ಸಾಧ್ಯವೇ ಇಲ್ಲ. ಸದಾ ಸುದ್ದಿ ಮಾಡುತ್ತಿರುವ ಪೇಜಾವರ ಸ್ವಾಮಿಗಳಂತೂ ಬಹುದೊಡ್ಡ ರಾಜಕಾರಣಿ. ಭಾರತೀಯ ಜನತಾಪಕ್ಷ ಆಡಳಿತ ನಡೆಸುತ್ತಿದ್ದಾಗ ಈ ಶ್ರೀಗಳಿಗೆ ರಾಜಪುರೋಹಿತನ ಪಟ್ಟ. ಏನೇ ಆಗಲಿ ಆರೆಸ್ಸೆಸ್ ಅಂಗಸಂಸ್ಥೆಯಾದ ವಿಶ್ವ ಹಿಂದೂ ಪರಿಷತ್ತಿನ ಅಧಿಕಾರ ಸ್ಥಾನದಲ್ಲಿರುವ ಈತ ಯಾವಾಗಲೂ ಭಾಜಪದ ನಿಕಟವರ್ತಿ. ಏನಾದರೊಂದು ಕಿತಾಪತಿ ನಡೆಸಿ, ಕುತರ್ಕ ಮಾಡಿ ಸುದ್ದಿಯಲ್ಲಿರುವ ವ್ಯಕ್ತಿ. ಅಡ್ಡಗೋಡೆಯ ಮೇಲೆ ದೀಪ ಇಟ್ಟಹಾಗೆ ಯಾವುದೇ ವಿಷಯದ ಕುರಿತು ಸುಲಭವಾಗಿ ನುಣುಚಿಕೊಳ್ಳುವ ನಿಲುವು ತಳೆಯುವುದು ಶ್ರೀಯವರಿಗೆ ಸಿದ್ಧಿಸಿರುವ ವಿದ್ಯೆ. ಮಡೆಸ್ನಾನ ಎಂಬ ಅಸಹ್ಯಕರ ಪದ್ಧತಿಯ ಕುರಿತು ಅವರ ನಿಲುವು ಅದಕ್ಕೆ ಒಂದು ಉದಾಹರಣೆ. ಎಲ್ಲ ವಿಚಾರಗಳಲ್ಲೂ ಮೂಗು ತೂರಿಸಲು ಸದಾ ಸಿದ್ಧವಾಗಿರುವ ಮಹಾಬ್ರಾಹ್ಮಣ ಈ ಪೇಜಾವರರು. ಉಡುಪಿ ಅಷ್ಟಮಠಗಳಲ್ಲಿ ಪ್ರಭಾವಿ ಮಠಾಧೀಶನಾಗಿರುವ ಇವರು ಈಚೆಗೆ ಕುರುಬ ಜನಾಂಗದವರಿಗೆ ವೈಷ್ಣವ ದೀಕ್ಷೆ ನೀಡಲು ಮುಂದೆ ಬಂದು ವಿವಾದಕ್ಕೆ ಕಾರಣರಾಗಿದ್ದಾರೆ. ಕನಕದಾಸರ ಜಯಂತಿಯ ಸಂದರ್ಭದಲ್ಲಿ ಅವರು ಕೈಗೊಂಡ ಈ ನಿರ್ಧಾರ ನಿಜಕ್ಕೂ ಆಶ್ಚರ್ಯಕರ. ಕನಕದಾಸರ ವಿಷಯದಲ್ಲಿ ವ್ಯಾಸಪೀಠ ನಡೆದುಕೊಂಡ ರೀತಿಯಂತೂ ಸಂಪ್ರದಾಯಸ್ಥ ಮಾಧ್ವ ಬ್ರಾಹ್ಮಣರು ಎಷ್ಟು ಪ್ರಬಲರು ಎಂಬುದನ್ನು ತೋರಿಸಿತು. ಉಡುಪಿ ಶ್ರೀಕೃಷ್ಣನಿಗೂ ಸಂಪ್ರದಾಯವಾದಿಗಳನ್ನು ಜಗ್ಗಿಸಲಾಗದೆ, ತಾನೇ ಮುಖ ತಿರುಗಿಸಿದ. ಶ್ರೇಷ್ಠ ಕವಿ, ಗೀತರಚನಕಾರ, ಶ್ರೀಕೃಷ್ಣನ ಭಕ್ತ ಕನಕದಾಸರಿಗೇ ದೀಕ್ಷೆ ನೀಡಲು ಅಂದಿನ ಶ್ರೀಗಳಿಗೆ ಸಾಧ್ಯವಾಗಲಿಲ್ಲ. ಈಗ ಪೇಜಾವರರು ಕುರುಬ ಜನಾಂಗದವರಿಗೆ ವೈಷ್ಣವ ದೀಕ್ಷೆ ನೀಡಲು ಮುಂದಾಗಿರುವುದೇಕೆ ? ಮುಖ್ಯಮಂತ್ರಿಗಳು ಆ ಪಂಗಡಕ್ಕೆ ಸೇರಿದವರೆಂದೆ ? ಇದಕ್ಕೆ ಅವರೇ ಉತ್ತರ ಹೇಳಬೇಕು. ಅಂತೂ ವಿವಾದವೊಂದನ್ನು ಹುಟ್ಟುಹಾಕಿ ಶ್ರೀಗಳವರು ಕೃತಾರ್ಥರಾಗಿದ್ದಾರೆ. ಶೈವ ಅಥವಾ ವೈಷ್ಣವ ಸಿದ್ಧಾಂತಗಳು ಯಾವುದೇ ಜನಾಂಗದ ಬಡವರ ಸಹಾಯಕ್ಕೆ ಬಾರದು. ಇದು ಶ್ರೀಯವರಿಗೂ ಚೆನ್ನಾಗಿ ಗೊತ್ತು. ಉಡುಪಿ ಕೃಷ್ಣ ಮಂದಿರದ ಕನಕನ ಕಿಂಡಿ ಹೆಸರನ್ನು ನವಗ್ರಹ ಕಿಂಡಿ ಎಂದು ಬದಲಾಯಿಸುವುದರಲ್ಲೂ ಪೇಜಾವರರ ಕೈವಾಡ ಇತ್ತು. ಇಂಥ ಬೇಡದ ವಿವಾದಗಳನ್ನು ಸೃಷ್ಟಿಸುವ ಬದಲು ಪೇಜಾವರ ಸ್ವಾಮಿ ತಮ್ಮ ಮಠದಲ್ಲಿ ತೆಪ್ಪಗೆ ಇದ್ದರೆ ಒಳಿತು.

✶ ✶ ✶

'ಶ್ರೀರಾಮ ಜನ್ಮಭೂಮಿ' ಬೆನ್ನೇರಿ ಬಾಬ್ರಿ ಮಸೀದಿ ಧ್ವಂಸ ಮಾಡಿ ದೆಹಲಿಯಲ್ಲಿ ಅಧಿಕಾರ ಗ್ರಹಣ ಮಾಡಿದ ಭಾಜಪ ಈಗ ಹೊಸದಾಗಿ ಸರ್ದಾರ್ ಪಟೇಲರ ಬೆನ್ನುಹತ್ತಿದೆ. ಹೇಗಾದರೂ ಮಾಡಿ ಪ್ರಧಾನಿಯಾಗಬೇಕೆಂದು ಹೊರಟಿರುವ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿಯ ಹೊಸ ವರಸೆ ಇದು. 'ಹಿಂದುತ್ವ'ದ ಪ್ರಚಾರಕ್ಕಾಗಿ ವಿವೇಕಾನಂದರನ್ನು ಬಳಸಿಕೊಂಡಾಯಿತು. ಈಗ ಮೋದಿ ಅವಾಂತರದಲ್ಲಿ ನೆಹರೂ ಸಂಪುಟದಲ್ಲಿ ಭಾರತದ ಮೊದಲ ಗೃಹಸಚಿವರಾಗಿದ್ದ ಸರ್ದಾರ್ ಪಟೇಲರ ಹೆಸರನ್ನು ಬಳಸಿಕೊಳ್ಳಲು ಪ್ರಯತ್ನ ನಡೆದಿದೆ. ಗುಜರಾತಿನ ಮುಖ್ಯಮಂತ್ರಿಯಾಗಿ ಹದಿಮೂರು ವರ್ಷ ಅಧಿಕಾರ ನಡೆಸಿರುವ ಮೋದಿ ಈಗ ದಿಢೀರನೆ ಪಟೇಲರು ಗುಜರಾತಿನ ಮೂಲದವರು ಎಂಬುದನ್ನು ಕಂಡು ಕೊಂಡಿದ್ದಾರೆ. ಮೋದಿಯ ಈ ಹೊಸ ಶೋಧೆಗೆ ಮಾತೃ ಸಂಸ್ಥೆ ಆರೆಸ್ಸೆಸ್‌ನ ಬೆಂಬಲವೂ ಇಲ್ಲದಿಲ್ಲ. ಏಕೆಂದರೆ ಒಂದು ಬಗೆಯಲ್ಲಿ ಸರ್ದಾರ್ ಪಟೇಲರು ಆರೆಸ್ಸೆಸ್‌ಗೆ ಮರುಜೀವ ನೀಡಿದವರು. ಗಾಂಧಿಹತ್ಯೆಯ ನಂತರ ನಿಷೇಧಿಸಲಾಗಿದ್ದ ಈ ಸಂಘಟನೆಯಿಂದ ಮುಚ್ಚಳಿಕೆ ಬರೆಸಿಕೊಂಡು, ಸಾಂಸ್ಕೃತಿಕ ಸಂಘಟನೆಯ ಮುಖವಾಡ ತೊಡಿಸಿ ಪುನರುಜ್ಜೀವನ ನೀಡಿದ್ದು ಪಟೇಲರು. ಅದರಿಂದ ಈ ಚುನಾವಣೆಯ ಸಂದರ್ಭದಲ್ಲಿ ಅವರನ್ನು ನೆನಪಿಸಿಕೊಂಡು ಕೃತಜ್ಞತೆ ಸಲ್ಲಿಸಲು ಹೊರಟಿವೆ ಹಿಂದುತ್ವವಾದಿ ಸಂಘಟನೆಗಳು. ಇದುವರೆಗೆ, ಅಂದರೆ ಸರ್ದಾರ್ ಪಟೇಲರು ತೀರಿಕೊಂಡು ಅರವತ್ತು ವರ್ಷಗಳಿಗೂ ಹೆಚ್ಚು ಕಾಲವಾದ ಮೇಲೆ ಕಾಂಗ್ರೆಸ್ಸಿನ ನಾಯಕರಲ್ಲಿ ಒಬ್ಬರಾಗಿದ್ದ ಅವರನ್ನು ಈಗ ಸ್ಮರಿಸುತ್ತಿರುವುದು ಅವರು ಹಿಂದೂ ಪರರೆಂದೆ ? ಇರಬಹುದು. ಚುನಾವಣೆಯಲ್ಲಿ ಉಪಯೋಗಿಸಿಕೊಂಡರೆ ಯಾರದೇನು ಅಡ್ಡಿ, ಪಟೇಲರು ಪ್ರಧಾನಿ ಯಾಗಿದ್ದರೆ ಬೇರೆಯೇ ಆಗುತ್ತಿತ್ತು ಎಂದು ಮೋದಿ ಅಭಿಮತ. ನೆಹರೂ ಕುಟುಂಬ ಹಳಿಯಲು ಈ ತಂತ್ರ ಬೇರೆ.

ಗುಜರಾತ್ ಮೂಲದ ಕಾಂಗ್ರೆಸ್ ನಾಯಕ ಸರ್ದಾರ್ ಪಟೇಲರಿಗೆ ಭಾಜಪದ ನರೇಂದ್ರ ಮೋದಿ ಈಗ ಅತಿ ದೊಡ್ಡ ಸ್ಮಾರಕ ನಿರ್ಮಿಸಲು ಹೊರಟಿದ್ದಾರೆ. ಅಮೆರಿಕದ ನ್ಯೂಯಾರ್ಕ್‌ನಲ್ಲಿರುವ ಸ್ವಾತಂತ್ರ್ಯದೇವಿ ಮೂರ್ತಿಗಿಂತಲೂ ಎರಡು ಪಟ್ಟು ಎತ್ತರದ ಉಕ್ಕಿನ ಪ್ರತಿಮೆಯೊಂದನ್ನು ಗುಜರಾತಿನ ತೀರದಲ್ಲಿ ಸ್ಥಾಪಿಸಲು ಹೊರಟಿದ್ದಾರೆ. ೧೮೨ ಮೀಟರು ಎತ್ತರದ ಈ ಪ್ರತಿಮೆಗೆ ತಗಲುವ ವೆಚ್ಚ ಎರಡು ಸಾವಿರ ಕೋಟಿಗೂ ಹೆಚ್ಚು. ಸಾರ್ವಜನಿಕರಿಂದ ದೇಣಿಗೆ ಸಂಗ್ರಹ ಮಾಡಿ ನಿರ್ಮಿಸಲಾಗುವುದಂತೆ. ರಾಮಜನ್ಮಭೂಮಿ ನಿರ್ಮಾಣಕ್ಕೆ ಇಟ್ಟಿಗೆ ಮತ್ತು ಹಣಸಂಗ್ರಹ ಮಾಡಿದ ಅಡ್ವಾನಿಯಂತೆಯೇ ಶಿಷ್ಯ ನರೇಂದ್ರ ಮೋದಿ ರೈತರ ಮನೆ ಮನೆಯಿಂದ ಕಬ್ಬಿಣದ ತುಂಡುಗಳನ್ನು ಸಂಗ್ರಹಿಸಲು ಹೊರಟಿದ್ದಾರೆ. ಗುರುವಿಗೆ ತಕ್ಕ ಶಿಷ್ಯ. ಗುರುವಿಗೇ ಕೊಕ್ ಕೊಟ್ಟು ಪ್ರಧಾನಿಯಾಗಲು ಹೊರಟಿರುವ ಈತ ಅವರದೇ ದಾರಿಯಲ್ಲಿ ಹೊರಟಿದ್ದಾರೆ. ಅಂತೂ ಹೊಸ ವಿವಾದವೊಂದನ್ನು ಸೃಷ್ಟಿಸಿ ಆಯಿತು. ಚುನಾವಣೆಯ ಸಮಯದಲ್ಲಿ ಏನಾದರೂ ಆಗಬಹುದು ತಾನೆ.

✶ ✶ ✶

ಬೆಂಗಳೂರಿಗೆ ಮೋದಿ ಬಂದೂ ಆಯಿತು, ಹೋಗಿಯೂ ಆಯಿತು. ಹಿಂದಿನ ದಿನ ಮಳೆ ಧಾರಾಕಾರವಾಗಿ ಬಿದ್ದರೂ ಮರುದಿನ ಬೀಳದೇ ಇದ್ದದ್ದು ಮೋದಿ ಮೋಡಿಯೇನೊ ! ಗೊತ್ತಿಲ್ಲ. ರಾಜ್ಯ ಭಾಜಪ ನಾಯಕರು ತಿಂಗಳುಗಟ್ಟಲೆ ಒದ್ದಾಡಿ ಶಕ್ತಿ ಪ್ರದರ್ಶನ ನಡೆಸಿದರು. ರಾಜ್ಯದ ಎಲ್ಲ ಕಡೆಗಳಿಂದ ಕಾರ್ಯಕರ್ತರನ್ನು, ಹಿತೈಷಿಗಳನ್ನು ಜಮಾಯಿಸಿದರು. ಸದ್ಯ ಪಾಟ್ನಾದಲ್ಲಿ ನಡೆದ ಹಾಗೆ ಬೆಂಗಳೂರಿನಲ್ಲೇನೂ ದುರ್ಘಟನೆ ನಡೆಯಲಿಲ್ಲ, ಸೇರಿದ್ದ ಲಕ್ಷಗಟ್ಟಲೆ ಜನಕ್ಕೆ ಊಟ, ಉಪಚಾರ ಎಲ್ಲವೂ ಇತ್ತು. ಈ ಶಕ್ತಿ ಪ್ರದರ್ಶನಕ್ಕೆ ಕೋಟಿಗಟ್ಟಲೆ ಹಣವೂ ಖರ್ಚಾಯಿತು. ಅಧಿಕಾರಾವಧಿಯಲ್ಲಿ ಕೂಡಿಟ್ಟ ಹಣ ಸ್ವಲ್ಪ ಖಾಲಿ ಆಯಿತು. ಇನ್ನು ಈ ಅರ್ಧ ದಿನದ ಭಾಜಪ ಕಾರ್ಯಕರ್ತರ ಸಮಾವೇಶದಲ್ಲಿ ಬೀಗಿದ್ದೇ ಬಂತು ರಾಜ್ಯ ಭಾಜಪ ನಾಯಕರಿಗೆ. ಚುನಾವಣೆಯಲ್ಲಿ ಎಲ್ಲ ಪಾರ್ಲಿಮೆಂಟರಿ ಕ್ಷೇತ್ರಗಳಲ್ಲೂ ಗೆದ್ದು ಮೋದಿಗೆ ಪಟ್ಟಕಟ್ಟುವ ಚಪಲ ಇವರಿಗೆ. ಕನಸು ಕಾಣುವವರಿಗೆ ಯಾರು ಬೇಡ ಅಂತಾರೆ. ಮೋದಿ ಕೂಡ ಪ್ರಧಾನಿಯಾಗುವ ಕನಸನ್ನೇ ಕಟ್ಟಿಕೊಂಡು ದೇಶಪರ್ಯಟನೆ ನಡೆಸಿದ್ದಾರೆ ತಾನೆ. ಮತದಾರ ಏನು ಮಾಡುತ್ತಾನೋ ಅದಿರಲಿ, ಮೋದಿ ಭಾಷಣ ನಿರೀಕ್ಷಿತ ಪ್ರಭಾವವೇನೂ ಬೀರಲಿಲ್ಲ. ಮನಮೋಹನ ಸಿಂಗ್ ಸರಕಾರದ ಮೇಲೆ ಹರಿಹಾಯ್ದರು ಅಷ್ಟೆ. ಬೆಂಗಳೂರಿನ ಐಟಿ ಜನರನ್ನು ಒಲಿಸಿಕೊಳ್ಳಲು ಐಟಿ ಬಗ್ಗೆ ಮಾತಾಡಿದರು. ಅವರೆಲ್ಲ ಮತ ನೀಡಲು ಬೂತಿಗೆ ಬರುತ್ತಾರೆಯೇ ? ಅದು ಮೋದಿಗೂ ಗೊತ್ತು. ಅರಮನೆ ಮೈದಾನದಲ್ಲಿ ಕಸದ ರಾಶಿ ಬಿದ್ದದ್ದೇ ಲಾಭ. ಲಕ್ಷಗಟ್ಟಲೆ ಜನ ಜಮಾಯಿಸಿದಾಗ ಇನ್ನೇನು ತಾನೆ ಸಾಧ್ಯ. ಮೋದಿ ಭಾಷಣ ಕೇಳಲು ಕುರ್ಚಿಗೆ ಹತ್ತು ರೂಪಾಯಿ ಸುಂಕ ಬೇರೆ ವಸೂಲಿ ಮಾಡಿದ್ದರು ಭಾಜಪದವರು. ಆದರೂ ಮೋದಿಯ ಮೋಡಿ ಬೆಂಗಳೂರಿನಲ್ಲಿ ನಡೆಯಲಿಲ್ಲ. ನಿರೀಕ್ಷಿತ ಪರಿಣಾಮ ಬೀರಲಿಲ್ಲ. ಖಾಲಿ ಗಲಾಟೆ ಅಷ್ಟೆ.

●




**ಶೂದ್ರ ಯುಗದ ಸುನಾಮಿ ಅಪ್ಪಳಿಸುತ್ತಿದೆ**

ಈ ವರ್ಷದ ಕರ್ನಾಟಕ 'ರಾಜ್ಯೋತ್ಸವ ಪ್ರಶಸ್ತಿ'ಯನ್ನು ನವೆಂಬರ್ ೧ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮುಖ್ಯಮಂತ್ರಿಗಳಿಂದ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಏರ್ಪಡಿಸಿತ್ತು. ಇಲಾಖೆ ಸಚಿವೆ ಶ್ರೀಮತಿ ಉಮಾಶ್ರೀ ಅವರು ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಮಾರಂಭದ ಆಮಂತ್ರಣ ಪತ್ರಿಕೆಯಲ್ಲಿ ಈ ವರ್ಷ ಪ್ರಶಸ್ತಿಗೆ ಪಾತ್ರರಾದ ೫೮ ಜನರಲ್ಲಿ ೪೫ ಜನರಿಗೆ ಸನ್ಮಾನ ಮಾಡಲಾಯಿತು. ಆಮಂತ್ರಣ ಪತ್ರಿಕೆಯಲ್ಲಾಗಲಿ, ಸಭೆಯ ಕಾರ್ಯಕ್ರಮ ಸೂಚಿಯಲ್ಲಾಗಲಿ ಪ್ರಶಸ್ತಿ ಪುರಸ್ಕೃತರಲ್ಲಿ ಯಾರಾದರೂ ಮಾತನಾಡುವರೆಂಬುದನ್ನು ಕಾಣಿಸಿರಲಿಲ್ಲ. ಮುಖ್ಯಮಂತ್ರಿಗಳು ಪ್ರಶಸ್ತಿ ಪ್ರದಾನ ಮಾಡಿ, ಭಾಷಣವನ್ನು ಮುಗಿಸಿ ತಮ್ಮ ಆಸನದತ್ತ ಬಂದು ನನ್ನನ್ನು ನೋಡಿ 'ಪ್ರಶಸ್ತಿ ಪುರಸ್ಕೃತರ ಪರವಾಗಿ ನೀವು ನಾಲ್ಕು ಮಾತನಾಡಿ' ಎಂದರು. ಮುಖ್ಯಮಂತ್ರಿಗಳ ಈ ಅನಿರೀಕ್ಷಿತ ಅಪೇಕ್ಷೆಯನ್ನು ತಿರಸ್ಕರಿಸಲಾಗದೆ ನಾನು ಈ ಕೆಳಗಿನಂತೆ ಏಳೆಂಟು ನಿಮಿಷ ಮಾತನಾಡಿದೆ. ನಾನಾಡಿದ ಮಾತುಗಳನ್ನು 'ಉದಯವಾಣಿ'ಯ ಹೊರತಾಗಿ ಉಳಿದ ಯಾವ ಕನ್ನಡ ಪತ್ರಿಕೆಯೂ ಪ್ರಕಟಿಸಲಿಲ್ಲ. ಅಂದು ನಾನಾಡಿದ ಮಾತುಗಳನ್ನು ದಾಖಲೆಗಾಗಿ ಇಲ್ಲಿ ಬರೆಯುತ್ತಿದ್ದೇನೆ.

"ಇಂದು ನಾನು ಇಲ್ಲಿಗೆ ಬಂದದ್ದು ಪ್ರಶಸ್ತಿಯನ್ನು ಪಡೆಯಲೆಂದು, ಇತರರು ಪಡೆಯುವುದನ್ನು ನೋಡಿ ಸಂತೋಷಪಡಲೆಂದು. ನಾನಿಲ್ಲಿ ಮಾತನಾಡಬೇಕೆಂಬ ಸೂಚನೆಯನ್ನು ಯಾರೂ ತಿಳಿಸಿರಲಿಲ್ಲ. ಈಗ ರಾಜ್ಯದ ಮಾನ್ಯ ಮುಖ್ಯಮಂತ್ರಿಗಳು ನಾನು ಮಾತನಾಡಬೇಕೆಂದು ಅಪೇಕ್ಷೆಪಟ್ಟಿದ್ದುದರಿಂದ ಅವರ ಮಾತನ್ನು ಮೀರಬಾರದೆಂದು ನಾಲ್ಕು ಮಾತನ್ನಾಡುತ್ತಿದ್ದೇನೆ."

ಈ ಮಾತುಗಳನ್ನಾಡಿ ಮುಂದೇನು ಮಾತನಾಡಬೇಕೆಂಬುದು ಕೂಡಲೆ ಹೊಳೆಯಲಿಲ್ಲ. ೧೦–೧೫ ಸೆಕೆಂಡು ಸುಮ್ಮನಿದ್ದು, ನನ್ನ ಮಾತನ್ನು ಮುಂದುವರಿಸಿದೆ.

"ಈ ವರ್ಷದ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಿದಾಗ ನನ್ನ ಆಪ್ತರು, ಮಿತ್ರರು, ಅಭಿಮಾನಿಗಳು ರಾಜ್ಯದ ಅನೇಕ ಕಡೆಗಳಿಂದ ರಾಜ್ಯದ ಹೊರಗಿರುವ ನನ್ನ ಹಿತೈಷಿಗಳಿಂದ ದೂರವಾಣಿ ಕರೆ ಮಾಡಿ ಆಶ್ಚರ್ಯಮಿಶ್ರಿತ ಸಂತೋಷವನ್ನು ವ್ಯಕ್ತಪಡಿಸಿದರು. ಆಶ್ಚರ್ಯ ಏಕೆಂದರೆ ಕರ್ನಾಟಕ ರಾಜ್ಯೋದಯವಾಗಿ ೫೭ ವರ್ಷಗಳಾಗುವವರೆಗೂ ನನಗೆ ರಾಜ್ಯೋತ್ಸವ ಪ್ರಶಸ್ತಿ ಬಾರದಿರುವುದಕ್ಕೆ. ಕೆಲವು ಮಂತ್ರಿಗಳು, ಶಾಸಕರು, ಅಧಿಕಾರಿಗಳು ರಾಜ್ಯ ಸರ್ಕಾರದಿಂದ ಏನೋ ಒಂದು ತಪ್ಪಾಗಿದೆಯೆಂಬ ಸಂಕೋಚದಿಂದ ಸಂತೋಷ ವ್ಯಕ್ತಪಡಿಸಿದರು. ಇಂಥ ಪ್ರಶಸ್ತಿಯನ್ನು ನಾನು ಎಂದೂ ಅಪೇಕ್ಷಿಸಿರಲಿಲ್ಲ. ನಿರೀಕ್ಷಿಸಿಯೂ ಇರಲಿಲ್ಲ. ಅದು ತಾನಾಗಿಯೇ ಬಂದಾಗ ನನಗೆ ಆಶ್ಚರ್ಯವಾಯಿತೇ ಹೊರತು, ನಾನು ಸಂತೋಷದಿಂದ ಉಬ್ಬಿಹೋಗಲಿಲ್ಲ. ತಡವಾಗಿಯಾದರೂ ಕರ್ನಾಟಕ ಸರ್ಕಾರ ಈ ಪುರಸ್ಕಾರವನ್ನು ಕೊಟ್ಟದ್ದಕ್ಕಾಗಿ, ಈ ವಿಳಂಬಕ್ಕೆ ಕಾರಣವಾದವರು




ಮುಜುಗರಕ್ಕೆ ಒಳಗಾಗಿರಬಹುದು. ಆದರೆ ನಾನು ನ್ಯಾಯವಾದಿಯಾಗಿ ಈ ಸರ್ಕಾರ ಮಾಡಿರುವುದೆ ಸರಿ ಎಂದು ಅವರನ್ನು ಡಿಫೆಂಡ್ ಮಾಡುತ್ತಿದ್ದೇನೆ.

"ನಾನು ನಮ್ಮ ತಾಯಿಗೆ ಮೊದಲನೆಯ ಮಗ. ನನ್ನ ತರುವಾಯ ಇಬ್ಬರು ತಂಗಿಯರು, ಇಬ್ಬರು ತಮ್ಮಂದಿರು ಹುಟ್ಟಿದ್ದರು. ನಾನು ಮೊದಲು ಊಟಕ್ಕೆ ಕುಳಿತರೆ ನಮ್ಮಮ್ಮ, ತಮ್ಮ ಬರಲಿ ತಡಿ, ಅವನು ಉಂಡಮೇಲೆ ನೀನು ಉಣ್ಣುವಿಯಂತೆ ಎಂದು ಹೇಳುತ್ತಿದ್ದರು. ಯಾಕೆ ಅಂತ ಗೊತ್ತಾಗುತ್ತಿರಲಿಲ್ಲ. ಆದರೆ, ತಾಯಿಯ ಪ್ರೀತಿ ಎಂತಹದ್ದು ಎಂಬುದು ನಂತರದ ದಿನಗಳಲ್ಲಿ ಗೊತ್ತಾಯಿತು. ಅದೇ ರೀತಿ ತಾಯಿ ಸರಸ್ವತಿ, ಕನ್ನಡಮ್ಮ ಕೂಡ ಸಣ್ಣ ಮಕ್ಕಳಿಗೆ ಕೊಟ್ಟು ನಂತರ ನನಗೆ ನೀಡಿದ್ದಾಳೆ. ನನ್ನ ಸೇವೆ ಏನು ಎಂಬುದು ಆ ತಾಯಿಗೆ ಗೊತ್ತು. ಅವರು ಮಾಡಿದ್ದೆ ಸರಿ. ಹೀಗೆ ತಡವಾಗಿ ಪುರಸ್ಕಾರ ಪಡೆದವರು ಶ್ರೀ ಕುವೆಂಪು, ಮಾಸ್ತಿಯವರು ಇದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಸ್ಥಾಪನೆಯಾಗಿದ್ದು ೧೯೫೫ರಲ್ಲಿ. ೧೯೭೯–೮೦ರವರೆಗೆ ಮಾಸ್ತಿ ಮತ್ತು ಕುವೆಂಪು ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಕಣ್ಣಿಗೆ ಬಿದ್ದಿರಲಿಲ್ಲ. ಅವರ ಶಿಷ್ಯರು ಅಷ್ಟು ಹೊತ್ತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದಿದ್ದರು. ಇದು ಲಾಗಾಯಿತ ನಡೆದುಬಂದ ಪದ್ಧತಿ. ಈ ಬಾರಿ ಪುರಸ್ಕೃತರಾದವರಲ್ಲಿ ಕೆಲವರು ಯಾರ್‍ಯಾರಿಗೂ ಗೊತ್ತಿರದ, ಸರ್ಕಾರದ ಗಮನಕ್ಕೂ ಬಾರದವರು ಇದ್ದಾರೆ. ಪಾವಗಡದ ಸೂಲಗಿತ್ತಿ ನರಸಮ್ಮ, ಜಾನಪದ ಹಾಡುಗಳನ್ನು ಹಾಡುವ ಅನಕ್ಷರಸ್ಥೆ ಶ್ರೀಮತಿ ಎಲಿಸವ್ವ ಮಾದರ, ಕಿತ್ತಳೆ ಹಣ್ಣು ಮಾರಿ ಅದರಿಂದ ಬಂದ ಹಣದಿಂದ ಶಾಲಾ ಕಟ್ಟಡವನ್ನು ಕಟ್ಟಿಸಿದ ಶ್ರೀ ಹರೇಕಳ ಹಾಜಬ್ಬ ಹಾಗೂ ಅನಾಥನಾಗಿ ಬೆಂಗಳೂರಿಗೆ ಬಂದು ಆಟೋ ಚಾಲಕನಾಗಿರುವ ಆಟೋರಾಜ. ದಿಕ್ಕಿಲ್ಲದ ಕೊನೆಯುಸಿರೆಳೆಯಲಿದ್ದ ದರಿದ್ರರನ್ನು ಒಂದೆರಡು ದಿನ ಆರೈಕೆ ಮಾಡಿ ರುದ್ರಭೂಮಿಗೆ ಕೊಂಡೊಯ್ದು ಅಂತ್ಯಸಂಸ್ಕಾರ ಮಾಡಿದಂತಹ ಅನಾಮಧೇಯ ವ್ಯಕ್ತಿಯನ್ನು ಗುರುತಿಸಿ ರಾಜ್ಯೋತ್ಸವ ಪ್ರಶಸ್ತಿಯನ್ನು ಕೊಟ್ಟಂತಹದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ಕೊಡುವುದಾಗಿ ಪ್ರಕಟವಾದಾಗ ದಿವಂಗತ ನಾಟಕ ರತ್ನ ಗುಬ್ಬಿ ವೀರಣ್ಣನವರಿಗೆ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪದವಿ ಕೊಟ್ಟ ಘಟನೆ ನೆನಪಾಯಿತು. ಅವರಿಗೆ ಗೌರವ ಡಾಕ್ಟರೇಟ್ ನೀಡುವುದಾಗಿ ಪ್ರಕಟವಾದಾಗ ನಾನು ಅವರನ್ನು ದೂರವಾಣಿ ಮೂಲಕ ಅಭಿನಂದಿಸಿದೆ. ಅದಕ್ಕೆ ವೀರಣ್ಣನವರು 'ಡಾಕ್ಟರೇಟ್ ಅಂದರೇನು ಸ್ವಾಮಿ ?' ಎಂದು ಕೇಳಿದರು. ನಾನು ಅದಕ್ಕೆ ಅವರ ಆ ಮುಗ್ಧ ಮಾತನ್ನು ಕೇಳಿ ಶಿಕ್ಷಣ ಕ್ಷೇತ್ರಕ್ಕೆ, ಜ್ಞಾನಾಭಿವೃದ್ಧಿಗೆ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಂತಹವರಿಗೆ ಗೌರವಿಸುವ ಒಂದು ಪದವಿ ಎಂದೆ. ಅದಕ್ಕೆ ಗುಬ್ಬಿ ವೀರಣ್ಣನವರು 'ನಾನು ಶಾಲೆಗೂ ಹೋಗಿಲ್ಲ. ಪುಸ್ತಕ ಬರೆದಿಲ್ಲ. ಬೇರೆಯವರು ಬರೆದ, ಕಲಿಸಿದ ಮಾತುಗಳನ್ನು ನಾನು ನಾಟಕದಲ್ಲಿ ಮಾತನಾಡಿದೆ. ನಾನೇನು ಮಾಡಿದ್ದೀನಿ ಸ್ವಾಮಿ' ಎಂದರು. ನಾನು ಆಗ ಒಂದು ಮಾತು ಹೇಳಿದೆ. 'ನೋಡ್ರಿ ವೀರಣ್ಣನವರೆ ನಾವು ಪುಸ್ತಕ ಬರೆದವರು ಒಂದು ಸಾವಿರ ಪುಸ್ತಕ ಅಚ್ಚು ಹಾಕಿಸಿದರೆ ಅವು ಖರ್ಚಾಗಲು ಎಷ್ಟೋ ವರ್ಷ ಆಗುತ್ತದೆ. ಅವುಗಳನ್ನು ಎಷ್ಟು ಜನ ಓದುತ್ತಾರೋ ತಿಳಿಯದು. ಆದರೆ ಬಿ. ಪುಟ್ಟಸ್ವಾಮಯ್ಯನಂಥವರು ಬರೆದ ನಾಟಕಗಳನ್ನು ನೀವು ಅಭಿನಯಿಸಿ ಒಂದೆರಡು ರಾತ್ರಿಗಳಲ್ಲಿ ಸಾವಿರಾರು ಜನರಿಗೆ ನಾಟಕ ಆಡಿ ತೋರಿಸುತ್ತೀರಿ. ಹರಿಶ್ಚಂದ್ರ ನಾಟಕವನ್ನು ಆಡಿದಾಗ ಜನ ಸತ್ಯವಂತರಾಗಿ ಬಾಳಬೇಕೆಂಬ ಪಾಠವನ್ನು ಕಲಿತರು. ಪಾದುಕ ಪಟ್ಟಾಭಿಷೇಕ ನಾಟಕವನ್ನು ನೋಡಿದಾಗ ಭರತನ ರಾಮಭಕ್ತಿಯನ್ನು ನೋಡಿ ಸಂತೋಷ ಪಡುತ್ತಾರೆ. ಇದು ನೀವು ಸಮಾಜಕ್ಕೆ ಮಾಡಿದ ದೊಡ್ಡಸೇವೆ. ನಿಮಗಲ್ಲದೆ ಯಾರಿಗೆ ಈ ಪ್ರಶಸ್ತಿ ಕೊಡಬೇಕು' ಎಂದೆ. ಆಗ ವೀರಣ್ಣನವರು 'ಹಾಗೇನು ಸ್ವಾಮಿ' ಎಂದರು.

"ಇಂದು ಪ್ರಶಸ್ತಿ ಪುರಸ್ಕೃತರಾದ ಸೂಲಗಿತ್ತಿ ನರಸಮ್ಮ ೧೫೦೦ ಹೆರಿಗೆಗಳನ್ನು ಮಾಡಿಸಿದ್ದಾರೆ ಎಂದರೆ ಅದು ಸಮಾಜ ಸೇವೆಯಲ್ಲವೆ ? ಅವರಿಗೆ ಹೆರಿಗೆ ಮಾಡಿಸುವಾಗ ಬೇಕಾಗುವ ಹೊಕ್ಕಳ ಹುರಿ ಕತ್ತರಿಸಲು ಬೇಕಾಗುವ ಕತ್ತರಿಯಾಗಲಿ, ಅರಳೆ ಯಾಗಲಿ (ಸರ್ಜಿಕಲ್ ಕಾಟನ್) ಇರಲಿಲ್ಲ. ತಮ್ಮ ಹತ್ತು ಬೆರಳುಗಳಿಂದ ಹೆರಿಗೆ ಮಾಡಿಸಿದ್ದಾರೆ. ಸರ್ಕಾರ ಹೆರಿಗೆ ಆಸ್ಪತ್ರೆಗಳನ್ನು ಕಟ್ಟಿಸಬೇಕು. ಅವುಗಳಿಲ್ಲದೆಯೇ ನರಸಮ್ಮ ಸೇವೆ ಮಾಡಿದ್ದಾರಲ್ಲ ಅದು ಪ್ರಶಂಸನೀಯವಲ್ಲವೆ ? ಹಾಗೆಯೆ ಆಟೋ ರಾಜ ಸಾಯಲಿರುವ ಜನರ ಬಾಯಿಗೆ ಹನಿ ನೀರು ಬಿಟ್ಟು, ಮಣ್ಣು ಕೊಟ್ಟನಲ್ಲ ಅದೇನು ಸಣ್ಣ ಸೇವೆಯೇ ? ಆತನನ್ನು ಗೌರವಿಸಬೇಕಲ್ಲವೆ ? ಕಿತ್ತಳೆ ಹಣ್ಣನ್ನು ಮಾರಿ ಶಾಲಾ ಕಟ್ಟಡವನ್ನು ಕಟ್ಟಿಸಿದ ಹಾಜಬ್ಬ ಅವರು ಆದರ್ಶಪ್ರಾಯರಲ್ಲವೆ ? ಅವರೆಲ್ಲರೊಡನೆ ಪುರಸ್ಕೃತರಾದ ಕಲಾವಿದರು ಸರ್ಕಾರದ ಕಣ್ಣಿಗೆ ಬಿದ್ದಿರಲಿಲ್ಲ. ಆದರೆ ಗೊಬ್ಬರದಂತಹ ಈ ಜನರನ್ನು ಕರೆದು ಈ ದಿನ ಇಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ಕೊಟ್ಟು ಗೌರವಿಸುತ್ತಿರುವುದು ಈ ರಾಜ್ಯದ ಅಧಿಕಾರದ ಸಿಂಹಾಸನದ ಮೇಲೆ ಗೊಬ್ಬರ ಕೂತಿರು ವುದರಿಂದ" ಎಂದು ನಾನು ಮುಖ್ಯಮಂತ್ರಿಗಳ ಕಡೆ ತಿರುಗಿ ನೋಡಿದೆ. ಆಗ ಮುಂದಿದ್ದ ಜನ ಚಪ್ಪಾಳೆ ಹೊಡೆದು, ಸೀಟಿ ಹೊಡೆದು ಸಂತೋಷ ಪಟ್ಟರು. ಆಗ ನಾನು ಸಭಿಕರನ್ನು ಉದ್ದೇಶಿಸಿ "ನೀವು ಹೀಗೆ ಶೀಟಿ ಹೊಡೆದು, ಚಪ್ಪಾಳೆ ತಟ್ಟಿ ಹರ್ಷೋದ್ಗಾರ ಮಾಡುತ್ತಿರುವುದು ಇಲ್ಲಿ ಪುರಸ್ಕೃತ ರಾದವರಲ್ಲಿ ಸಂಗೀತ, ಅಭಿನಯ, ಸಿನಿಮಾಗಳಲ್ಲಿ ಹಾಡಿದವರಿದ್ದಾರೆಂದು." ಇನ್ನು ಕೊನೆಯದಾಗಿ ೧೨೦ ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದರು ತಮ್ಮ ಗುರುಭಾಯಿಗಳಿಗೆ ಒಂದು ಪತ್ರ ಬರೆದು 'ಜಗತ್ತು ಸದಾ ನಾಲ್ಕು ವರ್ಗದ ಜನರಿಂದ ಆಳಲ್ಪಡುತ್ತಿದೆ. ಮೊದಲನೆಯದು ಬ್ರಾಹ್ಮಣಯುಗ, ಎರಡನೆಯದು ಕ್ಷತ್ರಿಯಯುಗ. ಮೂರನೆಯದು ಶೂದ್ರಯುಗ. ಈಗ (ಕಳೆದ ೧೯-೨೦ನೆಯ ಶತಮಾನ) ವೈಶ್ಯಯುಗ - ವಾಣಿಜ್ಯ ವ್ಯವಹಾರ (ಬ್ರಿಟಿಷ್ ವಸಾಹತುಯುಗ) ನಡೆಯುತ್ತಿದೆ. ಅದು ಶೀಘ್ರದಲ್ಲಿ ಕೊನೆಗಾಣುವುದು. ಮುಂದೆ ಶೂದ್ರ ಯುಗ ಬಂದೇ ಬರುವುದು. ಆ ಯುಗ ಈಗಾಗಲೇ ಕಾಲಿಟ್ಟಿದೆ. ಇಷ್ಟರಲ್ಲಿ ಆ ಶೂದ್ರಯುಗ ಸುನಾಮಿಯಂತೆ ಅಪ್ಪಳಿಸುತ್ತದೆ. ಅದನ್ನು ಯಾರೂ ತಡೆಯಲಾರರು. ಆ ಶೂದ್ರಯುಗ ಬಂದು ಶ್ರೀ ಅರವಿಂದರು ಅಪೇಕ್ಷಿಸಿದ, ದಿವ್ಯಮಾನವ ಕುವೆಂಪು ಬಯಸಿದ ವಿಶ್ವಮಾನವ ಜಗತ್ತಿನಲ್ಲಿ ಅವತರಿಸುತ್ತಾನೆ. ಮಾನವ ಕುಲಕ್ಕೆ ಕ್ಷೇಮವಾಗುತ್ತದೆ. ನಿಮಗೆಲ್ಲ ನಮಸ್ಕಾರ' ಎಂದು ಮಾತು ಮುಗಿಸಿದೆ. ಜನ ಮತ್ತೊಮ್ಮೆ ಕಿವಿಗಡಚಿಕ್ಕುವಂತೆ ಕರತಾಡನ ಮಾಡಿ ಹರ್ಷೋದ್ಗಾರ ಮಾಡಿದರು.

ಈ ಕೊನೆಯ ಮಾತುಗಳನ್ನು ಯಾವ ಪತ್ರಿಕೆಯೂ ಪ್ರಕಟಿಸಲಿಲ್ಲ ! ಅವರಿಗೆ ತಲ್ಲಣ.

*ಬೆಂಗಳೂರು* **ಕೋ. ಚೆ.**



ಹೊಸತು ಪತ್ರಿಕೆಯ ನವೆಂಬರ್ ಸಂಚಿಕೆಯಲ್ಲಿ ಕೆ. ಎಸ್. ನವೀನ್ ಅವರು 'ನೇತ್ರಾವತಿ ನದಿ ತಿರುಗಣಿ ಯೋಜನೆ – ಒಂದು ಒಳನೋಟ' ಎಂಬ ಒಂದು ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಉದ್ದಕ್ಕೂ ಕುಡಿಯುವ ನೀರಿಗೂ ಹಾಹಾಕಾರ ಕಾಣುತ್ತಿರುವ ತುಮಕೂರು, ಚಿಕ್ಕಬಳ್ಳಾಪುರ, ಕೋಲಾರ ಮುಂತಾದ ಬಯಲು ಸೀಮೆಯ ಜಿಲ್ಲೆಗಳಿಗೆ ಕನಿಷ್ಠ ಕುಡಿಯುವ ನೀರನ್ನು ಕೊಡುವ ನೇತ್ರಾವತಿ ನದಿ ತಿರುವು ಮತ್ತು ಎತ್ತಿನ ಹೊಳೆ ಯೋಜನೆಯ ಬಗ್ಗೆ ಸಿಟ್ಟನ್ನು ಹೊರಹಾಕಿದ್ದಾರೆ. ಇದು ಕೇವಲ ಸಿಟ್ಟಾಗಿ ಕಾಣಲು ಕಾರಣ ಇಲ್ಲಿಯ ಎಲ್ಲಾ ಪ್ಯಾರಾಗಳಲ್ಲಿ ಇವರು ಕೇವಲ ಊಹಿಸಿರುವಂತೆ ಈ ಯೋಜನೆಗಳಿಂದ ಆಗುವ ಸಾಧಕಗಳಿಗಿಂತ ಬಾಧಕಗಳೇ ಹೆಚ್ಚು ಎಂಬುದಕ್ಕೆ ಸೂಕ್ತವಾದ ವಿಶ್ಲೇಷಣೆಯಿಲ್ಲ. ಜೊತೆಗೆ ಇವರು ಅಣೆಕಟ್ಟು ಎಂಬ ಕಲ್ಪನೆಯನ್ನೇ ಪ್ರತಿರೋಧಿಸುತ್ತಿದ್ದಾರೆ. ಇಂತಹ ಅಣೆಕಟ್ಟುಗಳು ನಿರ್ಮಾಣವಾಗದೇ ಇದ್ದಿದ್ದರೆ ಜೀವವೈವಿಧ್ಯತೆ ಉಳಿಯುತ್ತಿತ್ತೇನೋ ! ಆದರೆ ಮಾನವನ ಬದುಕು ಏನಾಗಿರುತ್ತಿತ್ತು ? ಇದರೊಂದಿಗೆ ಕುಡಿಯಲು ಮತ್ತು ಶೌಚಾಲಯಗಳಿಗೂ ಕನಿಷ್ಠ ನೀರು ಇರದೆ ಪ್ರಸ್ತಾಪಿತ ಈ ಜಿಲ್ಲೆಗಳಲ್ಲಿ ಜನರು ಪಡುತ್ತಿರುವ ಪಾಡನ್ನು ಈ ಲೇಖಕರು ಎಂದಾದರೂ ಗಮನಿಸಿದ್ದಾರೆಯೇ ? ಸಮುದ್ರಕ್ಕೆ ಸೇರುವ, ಪ್ರವಾಹವಾಗಿ ಮೊರೆಯುವ ನೀರನ್ನು ಈ ಬರಪೀಡಿತ ಜನರ ಕನಿಷ್ಠ ಅಗತ್ಯಗಳಿಗೆ ನೀಡಿದರೆ ಜೀವ ಮತ್ತು ಪರಿಸರಕ್ಕೆ ಹಾನಿಯಾಗು ತ್ತದೆಯೇ ? ಇಂತಹ ನೆಲೆಯಲ್ಲಿ ಮಾನವೀಯ ಚಿಂತನಾಕ್ರಮ ಸಹ ಮುಖ್ಯವಲ್ಲವೇ ? ಅಷ್ಟಕ್ಕೂ ನದಿ ನೀರು ಆ ಪ್ರದೇಶದಲ್ಲಿ ಹರಿಯುವ ಜನರ ಸ್ವತ್ತು ಮಾತ್ರವೇನು ? ಒಂಬೈನೂರು, ಸಾವಿರ ಅಡಿಗಳ ಆಳದಿಂದ ಕೊಳವೆ ಬಾವಿಯ ಮೂಲಕ ಹೊರಬಂದ ಫ್ಲೋರೈಡ್ ನೀರನ್ನು ಕುಡಿದು, ಮೂಳೆ ಸವೆತ ಮುಂತಾದ ಹಲವಾರು ಗುರುತರ ರೋಗಗಳಿಗೆ ತುತ್ತಾಗಿರುವ ಬರಪೀಡಿತ ಈ ಜಿಲ್ಲೆಗಳ ಜನ ತಮ್ಮ ಶಾಶ್ವತ ನೀರಾವರಿಗಾಗಿ ಹೋರಾಟವನ್ನು ತೀವ್ರಗೊಳಿಸಬೇಕಾಗಿದೆ. ಇದು ಯಶಸ್ವಿಯಾಗುವ ನೆಲೆಯಲ್ಲಿ ಸಂಪತ್ತಿನ ಸಮಾನ ಹಂಚಿಕೆ ಅಲ್ಲವಾದರೂ ಸದ್ಯಕ್ಕೆ ನೀರಿನ ಮರು ಹಂಚಿಕೆಯಾದಂತಾಗುತ್ತದೆ.

*ಬೆಂಗಳೂರು* ***ಕಾ. ವೆಂ. ಶ್ರೀನಿವಾಸಮೂರ್ತಿ***

**ಬೆಂಗಳೂರಿನ ಜನನಿಬಿಡ ಪ್ರದೇಶದಲ್ಲಿ ಎ.ಟಿ.ಎಂ. ಒಂದರಲ್ಲಿ ಹಣಕ್ಕಾಗಿ ಜ್ಯೋತಿ ಎಂಬ ಮಹಿಳೆಯ ಮೇಲೆ ಹಂತಕನೊಬ್ಬ ದಾಳಿ ಮಾಡಿದ್ದಾನೆ. ಇದು ನಮ್ಮ ನಗರಗಳು ತಲುಪಿದ ಸ್ಥಿತಿ ತೋರಿಸುತ್ತದೆ. ಜನರು ನಗರದ ಸುರಕ್ಷತೆಗೆ ಧ್ವನಿ ಎತ್ತಲಿ. ದಾಳಿಗೆ ಒಳಗಾದ ಜ್ಯೋತಿಯ ಆರೋಗ್ಯ ಬೇಗ ಸುಧಾರಿಸಲಿ.**



ಈಗಾಗಲೇ ಪಶ್ಚಿಮಘಟ್ಟದ ಅರಣ್ಯ ಛಿದ್ರೀಕರಣ ವಾಗಿದೆ. ಹಾರಂಗಿ, ಕಬಿನಿ, ಹೇಮಾವತಿ, ಯಗಚಿ, ವಾಟೆಹೊಳೆ, ಭದ್ರ, ತುಂಗಾ, ಕಾಳಿ, ವರಾಹಿ, ಚಕ್ರ, ಛಿದ್ರೀಕರಣದ ಸಾಲು ಸಾಲು. ಮನುಷ್ಯನ ಆಸೆಯನ್ನು ಭೂಮಿ ತೀರಿಸಬಲ್ಲದೇ ಹೊರತು ದುರಾಸೆಯನ್ನಲ್ಲ ಎಂಬುದು ಗಾಂಧಿ ನುಡಿ. ನಾವು ಒಂದು ಬಲ್ಬು ಉರಿಸುತ್ತಿದ್ದೇವೆಂದರೆ ಅದು ಪ್ರಕೃತಿ ನಾಶದಲ್ಲಿ ನಮ್ಮ ಪಾಲಿದೆ ಎಂದು ಅರ್ಥ. ನಮ್ಮ ಆಲೂರು ಈಗ ಆನೆ ನಿಲ್ಲುವ ನಾಡು. ಆಗ ಅದು ಆನೆಪಥವಾಗಿತ್ತು. ಹರಿಯುವ ನದಿ ನಡೆಯುವ ಆನೆ ನಿಂತರೆ ಅದು ನಾಡಿನ ಕೇಡು ಎಂದರ್ಥ. ಎತ್ತಿನ ಹಳ್ಳ ಅದು ನದಿಯೂ ಅಲ್ಲ ಹೊಳೆಯೂ ಅಲ್ಲ. ಮಳೆಗಾಲದಲ್ಲಿ ಜುಳುಜುಳು ಹರಿಯುವ ಕೆಂಪು ಹೊಳೆ ಸೇರಿ ನೇತ್ರಾವತಿ ಸೇರುವ ಸಕಲೇಶಪುರದ ಬಳಿ 'ಹಳ್ಳ'. ಮನುಷ್ಯ ಸಾಹಸಿ ಹೌದು. ಅದು ಮುಂದಿನ ಪೀಳಿಗೆಗೆ ಮಾರಕವಾಗಬಾರದು. ಈಗಾಗಲೇ ಆಗಿರುವ ಪ್ರಮಾದ ಸಾಕು. ಕೋಲಾರದ ಕಡೆ ಜನ ಕಾಡು ಕಡಿದು ನಾಡು ಬರಿದು ಮಾಡಿ ಹಳ್ಳ ತನ್ನಿ ಎಂದು ಹೇಳಿಲ್ಲ. ಇದು ಅರಣ್ಯ ಹಾಗೂ ಸಿವಿಲ್ ಕಂಟ್ರಾಕ್ಟರುಗಳ ಲಾಬಿ. ಈಗಾಗಲೇ ವರದಿಯೊಂದು ಇದು ಅವೈಜ್ಞಾನಿಕವೆಂದು ಹೇಳಿದೆ. ಕೋಲಾರದ ಕಡೆಗೆ ಆಸೆ ಬಿತ್ತುವುದು ಬೇಡ. ಒಮ್ಮೆ ಏನಾಯ್ತೆಂದರೆ : ಬರೀ ಘಟ್ಟದಲ್ಲೆ ಮಳೆ ಸುರಿತದಲ್ರಿ ನಮ್ಮ ಜಿಲ್ಲೆಗೆ ಮಳೆ ಬರಲ್ಲವಲ್ರಿ ಅಂದ್ರು ಮಂತ್ರಿ. ಮಳೆ ಮೋಡಾನ ಘಟ್ಟದ ಬೆಟ್ಟಗಳು ತಡೆದು ಬಿಡ್ತವೆ ಅಂದರು ಅಧಿಕಾರಿ. 'ಫೈಲ್ ಪುಟ್‌ಅಪ್ ಮಾಡ್ರಿ' ಪಶ್ಚಿಮ ಘಟ್ಟದ ೭೦-೮೦ ಅಡಿಗಳಷ್ಟು ಚಾಪ್ ಮಾಡಬೇಕು ! ಇದೇನ್ರಿ ಹುಡುಗಾಟವೇನ್ರಿ ಎಂದರು ಅಡಿಷನಲ್ ಸೆಕ್ರೆಟರಿ. ಇದು ಪ್ರಕೃತಿಗೆ ವಿರುದ್ಧ. ಆಗದ ಕೆಲಸ ಅಂತಾ ಎರಡು ಮೂರು ಪುಟ ಬರೆದ್ರು. ಮಂತ್ರಿ ಅವರನ್ನ ಕರೆದ್ರು. ಬಾಯಿಗೆ ಬಂದಂಗೆ ಬಯ್ದು 'ನಾನು ಮಂತ್ರಿ ಗೊತ್ತಾ' ಎಂದು ಗುಡುಗಿದಾಗ ಫೈಲ್ ಪುಟ್‌ಅಪ್ ಮಾಡಿದ ಅಧಿಕಾರಿ ಹುನ್ನಾರದಲ್ಲಿ ಹೇಳಿದ್ರು ! ಎಕ್ಸಪರ್ಟ್ ಒಪಿನಿಯನ್ ತಗೋಳೋಣ ಸಾರ್ ಅಂದರು. ಆಯ್ತು. ಹೋದ ಫೈಲು ಸರ್ಕಾರ ಬೀಳೋವರೆಗೂ ಬರಲೇ ಇಲ್ಲ. ಇದು ಕರ್ನಾಟಕ ಸರ್ಕಾರದಲ್ಲಿದ್ದ ಮಂತ್ರಿಯೊಬ್ಬನ ಸತ್ಯಕತೆ. ನವೆಂಬರ್ ೨೦೧೩ರ 'ಹೊಸತು'ವಿನಲ್ಲಿ ಕೆ. ಎಸ್. ನವೀನ್ ಇಂತಹದಕ್ಕೆ ಮುನ್ನುಡಿ ಬರೆದಂತೆ ಬರೆದಿದ್ದಾರೆ. ಜೋಗದಂತೆ ಕರೆಂಟು ತೆಗೆಯಲು ಹೇಳಿದ ತಾಂತ್ರಿಕರು ವರಾಹಿಯಲ್ಲಿ ಬೆಟ್ಟ ಅಗೆದು ಇಲಿ ಹಿಡಿದಿದ್ದಾರೆ. ಜಗತ್ತಿನ ಕತ್ತಲ ಕಾಡು ಅಲ್ಲಿ ಹೋಯ್ತು. ಶಿರಾಡಿ ಕಾಡು ಈಗ ಉಳಿದಿರುವ ಜೀವಸಂಕುಲ ಉಗಮ ಸ್ಥಾನ. ವಿಶ್ವ ಪರಂಪರೆಯ ತಾಣವಾಗಬೇಕಲ್ಲದೆ ಅದನ್ನು ತಿರುಗಣೆ ಮಾಡುತ್ತೇವೆ ಎಂದು ಹೊರಟು 'ಕೂತ ಕೊಂಬೆ ಕತ್ತರಿಸುವ ಚಿನ್ನದ ಮೊಟ್ಟೆಯಿಡುವ ಕೋಳಿ ಕೊಯ್ಯುವ' ಕಾರ್ಯ ಮಾಡಬಾರದು. ಸಂಘಟಿತ ವೈಜ್ಞಾನಿಕಾಧಾರಿತ ವೈಲ್ಡ್‌ಲೈಫ್ ಫೌಂಡೇಷನ್ ರೀತಿ ಚಳುವಳಿಗೆ ನಮ್ಮೆಲ್ಲರ ಬೆಂಬಲವಿದೆ.

*ಬೆಂಗಳೂರು* ***ಡಾ|| ರಾಜೇಗೌಡ ಹೊಸಹಳ್ಳಿ***



ಗುಜರಾತ್ ಮುಖ್ಯ ಮಂತ್ರಿ ಶ್ರೀ ನರೇಂದ್ರ ಮೋದಿಯವರನ್ನು ಮುಂಬರುವ ಲೋಕಸಭಾ ಚುನಾವಣೆಯ ಪ್ರಧಾನ ಮಂತ್ರಿ ಅಭ್ಯರ್ಥಿಯೆಂದು ಭಾರತೀಯ ಜನತಾ ಪಕ್ಷ ಘೋಷಿಸಿದೆ. ಅವರು ಪ್ರಧಾನ ಮಂತ್ರಿಯಾಗಿ ಆಯ್ಕೆಯಾಗುವ ಸಾಧ್ಯತೆಯ ಬಗ್ಗೆ ದೇಶಾದ್ಯಂತ ಚರ್ಚೆ ಪ್ರಾರಂಭವಾಗಿದೆ. ಬಿಜೆಪಿ ನಾಯಕರು ನರೇಂದ್ರ ಮೋದಿ ಮುಂದಿನ ಪ್ರಧಾನ ಮಂತ್ರಿಯಾಗುವುದರಲ್ಲಿ ಸಂಶಯವೇ ಇಲ್ಲ ಎಂದು ಪ್ರಚಾರ ಪ್ರಾರಂಭಿಸಿದ್ದಾರೆ. ನರೇಂದ್ರ ಮೋದಿ ಸಹ ಅಲ್ಲಲ್ಲಿ ಈಗಾಗಲೇ ಪ್ರಧಾನ ಮಂತ್ರಿ ಶೈಲಿಯಲ್ಲಿ ಭಾಷಣ ಮಾಡುತ್ತಿರುವುದು ಸೋಜಿಗದ ಸಂಗತಿಯಾಗಿದೆ. ಅವರು ಪ್ರಧಾನ ಮಂತ್ರಿಯಾಗಿ ಗದ್ದುಗೆಯೇರುವ ಸಾಧ್ಯತೆ ಹಲವಾರು ಚಿಂತಕರನ್ನು ಆತಂಕಕ್ಕೀಡುಮಾಡಿದೆ. ಖ್ಯಾತ ಸಾಹಿತಿ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ॥ ಯು. ಆರ್. ಅನಂತಮೂರ್ತಿಯವರು ನರೇಂದ್ರ ಮೋದಿಯನ್ನು ವಿರೋಧಿಸಿ ಹೇಳಿಕೆ ನೀಡಿ ಬಿಜೆಪಿ ಪಕ್ಷದ ನಾಯಕರ ಕೆಂಗಣ್ಣಿಗೆ ಗುರಿಯಾಗಿದ್ದಾರೆ.

ಕೆಲವು ತಿಂಗಳುಗಳ ಹಿಂದೆ, ನರೇಂದ್ರ ಮೋದಿಯವರು ತಮ್ಮನ್ನು ತಾವು ಹಿಟ್ಲರನ ಅಭಿಮಾನಿಯೆಂದು ಪ್ರಕಟಪಡಿಸಿದ್ದರು. ಇಬ್ಬರ ನಡುವೆ ನಾವು ಕೆಲವು ಸಾಮ್ಯತೆಗಳನ್ನು ಕಾಣಬಹುದು.

ಈ ದೇಶದ ಪ್ರಧಾನ ಮಂತ್ರಿಯಾಗುವ ಕನಸನ್ನು ಕಾಣುತ್ತಿರುವ ನರೇಂದ್ರ ಮೋದಿ ಕೂಡ ಭಾರತವನ್ನು ಬಲಿಷ್ಠ ರಾಷ್ಟ್ರವನ್ನಾಗಿ ರೂಪಿಸುವ ಮಾತುಗಳ ನ್ನಾಡುತ್ತಿದ್ದಾರೆ. ಅವರು ಸಹ ಬಡತನ ಮತ್ತು ನಿರುದ್ಯೋಗ ನಿರ್ಮೂಲನೆ ಮಾಡುವ ಗುರಿಯನ್ನು ದೇಶದ ಮುಂದಿಟ್ಟಿದ್ದಾರೆ. ನರೇಂದ್ರ ಮೋದಿ, ತಾವು 'ಹಿಂದುತ್ವ' ವಾದಿಯೆಂದು ಹೇಳಿಕೊಳ್ಳಲು ಸಂಕೋಚಪಡುವುದಿಲ್ಲ. ಮುಂಬರುವ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ, ಹಿಂದೂಗಳನ್ನು ಹಿಂದೂ ಮೂಲಭೂತವಾದದ ಆಧಾರದ ಮೇಲೆ ಸಂಘಟಿಸುವುದೇ ಬಿಜೆಪಿ ಪಕ್ಷ ಮತ್ತು ನರೇಂದ್ರ ಮೋದಿಯವರ ಪ್ರಮುಖ ಅಸ್ತ್ರವಾಗಿದೆ.

ಈ ದೇಶದ ಬಂಡವಾಳಶಾಹಿ ವರ್ಗ ಮತ್ತು ಉದ್ಯಮಪತಿಗಳು ನರೇಂದ್ರ ಮೋದಿಯ ಸಮರ್ಥನೆಗೆ ನಿಂತಿರುವುದು ನಿಚ್ಚಳವಾಗಿದೆ. ಬಂಡವಾಳಗಾರರಿಗೆ ಮೋದಿ ಅವರು ನೀಡಿರುವ ತೆರಿಗೆ ವಿನಾಯಿತಿ, ಸರ್ಕಾರದ ಕಾರ್ಮಿಕ ನೀತಿ ಬಂಡವಾಳಶಾಹಿ ವರ್ಗಕ್ಕೆ ಪ್ರಮುಖ ಆಕರ್ಷಣೆಯಾಗಿದೆ.

ಯುಪಿಎ ಸರ್ಕಾರ ಶಿಕ್ಷಣಹಕ್ಕು, ಆಹಾರ ಸುಭದ್ರತೆ ಮುಂತಾದ ಜನಪರ ಯೋಜನೆಗಳನ್ನು ಜಾರಿಗೊಳಿಸಿದ್ದರೂ ಬೃಹತ್ ಮೊತ್ತದ ಭ್ರಷ್ಟಾಚಾರದ ಹಗರಣಗಳಿಂದ ಕಳಾಹೀನವಾಗಿದೆ. ಎನ್‌ಡಿಎ ಮೈತ್ರಿಕೂಟದ ಇತಿಹಾಸ ಕೂಡ ಕಳಂಕರಹಿತವಲ್ಲ, ಅಷ್ಟೇ ಕಲುಷಿತ. ತೃತೀಯ ರಂಗದ ರಚನೆಯ ಸೂಚನೆ ಎಲ್ಲೂ ಕಂಡುಬರುತ್ತಿಲ್ಲ. ಮತದಾರರ ಆಯ್ಕೆಯನ್ನು ಕಾದು ನೋಡಬೇಕಾಗಿದೆ.

*ಬೆಂಗಳೂರು* **ಶಂಕರನಾರಾಯಣ**



ಜಿ. ರಾಮಕೃಷ್ಣರವರ ಋಗ್ವೇದ ಪ್ರವೇಶಿಕೆ ಐತಿಹ್ಯ ಮತ್ತು ವಾಸ್ತವ ಎಂಬ ಲೇಖನವನ್ನು ಜುಲೈಯಿಂದ – ಅಕ್ಟೋಬರ್ ತಿಂಗಳ ಸಂಚಿಕೆಗಳಲ್ಲಿ ಹಂತ ಹಂತವಾಗಿ ಪ್ರಕಟಿಸಿ ಜ್ಞಾನ ಪಿಪಾಸುಗಳ ಅಭಿಮಾನಕ್ಕೆ ಪಾತ್ರರಾಗಿದ್ದೀರಿ. ನಾನು ನಾಲ್ಕೂ ಕಂತುಗಳನ್ನು ಓದಿ ಸಂತಸಪಟ್ಟಿರುವೆ. ಐತಿಹ್ಯವನ್ನು ವಿವರಿಸುವಾಗ ಎಲ್ಲಿಯೂ ಏನನ್ನೂ ವೈಭವೀಕರಿಸದೆ ಸತ್ಯಕ್ಕೆ ಪೂರಕವಾಗಿ, ಯಥಾವತ್ತಾಗಿ ವಿವರಿಸಲಾಗಿದೆ. ಆದರೆ ವಾಸ್ತವ ವಿವರಿಸುವಾಗ ನಿಮ್ಮ ಟೀಕೆ ಸ್ವಲ್ಪ ಹೆಚ್ಚಾಯಿತೇನೋ ಎಂದು ಅನಿಸದಿರದು. ಈ ಉಪಯುಕ್ತ ಲೇಖನ ಪ್ರಕಟಿಸಿದ 'ಹೊಸತು' ಹಾಗೂ ಜಿ. ರಾಮಕೃಷ್ಣರವರು ಅಭಿನಂದನೆಗೆ ಪಾತ್ರರು.

ಮೂಲ ವೇದಗಳು ಮೂರೇ ಎಂದು, ಅಥರ್ವ ವೇದವನ್ನು ನಂತರ ವೇದಗಳ ದರ್ಜೆಗೆ ಸೇರಿಸಿದರೆಂದು ಕೇಳಿ ತಿಳಿದಿದ್ದೇನೆ. ಅಥರ್ವ ವೇದವು ಮೊದಲಿನ ಮೂರು ವೇದಗಳ (ಋಗ್, ಯಜುರ್ವೇದ ಹಾಗೂ ಸಾಮ) ಮುಖ್ಯಾಂಶಗಳನ್ನು ಹೊಂದಿರು ವುದರ ಜೊತೆಗೆ, ಮಾನವನ ಜೀವನಕ್ಕೆ ಅವಶ್ಯವಿರುವ ಎಲ್ಲ ವಿಷಯಗಳು, ಇಲ್ಲಿ, ಅಂದರೆ ಅಥರ್ವ ವೇದದಲ್ಲಿ ಇದೆ ಎಂದು ಕೇಳಿದ್ದೇನೆ. ತಾವು ಈಗ ಪ್ರಕಟಿಸಿದ ಹಾಗೆ ಅಥರ್ವ ವೇದದ ಬಗ್ಗೆಯೂ ಲೇಖನ ಮಾಲೆ ಪ್ರಕಟಿಸುವಿರೆಂದು ನಂಬಲೇ ?

ಮುಂಬಯಿ **ಹ. ಶ್ರೀ. ಆಡೂರ**




# ಹೂವಿನೊಂದಿಗೆ ದಾರವೂ...



ಎರಡಗಲ ದಳ
ಮೃದುಲ ಭಾವದರಸಿ
ಕೆನ್ನೆ ಜಿನುಗುವ ಹೊಳಪು
ಬೆಳ್ಳಿ ಬೆಳಗು ಹಾಲ್ನೊರೆಯೊಳಗು...

ಆ ಭಾವ ದಾರಕ್ಕಿದ್ದಿದ್ದರೆ ?
ಹೋಗಿಲ್ಲವೇ
ಹೂ ಮಾಲೆಯ ದಾರ
ದೇವರ ಶಿರದ ಹತ್ತಿರ !

ಅದೋ... ಅರಳು ಸಮಯ
ಹುರುಳಿಲ್ಲದ ನೈಜತೆ
ಬಣ್ಣ ಬದುಕಿನ ಒನಪು
ದಿಟ ತಾನೆ ?
ಹುಡುಕುತ್ತಾ ಹುಡುಕುತ್ತಾ
ಪರದೆಯೊಳಗೆ...

ಪರಿಪೂರ್ಣತೆಗೆ ದಾರಿ
ಪಕ್ವತೆ ನಾಚಲಿ
ಕಣ್ಣೊಳಗೆ ಕಾಂತಿ ಕೇಸರ
ಗಮ್ಯ ಎರಡಿಂಚೇ ಎತ್ತರ
ಬೇರಿನೊಳಗೆ ಬಿಸುಪು ನೋಡು !

ಅದೇನನ್ನೋ ಕಳಕೊಂಡ ಭಾವ
ದಿನವೆಲ್ಲಾ
ಕೀಳರಿಮೆ ಕೆಲವೊಮ್ಮೆ
ಸುಖಾಸುಮ್ಮನೆ

ಜೀವಿತ ಮುಷ್ಟಿಯಲ್ಲಿದೆ
ಇಷ್ಟಾನಿಷ್ಟ ಜಗದಗಲದೆದೆ
ಬಾಡದಂತೆ ನೆರಳು
ಕಾಪಿಟ್ಟು ಕಾಯದಿರದೇ...?

**ಸಂಗೀತ ರವಿರಾಜ್**
ಹೊಸೂರು ಮನೆ, ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ – ೫೭೧ ೨೫೧

# ಕ್ಷ - ಕಿರಣ




ವಿರೋಧಿಸಬೇಕು, ಆಗದಿದ್ದರೆ ಆಸ್ವಾದಿಸಬೇಕು
ಅತ್ಯಾಚಾರ ಕಾನೂನುಬದ್ಧವಾದರೆ ಸರ್ಕಾರಕ್ಕೆ **Tax** ಬರುತ್ತದೆ.

– ರಂಜೀತ್ ಸಿನ್ಹಾ, **CBI** ನಿರ್ದೇಶಕ




**ತಿರುಪತಿಯಲ್ಲಿ ISRO ನಿರ್ದೇಶಕ ರಾಧಾಕೃಷ್ಣ**






# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



ಜಿ. ರಾಮಕೃಷ್ಣ

**ಭಾರತೀಯ ತತ್ವಶಾಸ್ತ್ರ ಶಾಖೆಗಳನ್ನು ಭಿನ್ನೈಸುವಾಗ ವೇದಕ್ಕೆ ಮಾನ್ಯತೆ ನೀಡುವ ಆಸ್ತಿಕ ಮತ್ತು ನೀಡದಿರುವ ನಾಸ್ತಿಕ ದರ್ಶನಗಳೆಂದು ವಿಂಗಡಿಸುವ ರೂಢಿ ಇದೆ. ಈ ವಿಂಗಡಣೆಯಲ್ಲಿ ತತ್ವಶಾಸ್ತ್ರದ ವಿವಿಧ ಸಿದ್ಧಾಂತಗಳ ಮೌಲಿಕ ಮಾಪನವೇನೂ ಇಲ್ಲ. ಹಾಗೆ ನೋಡಿದರೆ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಸಂಹಿತೆಗಳಲ್ಲಿ ತತ್ವಶಾಸ್ತ್ರದ ನಿರೂಪಣೆ ಬಂದಿರುವುದು ಕೇವಲ ಕಿಂಚಿತ್ತಾಗಿ. ವೇದವೆಂದರೆ ಇಡೀ ವೈದಿಕ ಸಾಹಿತ್ಯವೆಂದು ಗ್ರಹಿಸಿದರೆ ಆಗ ಉಪನಿಷತ್ತುಗಳೂ ಸೇರುತ್ತವಾದ್ದರಿಂದ ಅಲ್ಲಿ ಕೆಲವು ತತ್ವಶಾಸ್ತ್ರ ಪ್ರಮೇಯಗಳ ಪ್ರಸ್ತಾಪವನ್ನು ಕಾಣಬಹುದು. ಋಗ್ವೇದದ ಸಂದರ್ಭದಲ್ಲಿ, ತತ್ವಶಾಸ್ತ್ರವು ವೇದಕ್ಕೆ ಮಾನ್ಯತೆ ನೀಡುತ್ತದೆಂದು ಹೇಳಿದರೆ, ಅಲ್ಲಿಯ ಯಾವ ತತ್ವ ಅಥವಾ ತತ್ವಗಳನ್ನು ತತ್ವಶಾಸ್ತ್ರವು ಅಂಗೀಕರಿಸುತ್ತದೆಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುತ್ತದೆ. ಈಗಾಗಲೇ ನಾವು ಪರಿಚಯಿಸಿಕೊಂಡಿರುವ 'ಋತ'ವು ಒಂದು ತತ್ವಶಾಸ್ತ್ರ ಸಿದ್ಧಾಂತವೆನ್ನಲು ಅಡ್ಡಿಯಿಲ್ಲ. ಆದರೆ ಭಾರತೀಯ ತತ್ವಶಾಸ್ತ್ರ ಗ್ರಂಥಗಳಲ್ಲಿ ಎಲ್ಲೂ ಅದಕ್ಕೆ ಅಂತಹ ಗೌರವಸ್ಥಾನವನ್ನು ನೀಡಲಾಗಿಲ್ಲ. ಪ್ರತಿಯೊಂದು ಕವನದಲ್ಲೂ ಒಂದು ತತ್ವಶಾಸ್ತ್ರ ಪ್ರಮೇಯವನ್ನು ಅರಸುವುದು ಅನಗತ್ಯವಷ್ಟೇ ಅಲ್ಲ, ಅದು ಅಸಾಧ್ಯ ಸಹ. ಅಂದರೆ "ವೇದಕ್ಕೆ ಮಾನ್ಯತೆ" ಎಂಬುದು ತತ್ವಶಾಸ್ತ್ರೇತರ ಅಂಶವಾಗಿದ್ದು ಅದನ್ನು ತತ್ವಶಾಸ್ತ್ರದ ಮೇಲೆ ವೃಥಾ ಆರೋಪಿಸಲಾಗಿದೆ. ಋಗ್ವೇದದ ಹಲವು ಸೂಕ್ತಗಳಲ್ಲಿ ಇದಕ್ಕೆ ಸಮರ್ಥನೆಯು ವಿಪುಲವಾಗಿ ದೊರೆಯುತ್ತದೆ. ಪ್ರಸ್ತುತ ಮಾಲಿಕೆಯಲ್ಲಿ ಇದು ಆರನೆಯ ಕಂತು.**

ಏಡಿಗಳು ಮತ್ತು ಕಪ್ಪೆಗಳು ಚಳಿಗಾಲದಲ್ಲಿ ನಿಶ್ಚೇಷ್ಟವಾಗಿ ಎಲ್ಲೋ ಬಿದ್ದುಕೊಂಡಿರುತ್ತವೆ. ಆ ಸ್ಥಿತಿಯನ್ನು 'ಶಿಶಿರಸುಪ್ತಿ' ಎನ್ನುತ್ತಾರೆ. ಮತ್ತೆ ಮಳೆಗಾಲದವರೆಗೆ ಅವಕ್ಕೆ ಅದೇ ಸ್ಥಿತಿ. ಅದೊಂದು ಅಪೂರ್ವವಾದ ವಿಸ್ಮಯದ ಸಂಗತಿ. ಅವು ಜೀವ ಕಳೆದುಕೊಂಡಂತಿದ್ದು, ಮಳೆಯ ನಂತರ ಮರುಹುಟ್ಟು ಪಡೆದಂತೆ ಸಂಭ್ರಮದಿಂದ ಗಾನ ಆರಂಭಿಸುತ್ತವೆ, ಚಲನೆಯಲ್ಲಿ ತೊಡಗುತ್ತವೆ. ಏಡಿಯ ಗಾನ ತಿಳಿಯದು, ಆದರೆ ಕಪ್ಪೆಯ ವಟರುಗುಟ್ಟುವಿಕೆ ಸುಪರಿಚಿತವಾದ್ದು. ಹಿಂದೆ ಕುವಲಯಾನಂದ ಎಂಬ ಯೋಗ ವಿಜ್ಞಾನಿಯೊಬ್ಬರಿದ್ದರು (೧೮೮೩ – ೧೯೬೬). ಯೋಗಕ್ರಿಯೆಗಳಾದ ಆಸನ, ಪ್ರಾಣಾಯಾಮ, ಮುಂತಾದವುಗಳನ್ನು ಕುರಿತು ಪ್ರಯೋಗಗಳನ್ನು ಮಾಡಿ ಅವುಗಳ ಪರಿಣಾಮವನ್ನು ವೈಜ್ಞಾನಿಕವಾಗಿ ನಿಷ್ಕರ್ಷಿಸುವುದು ಅವರ ಸಂಶೋಧನೆಯ ಒಂದು ಭಾಗ. ಹೀಗೆ ಪ್ರಯೋಗದ ಮೂಲಕ ಅಧ್ಯಯನ ಕೈಗೊಂಡವರಲ್ಲಿ ಅವರೇ ಮೊದಲಿಗರು. ಪ್ರಯೋಗಾಲಯದಲ್ಲಿ ಅವರೊಡನೆ



ಸಂಶೋಧನೆ ನಡೆಸುತ್ತಿದ್ದ ಡಾ॥ ಪಿ. ವಿ. ಕರಂಬೇಳ್ಕರ್ ಎಂಬುವವರಿಗೆ ೧೯೩೪ರ ಡಿಸೆಂಬರ್ ೯ರಂದು ಒಂದು ಪತ್ರ ಬರೆದಿದ್ದರು. ಅದು ಭಾಗಶಃ ಹೀಗಿದೆ : "ಏಡಿಗಳ ಮೇಲೆ ಕೆಲವು ಪ್ರಯೋಗಗಳನ್ನು ಮಾಡಬೇಕೆಂದು ಕಳೆದ ವರ್ಷ ನಿಮಗೆ ಸೂಚಿಸಿದ್ದೆ. ಮಳೆಗಾಲದಲ್ಲಿ ಅವು ಸಕ್ರಿಯವಾಗಿದ್ದಾಗ ಮತ್ತು ಮಳೆಗಾಲದ ನಂತರ ಅವು 'ಶಿಶಿರಸುಪ್ತಿ'ಗೆ ತೆರಳಿದಾಗ ಪ್ರಯೋಗಗಳು ನಡೆಯಬೇಕು. ಏಡಿಗಳಲ್ಲಿ ಇದೊಂದು ಜೀವದ್ರವ್ಯ ಪರಿಣಾಮ. ಅದನ್ನು ಪ್ರಯೋಗ ಮುಖೇನ ಅಭ್ಯಸಿಸುವುದು ಅಗತ್ಯ; ಏಕೆಂದರೆ, ಯೋಗಶಾಸ್ತ್ರದ ಕೆಲವು ಗ್ರಂಥಗಳಲ್ಲಿ ಏಡಿಯ ಆ ಸ್ಥಿತಿಯನ್ನು ಸಮಾಧಿಯ ಜೊತೆ ಸಮೀಕರಿಸಲಾಗಿದೆ. ಕಳೆದ ವರ್ಷದ ವರ್ಷಋತುವಿನಲ್ಲಿ ನಾವು ಪ್ರಯೋಗ ನಡೆಸಲಿಲ್ಲ. ಈಗಲೇ ಅಗತ್ಯವಾದ ಉಪಕರಣಗಳನ್ನು ಸಿದ್ಧಪಡಿಸಿಕೊಳ್ಳಲು ಮುಂದಾದರೆ ಮುಂದಿನ ವರ್ಷವಾದರೂ ಪ್ರಯೋಗಗಳನ್ನು ನಡೆಸಲು ಅನುಕೂಲವಾಗುತ್ತದೆ. ಡಾ॥ ವೀಣೇಕರ್ ಜೊತೆ ಚರ್ಚಿಸಿ ಇಂತಹ ಪ್ರಯೋಗವು ಕಾರ್ಯಸಾಧುವೆ ಎಂದು ತೀರ್ಮಾನಿಸಿ ಮತ್ತು ಅವರ ಸಮ್ಮತಿ ಇದ್ದರೆ ಸಿದ್ಧತೆ ಆರಂಭಿಸಬೇಕಾಗಿ ವಿನಂತಿ." ಅಂತಹ ಒಂದು ಪ್ರಯೋಗ ಆಗ ನಡೆಯಲಿಲ್ಲ, ಬೇರೆ ಯಾರೂ ಅದನ್ನು ಇಂದಿಗೂ ಮಾಡಿಲ್ಲ. ಅದು ಬೇರೆಯೇ ಕತೆ.

ಋಗ್ವೇದದ ಕವಿಗಳಿಗೆ ಸಮಾಧಿ ಗೊತ್ತಿರಲಿಲ್ಲವೋ ಏನೋ, ಆದರೆ ಕಪ್ಪೆಗಳ 'ಶಿಶಿರಸುಪ್ತಿ' ಚೆನ್ನಾಗಿ ತಿಳಿದಿತ್ತು. ಋಗ್ವೇದದ ಒಂದು ಸೂಕ್ತಕ್ಕೆ (೭.೧೦೩) 'ಮಂಡೂಕ ಸೂಕ್ತ' ಎಂಬ ಹೆಸರಿದೆ. ಅಂದರೆ, ಕಪ್ಪೆಯ ಸೂಕ್ತ. ವಿಶೇಷವೇನೆಂದರೆ, ಈ ಸೂಕ್ತದಲ್ಲಿ ಕಪ್ಪೆಗಳು ಮಾತ್ರವಲ್ಲ, ವೇದಪಠಣ ಮಾಡುವವರೂ ಕಾಣಿಸಿಕೊಂಡಿದ್ದಾರೆ. ಒಟ್ಟಾಗಿ ಮೂರು ವಿಷಯಗಳು ಈ ಸೂಕ್ತದಲ್ಲಿ ಸೇರಿವೆ : ಕಪ್ಪೆಗಳ ಶಿಶಿರಸುಪ್ತಿ ಮತ್ತು ಮರುಹುಟ್ಟು ಪಡೆದಾಗಿನ ಸಂಭ್ರಮ, ವೇದಪಠಣದಲ್ಲಿ ತಲ್ಲೀನರಾದ ವಟುಗಳು, ಮತ್ತು ಋತುಗಳ ಅಬಾಧಿತ ಚಕ್ರದ ಬಗೆಗಿನ ತಿಳಿವು. ಈ ತಿಳಿವು ಋತ ಪ್ರಜ್ಞೆಯ ಒಂದು ಭಾಗ. ಈ ಸೂಕ್ತವು ಋಗ್ವೇದ ಸೂಕ್ತಗಳ ಉತ್ತರ ಭಾಗಕ್ಕೆ ಸೇರಿದ್ದು, ಅಂದರೆ ಋಗ್ವೇದದ ರಚನೆಯ ಕೊನೆಯ ಹಂತಕ್ಕೆ ಸೇರಿದ್ದು. ಆ ವೇಳೆಗೆ ವೈದಿಕ ಸಮಾಜದಲ್ಲಿ ಸಾಕಷ್ಟು ಬದಲಾವಣೆಗಳು ಆಗಿಹೋಗಿವೆ : ಗಣಗಳು ಶಿಥಿಲಗೊಂಡಿವೆ, ಛಿದ್ರಗೊಳ್ಳುವ ಹಾದಿಯಲ್ಲಿ ನಡೆದಿವೆ. (ವೈದಿಕವಲ್ಲದ ಗಣಗಳಿಗೆ ಈ ಪ್ರಕ್ರಿಯೆ ಆಗ್ಗೆ ಇನ್ನೂ ಅನ್ವಯವಾಗುವಂತಿರಲಿಲ್ಲ; ಕೆಲವು ಬುದ್ಧನ ಕಾಲದವರೆಗೂ ಇದ್ದವು, ಇನ್ನು ಕೆಲವು ಈಗಲೂ ಉಳಿದಿವೆ). ಮೊದಲಿಗೆ ವೇದ ಸೂಕ್ತಗಳ ಗಾನ ಮಾಡುತ್ತಿದ್ದವರಲ್ಲಿ ಒಂದು ವಿಭಾಗವು ಈಗ ವೇದಪಠಣವನ್ನು ಮಾಡಲಾರಂಭಿಸಿದೆ. ಅದನ್ನು ಪರಿಹಾಸಕ್ಕೆ ಗುರಿ ಮಾಡುವ ವಿಭಾಗವೂ ಇದೆ. ಈ ವಿಭಾಗವು ಪಠಣ ಮಾಡುವವರ ವಿಭಾಗಕ್ಕಿಂತಲೂ ದೊಡ್ಡದು.

ಕೇವಲ ಹತ್ತು ಮಂತ್ರಗಳಿರುವ ಪ್ರಸ್ತುತ ಸೂಕ್ತವು ವಸಿಷ್ಠನದು ಎನ್ನಲಾಗಿದೆ. ಸೂಕ್ತದ ದೇವತೆ ಕಪ್ಪೆ ಎಂದಿದ್ದಾನೆ ಸಾಯಣ. ನಿಜಕ್ಕೂ ಇಲ್ಲಿ ಯಾವ ದೇವತೆಯೂ ಇಲ್ಲವೆಂಬುದು ಸೂಕ್ತದಿಂದ ಸ್ಪಷ್ಟವಾಗುತ್ತದೆ. ಇರುವುದು ಪ್ರಕೃತಿಯ ಒಂದು ವಿದ್ಯಮಾನದ ಚಿತ್ರಣ. ಅದಕ್ಕೆ ಕಾವ್ಯದ ಉಡಿಗೆ ತೊಡಿಸಲಾಗಿದೆ. ಕಾವ್ಯಾಲಂಕಾರದಲ್ಲಿ ಉಪಮೆ ಮತ್ತು ರೂಪಕ ಎರಡೂ ಪ್ರಧಾನವಾದುವು ಮತ್ತು ಸಂಬಂಧ ಉಳ್ಳವು. 'ನೀನೊಬ್ಬ ಕೋತಿಯಂತಿದ್ದೀಯೆ' ಎಂಬುದು ಉಪಮೆ; ಹೋಲಿಸಲಾದ ಎರಡು ಘಟಕಗಳು ಪ್ರತ್ಯೇಕವಾಗಿಯೇ ಉಳಿದಿವೆ; 'ನೀನೊಂದು ಕೋತಿ' ಎಂಬುದು ರೂಪಕ. ಅದರಲ್ಲಿ ಉಪಮೆ ಇದೆ, ಆದರೆ ಎರಡರ ಸಾಮಾನ್ಯ ಲಕ್ಷಣಗಳು ಎಷ್ಟು ಗಾಢವಾಗಿ ಸಮಾನವಾಗಿವೆ ಎಂದರೆ 'ಇದರಂತೆ ಅದು' ಎನ್ನುವ ಬದಲು 'ಇದೇ ಅದು' ಎನ್ನುವಷ್ಟರಮಟ್ಟಿಗಿದೆ. ಕಪ್ಪೆಗಳ ಸೂಕ್ತದ ಮೊದಲ ಮಂತ್ರ (೭.೧೦೩.೧) ಹೀಗಿದೆ : ಕಪ್ಪೆಗಳು ಒಂದು ವರ್ಷ ಕಾಲ ಮಲಗಿಬಿಟ್ಟಿದ್ದವು; ಮಳೆಯಿಂದಾಗಿ ಮರುಹುಟ್ಟು ಪಡೆದಿರುವ ಅವು ವಿಧವಿಧವಾಗಿ ಮಾತನಾಡಲಾರಂಭಿಸಿವೆ. ಅವು ವೇದಪಠಣದ ವ್ರತದಲ್ಲಿ ನಿರತವಾಗಿರುವ ಬ್ರಾಹ್ಮಣರೇ ಆಗಿವೆ (ಸಂವತ್ಸರಂ ಶಶಯಾನಾ ಬ್ರಾಹ್ಮಣಾ ವ್ರತಚಾರಿಣಃ। ವಾಚಂ ಪರ್ಜನ್ಯಜಿನ್ವಿತಾಂ ಪ್ರ ಮಂಡೂಕಾ ಅವಾದಿಷುಃ॥). ಇಲ್ಲಿ 'ಬ್ರಾಹ್ಮಣ' ಎಂದರೆ ಇಂದು ನಮಗೆ ಗೊತ್ತಿರುವ ಬ್ರಾಹ್ಮಣ ಜಾತಿಯವರನ್ನು ಕಲ್ಪಿಸಿಕೊಳ್ಳಬಾರದು. ಗಾನ ಮಾಡುವ ಬದಲು ನಿರ್ದಿಷ್ಟವಾಗಿ ಒಂದು ವಿಧದಲ್ಲಿ ಪಠಣ ಮಾಡುವವರು ಎಂದಷ್ಟೇ ಭಾವಿಸಿಕೊಳ್ಳೋಣ, ಏಕೆಂದರೆ ವರ್ಣ ವಿಭಜನೆಯು ಆಗ್ಗೆ ಇನ್ನೂ ಅಷ್ಟೊಂದು ತೀವ್ರವಾಗಿ ನೆಲೆಗೊಂಡಿರಲಿಲ್ಲ. ವೇದಪಠಣ ಮಾಡುವವರನ್ನು ಇಲ್ಲಿ ಶ್ಲಾಘಿಸಲಾಗುತ್ತಿಲ್ಲ, ಬದಲಾಗಿ ಲೇವಡಿ ಮಾಡಲಾಗುತ್ತಿದೆ. 'ನಿಮ್ಮ ಪಠಣವು ಕಪ್ಪೆಗಳ ವಟರುಗುಟ್ಟುವಿಕೆಯಂತಿದೆ' ಎಂಬ ಸೂಚನೆ ಸ್ಪಷ್ಟವಾಗಿದೆ. ಈ ಕಪ್ಪೆಗಳೇ 'ಬ್ರಾಹ್ಮಣಾ ವ್ರತಚಾರಿಣಃ' (ಅಂದರೆ, ಕಪ್ಪೆಗಳು ಮತ್ತು ಪಠಣ ಮಾಡುವವರು ಬೇರೆಯಲ್ಲ, ಎರಡೂ ಒಂದೇ). ಗಂಭೀರವಾದೊಂದು ಸಂಗತಿಯನ್ನು ಲಘುವಾಗಿ ನಿರೂಪಿಸುವಲ್ಲಿ ಕವಿಯ ಹಾಸ್ಯಪ್ರಜ್ಞೆ ಗಮನಾರ್ಹವಾಗಿದೆ. ಅದನ್ನು ವ್ಯಂಗ್ಯದ ಟೀಕೆಯೆಂದು ಬೇಕಾದರೂ ಭಾವಿಸಬಹುದು. ಕವಿಯೂ 'ಬ್ರಾಹ್ಮಣ'ನೇ ಆಗಿದ್ದಲ್ಲಿ, ತನ್ನ ಬಗ್ಗೆ ತಾನೇ ಹಾಸ್ಯ ಮಾಡಿಕೊಳ್ಳುವ ಪ್ರವೃತ್ತಿಯು ಮನೋಜ್ಞವೆಂದೇ ಹೇಳಬೇಕು.

ಮುಂದಿನ ಮಂತ್ರದಲ್ಲಿ (೭.೧೦೩.೨) ದಿವ್ಯವಾದ ಮಳೆಯು ಬತ್ತಿಹೋಗಿದ್ದ ಸರೋವರಕ್ಕೆ ನೀರು ತುಂಬಿರುವುದನ್ನು ಜನರು ತೊಗಲಿನ ಚೀಲಕ್ಕೆ (ದೃತಿ) ನೀರು ತುಂಬಿಕೊಳ್ಳುವುದರೊಡನೆ ಹೋಲಿಸಲಾಗಿದೆ. ಬತ್ತಿದ್ದ ಸರೋವರದ ಅಂಗಳದಲ್ಲಿ ಬಿಸಿಲಿನ ಝಳಕ್ಕೆ ತುತ್ತಾಗಿದ್ದ ಕಪ್ಪೆಗಳು ಮಳೆಯ ನಂತರ ದನಿಯೆತ್ತುವುದು ಗೋವುಗಳು ಕರುಗಳೊಂದಿಗೆ ಹೊರಡಿಸುವ ಧ್ವನಿಯನ್ನು ನೆನಪಿಸುತ್ತದೆ (ದಿವ್ಯಾ ಆಪೋ ಅಭಿ ಯದೇನಂ ಆಯನ್ ದೃತಿಂ ನ ಶುಷ್ಕಂ ಸರಸೀ ಶಯಾನಂ। ಗವಾಮಹ ನ ಮಾಯುಃ ವತ್ಸಿನೀನಾಂ ಮಂಡೂಕಾನಾಂ ವಗ್ನುರತ್ರಾ ಸಮೇತಿ॥). ನೀರು ತುಂಬಿಕೊಳ್ಳಲು ಅಂದಿನ ಜನರ ಪಾತ್ರೆ ಎಂದರೆ ತೊಗಲಿನ ಚೀಲ. ಇದು ಅವರ ನಾಗರಿಕತೆಯ ಹಂತದ ಸೂಚಕವಲ್ಲವೆ? ಅವರಿಗೆ ಆನಂದ ಉಂಟುಮಾಡುತ್ತಿದ್ದ ವಿಷಯಗಳಲ್ಲಿ ಗೋವುಗಳು ಮತ್ತು ಕರುಗಳ ನಾದವು ಸೇರಿದೆ. ಅವರ ನಾಗರಿಕತೆಯ ಹಂತವು ಪಶುಪಾಲನೆಯದು; ಕ್ರಮೇಣ ಕೃಷಿಗೆ ಹೊರಳಲಿರುವ ಜನ ಅವರು. (ಮಾಯುಃ ಮತ್ತು ವಗ್ನುಃ ಎಂಬ ಎರಡು ಪದಗಳೂ 'ಶಬ್ದ' ಎಂಬರ್ಥವುಳ್ಳವು. ಆದರೆ ಅದರಲ್ಲಿ ಭಿನ್ನತೆ ಇದೆ : ಗೋವಿನದು 'ಮಾಯುಃ' ಆದರೆ ಕಪ್ಪೆಯದು 'ವಗ್ನುಃ' ಆಗಿದೆ. ಸೂಕ್ಷ್ಮ ವ್ಯತ್ಯಾಸಗಳನ್ನು ತೋರಿಸಲು ಬೇರೆ ಬೇರೆ ಕ್ರಿಯಾಪದಗಳನ್ನು ಆಗ್ಗೆ ಆಗಲೇ ಬಳಸಲಾಗುತ್ತಿತ್ತು. ವಟರುಗುಟ್ಟುವುದು, ಗುಟುರುಹಾಕುವುದು, ಅರಚುವುದು, 'ಅಂಬಾ' ಎನ್ನುವುದು, ಎಲ್ಲವೂ ಶಬ್ದ ಸೂಚಕಗಳೇ; ಆದರೆ ಶಬ್ದದ ಗುಣ ಬೇರೆ ಬೇರೆ.

ಎರಡನೆಯ ಮಂತ್ರದಲ್ಲಿ ಗೋವು–ಕರುಗಳ ಸಂಬಂಧವನ್ನು ಹೇಳಿದೆ ಮತ್ತು ಮುಂದಿನ ಮಂತ್ರದಲ್ಲಿ (೭.೧೦೩.೩) ತಂದೆ–ಮಗನ ಸಂಬಂಧದ ಪ್ರಸ್ತಾಪವಿದೆ. ಮಳೆಗಾಗಿ ಹಾತೊರೆಯುತ್ತಿದ್ದ ಕಪ್ಪೆಗಳು ಈಗ ಮಳೆಯಲ್ಲಿ ತೊಯ್ದು ಹರ್ಷಿಸುತ್ತಿವೆ. ಮಗುವು ತಂದೆಯನ್ನು ತೊದಲು ನುಡಿಯಲ್ಲಿ ಕೂಗುತ್ತಾ ಅವನತ್ತ ಸಾಗುವಂತೆ ಕಪ್ಪೆಗಳು ತಮ್ಮತಮ್ಮಲ್ಲಿ ಅಬ್ಬರಿಸುತ್ತಾ ಒಂದನ್ನೊಂದು ಕೂಗುತ್ತಿವೆ, ಒಂದನ್ನೊಂದು ಕೂಡಿಕೊಳ್ಳುತ್ತಿವೆ (ಯದೀಮೇನಾನ್ ಉಶತೋ ಅಭ್ಯವರ್ಷೀತ್ ತುಷ್ಯಾವತಃ ಪ್ರಾವೃಷಿ ಆಗತಾಯಾಂ। ಅಕ್ಖಲೀಕೃತ್ಯ ಪಿತರಂ ನ ಪುತ್ರೋ ಅನ್ಯೋ ಅನ್ಯಂ ಉಪ ವದಂತಂ ಏತಿ॥). ವಾತ್ಸಲ್ಯದ ಛಾಯೆಯನ್ನು ಕವಿಯು ಸರಳವಾಗಿ ಮತ್ತು ಸುಂದರವಾಗಿ ಸೃಷ್ಟಿಸಿರುವುದು ಈ ಪದ್ಯದ ವಿಶೇಷ. 'ಅಕ್ಖಲೀಕೃತ್ಯ' ಎಂಬಲ್ಲಿ ಕಪ್ಪೆಗಳ ಸಡಗರದ ಸದ್ದುಗಳು ಮೇಳವಿಸಿರುವುದನ್ನು ಕವಿಯು ಸೂಚಿಸಿದ್ದಾನೆ. ಅದೇ ಸಡಗರವನ್ನು ಮುಂದಿನ ಪದ್ಯದಲ್ಲಿ (ಮಂತ್ರ ೪) ವಿಸ್ತರಿಸಲಾಗಿದೆ. ಮಾನವ ಸಮುದಾಯದ ಪ್ರತಿಕೃತಿಯೋ ಎಂಬಂತೆ ಕಪ್ಪೆಗಳ ಹರ್ಷೋದ್ಗಾರಗಳನ್ನು, ಕೂಡುವಿಕೆಯ ಸಂಭ್ರಮವನ್ನು ಮತ್ತು ನವಚೇತನದ ಆವಿರ್ಭಾವವನ್ನು ಕವಿಯು ವರ್ಣಿಸಿದ್ದಾನೆ : ಒಂದು ಇನ್ನೊಂದನ್ನು ಸಮೀಪಿಸಿ ಅಪ್ಪಿಕೊಳ್ಳುತ್ತದೆ. ಅಂತಹ ಮುದವನ್ನು ಮಳೆಯು ನೀಡಿದೆ. (ಜಾನಪದ ತಜ್ಞರು ಮಾನವರ ಈ ಭಾವವನ್ನು ಪ್ರಕಟಿಸುವ ಗೀತೆಗಳನ್ನು ಉದಾಹರಿಸಬಲ್ಲರು). ನೀರಿನ ವೃಷ್ಟಿಯನ್ನು ಸವಿಯುತ್ತಿರುವ ಕಿರಣದ ಬಣ್ಣದ (ಪೃಶ್ನಿ) ಕಪ್ಪೆಯು ಹಸಿರು ಬಣ್ಣದ ಕಪ್ಪೆಯನ್ನು ಸಮೀಪಿಸಿ ಸಂಭಾಷಿಸುತ್ತದೆ. ಇಂತಹ ಅನೇಕ ಕಪ್ಪೆಗಳ ಶಬ್ದದ ಕಲರವ ಕವಿಗೆ ಆಪ್ಯಾಯಮಾನವಾಗಿದೆ. (ಅನ್ಯೋ ಅನ್ಯಂ ಅನು ಗೃಭ್ಣಾತಿ ಏನೋಃ ಅಪಾಂ ಪ್ರಸರ್ಗೇ ಯತ್ ಅಮಂದಿಷಾತಾಂ। ಮಂಡೂಕೋ ಯದಭಿವೃಷ್ಟಃ ಕನಿಷ್ಕನ್ ಪೃಶ್ನಿಃ ಸಂಪೃಕ್ತೇ ಹರಿತೇನ ವಾಚಂ॥). ಮಳೆಯು ಸಂತಸ, ಉಲ್ಲಾಸ, ಹೊಸ ಜೀವ ಮತ್ತು ಸಮುದಾಯದ ಸಡಗರಕ್ಕೆ ನಾಂದಿ. ಕವಿಯ ಜೀವನದಲ್ಲಿ ಮಳೆಯ ಪಾತ್ರ ಇದು; ಕಪ್ಪೆಗಳ

ಸಂಭ್ರಮವನ್ನು ವರ್ಣಿಸುತ್ತಾ ತನ್ನ ಸಮುದಾಯದ ಆಕಾಂಕ್ಷೆ ಮತ್ತು ಹರ್ಷವನ್ನು ಕವಿಯು ಸೂಚಿಸುತ್ತಿದ್ದಾನೆ. ಮಂಡೂಕ ಸೂಕ್ತವನ್ನು ಒಂದು ಒಳ್ಳೆಯ ಕವನವನ್ನಾಗಿ ಓದಿಕೊಳ್ಳಬೇಕಾದ್ದು ಹಾಗೆ; ಪ್ರತಿಫಲನಗಳನ್ನು ಗುರುತಿಸುತ್ತಾ ಹೋಗುವುದರ ಮುಖಾಂತರ ಅದು ನಡೆಯಬೇಕು.

ಮುಂದಿನ ಮಂತ್ರದಲ್ಲಿ ಎರಡನೆಯ ಬಾರಿಗೆ ವೇದಪಠಣದ ಪ್ರಸ್ತಾಪ ಬಂದಿದೆ. ಮೊದಲನೆಯ ಮಂತ್ರದಲ್ಲಿ ಸಾಮೂಹಿಕವಾಗಿ ವೇದಮಂತ್ರಗಳ ಘೋಷ ಮಾಡುತ್ತಿದ್ದವರು ಪಾತ್ರಧಾರಿಗಳು; ಈ ಮಂತ್ರದಲ್ಲಿ (೭.೧೦೩.೫) ವೇದಪಠಣವನ್ನು ಬೋಧಿಸುವವನು ಮತ್ತು ಬೋಧನೆ ಪಡೆಯುವವನು ಪಾತ್ರಧಾರಿಗಳು. ಕಪ್ಪೆಗಳು ಪರಸ್ಪರ ಸಂಭಾಷಿಸುವುದು ಹೇಗಿದೆಯೆಂದರೆ ಶಿಕ್ಷಕನು ಹೇಳಿಕೊಟ್ಟಿದ್ದನ್ನು ಕಲಿಯುತ್ತಿರುವವನು ಪುನರಾವೃತ್ತಿ ಮಾಡುವಂತಿದೆ. ಬೇಸಿಗೆಯಲ್ಲಿ ವಿಕಲಾಂಗರಂತಾಗಿದ್ದ ಕಪ್ಪೆಗಳು ಮಳೆಯ ನಂತರ ಚೈತನ್ಯವನ್ನು ತುಂಬಿಕೊಂಡಿವೆ. (ಯದೇಷಾಂ ಅನ್ಯೋ ಅನ್ಯಸ್ಯ ವಾಚಂ ಶಾಕ್ತಸ್ಯೇವ ವದತಿ ಶಿಕ್ಷಮಾಣಃ। ಸರ್ವಂ ತದೇಷಾಂ ಸಮೃಧೇವ ಪರ್ವ ಯತ್ಸುವಾಚೋ ವದಥನ ಅಧ್ಯಪ್ಸು॥). ಈ ಕಪ್ಪೆಗಳ ಧ್ವನಿಯು ಏಕಪ್ರಕಾರವಲ್ಲ; ಒಂದು, ಗೋವಿನ ಧ್ವನಿಯ ಅನುಕರಣದಂತಿದೆ, ಇನ್ನೊಂದರದು ಮೇಕೆಯ ಧ್ವನಿಯಂತಿದೆ. ಬಣ್ಣಗಳಲ್ಲಿ ವೈವಿಧ್ಯ ಇರುವಂತೆ ಧ್ವನಿಯಲ್ಲಿಯೂ ವೈವಿಧ್ಯವಿದೆ. ಎಲ್ಲ ಕಪ್ಪೆಗಳ ಹೆಸರೂ ಒಂದೇ, 'ಕಪ್ಪೆಗಳು' ಎಂದು; ಆದರೆ ರೂಪಗಳು ಬೇರೆ ಬೇರೆ. ಅವು ಎಲ್ಲೆಲ್ಲೂ ಶಬ್ದ ಮಾಡುತ್ತಾ ಜೀವ ತಳೆಯುತ್ತವೆ (೭.೧೦೩.೬: ಗೋಮಾಯುರೇಕೋ ಅಜಮಾಯುರೇಕಃ ಪೃಶ್ನಿರೇಕೋ ಹರಿತ ಏಕ ಏಷಾಂ। ಸಮಾನಂ ನಾಮ ಬಿಭ್ರತೋ ವಿರೂಪಾಃ ಪುರುತ್ರಾ ವಾಚಂ ಪಿಪಿಶುಃ ವದಂತಃ॥). ಮುಂದಿನ ಮಂತ್ರದಲ್ಲಿ (ಮಂತ್ರ ೭) ಮತ್ತೆ, ಅಂದರೆ ಮೂರನೆಯ ಬಾರಿ, ವೇದಘೋಷ ಮಾಡುವವರು ಕಾಣಿಸಿಕೊಳ್ಳುತ್ತಾರೆ. ಸೋಮರಸಪಾನವಿರುವ 'ಅತಿರಾತ್ರ' ಎಂಬ ಆಚರಣೆಯ ಸಮಯದಲ್ಲಿ ರಾತ್ರಿಯಿಡೀ ಘೋಷ ಮಾಡುತ್ತಿರುತ್ತಾರಲ್ಲ, ಹಾಗೆ ಕಪ್ಪೆಗಳು ಎಲ್ಲೆಲ್ಲೂ ರಾತ್ರಿಯಿಡೀ ಶಬ್ದ ಮಾಡುತ್ತಿರುತ್ತವೆ. ಮಳೆಯು ತಂದಿತ್ತಿರುವ ಜೀವನೋತ್ಸಾಹ ಅಂಥದು. (ಬ್ರಾಹ್ಮಣಾಸೋ ಅತಿರಾತ್ರೇ ನ ಸೋಮೇ ಸರೋ ನ ಪೂರ್ಣಮಭಿತೋ ವದಂತಃ। ಸಂವತ್ಸರಸ್ಯ ತದಹಃ ಪರಿ ಷ್ಠ ಯನ್ಮಂಡೂಕಾಃ ಪ್ರಾವೃಷೀಣಂ ಬಭೂವ॥) ವರ್ಷವೆಲ್ಲಾ ಜೀವ ತೊರೆದಿದ್ದ ಕಪ್ಪೆಗಳು ಮಳೆಯಿಂದಾಗಿ ಜೀವ ತಳೆದಾಗ ಅದನ್ನು ಅತ್ಯುತ್ಸಾಹದಿಂದ ಸ್ವಾಗತಿಸಿ ಸಂಭ್ರಮಿಸುವುದು ಸಹಜವೆಂಬ ಭಾವ ಇಲ್ಲಿದೆ. ಅದನ್ನು ಮುಂದಿನ ಮಂತ್ರದಲ್ಲೂ (ಮಂತ್ರ ೮) ವಿಸ್ತರಿಸಿ ಹೇಳಲಾಗಿದೆ.

ಕಡೆಯ ಎರಡು ಮಂತ್ರಗಳು (೯ ಮತ್ತು ೧೦) ವಿಸ್ಮಯವನ್ನುಂಟುಮಾಡುವ ಸುತ್ತಣ ಪ್ರಕೃತಿಯಲ್ಲಿನ ಅಬಾಧಿತ ನಿಯಮವನ್ನು ವಿನಯದಿಂದ ಮನ್ನಿಸುತ್ತಾ ಕಪ್ಪೆಗಳು ಪುನರ್ಜೀವ ಪಡೆದಿರುವಂತೆ ಜನಸಮೂಹವು ಗೋಸಂಪತ್ತಿನಿಂದ ವರ್ಧಿಸಲಿ, ಪ್ರಕೃತಿಯಲ್ಲಿ ವಿಧವಿಧವಾದ ಮೂಲಿಕೆಗಳು ಬೇರು ಬಿಡಲಿ, ಎಂಬ ಆಶಯವನ್ನು ಪ್ರಕಟಿಸುತ್ತವೆ. ಅಬಾಧಿತ ನಿಯಮ ಎಂತಹದು? ಮಾನವರು, ಕಪ್ಪೆಗಳು, ಎಲ್ಲರೂ ಅದನ್ನು ಮಾನ್ಯ ಮಾಡಬೇಕು. ವರ್ಷದ ಹನ್ನೆರಡು ತಿಂಗಳುಗಳಲ್ಲಿ ಘಟಿಸುವ ಋತುಗಳು, ಆ ಋತುಗಳ ವಿಶಿಷ್ಟ ಲಕ್ಷಣಗಳು (ಅಂದರೆ, ಬಿಸಿಲು–ಮಳೆ–ಚಳಿ ಇತ್ಯಾದಿ), ಇವನ್ನು ನರನೂ ಮೀರುವಂತಿಲ್ಲ, ಮಂಡೂಕವೂ ಮೀರುವಂತಿಲ್ಲ. ಅದೊಂದು ಅಪರಿಹಾರ್ಯ ಪ್ರಕೃತಿ ವಿಧಾನ. ಅದನ್ನು ೯ನೆಯ ಮಂತ್ರದಲ್ಲಿ 'ದೇವ ಹಿತಿ' ಎನ್ನಲಾಗಿದೆ. ಕಪ್ಪೆಗಳು ಬಿಸಿಲುಗಾಲದಲ್ಲಿ ತಾಪ ಅನುಭವಿಸುತ್ತವೆ, ಮಳೆಗಾಲದಲ್ಲಿ ನೆನೆದು ತೊಪ್ಪೆಯಾಗಿ ಸಂತಸ ದಿಂದಿರುತ್ತವೆ (ಮಂತ್ರ: ದೇವ ಹಿತಿಂ ಜುಗುಪುಃ ದ್ವಾದಶಸ್ಯ ಋತುಃ ನರೋ ನ ಪ್ರ ಮಿನಂತ್ಯೇತೇ। ಸಂವತ್ಸರೇ ಪ್ರಾವೃಷಿ ಆಗತಾಯಾಂ ತಪ್ತಾ ಘರ್ಮಾ ಅಶ್ನುವತೇ ವಿಸರ್ಗಂ ॥). ಕಡೆಯ ಮಂತ್ರ (೭.೧೦೩.೧೦) ಹೇಳುತ್ತದೆ: "ಗೋವಿನ ಶಬ್ದ ಮಾಡುವ, ಮೇಕೆಯ ಶಬ್ದ ಮಾಡುವ, ಬಿಳಿಯ, ಹಸಿರಿನ ಕಪ್ಪೆಗಳೆಲ್ಲಾ ನಮಗೆ ಸಂಪತ್ತು ನೀಡಲಿ. ಸಹಸ್ರ ಸಂಖ್ಯೆಯಲ್ಲಿ ಧಾನ್ಯ, ಸಸ್ಯ, ಮೂಲಿಕೆ, ಇತ್ಯಾದಿಗಳನ್ನೆಲ್ಲಾ ಬೆಳೆಸುವ ಕಪ್ಪೆಗಳು ನಮಗೆ ಬೇಕಾದಷ್ಟು ಗೋವುಗಳನ್ನು ಕೊಟ್ಟು ಜೀವನವನ್ನು ವರ್ಧಿಸಲಿ" (ಗೋಮಾಯುರದಾತ್ ಅಜಮಾಯುರದಾತ್ ಪೃಶ್ನಿರದಾತ್ ಹರಿತೋ ನೋ ವಸೂನಿ। ಗವಾಂ ಮಂಡೂಕಾ ದದತಃ ಶತಾನಿ ಸಹಸ್ರಸಾವೇ ಪ್ರ ತಿರಂತ ಆಯುಃ॥). ಕಪ್ಪೆಗಳು ಸಂಪತ್ತು ಮತ್ತು ಗೋವುಗಳನ್ನು ಕರುಣಿಸಬಲ್ಲವೆ? ಕಪ್ಪೆಗಳು ಮೂಲಿಕೆಗಳನ್ನು ಬೆಳೆಸುತ್ತವೆಯೆ? ಅದು ಮತ್ತೊಂದು ರೂಪಕ: ಕಪ್ಪೆ ಬೇರೆಯಲ್ಲ, ಮಳೆ ಬೇರೆಯಲ್ಲ. ಮಳೆಯು ಕಪ್ಪೆಗಳಿಗೆ ಜೀವ ಕೊಡುತ್ತದೆ, ಮಳೆಯು ಬೆಳೆಯನ್ನು ಬೆಳೆಸುತ್ತದೆ. ಈ ರೂಪಕದ ಕಾವ್ಯಾತ್ಮಕತೆಯನ್ನು ಗಮನಿಸದೆ 'ಈ ಸೂಕ್ತದ ದೇವತೆಯು ಕಪ್ಪೆ, ಮಳೆಗಾಗಿ ಈ ಸೂಕ್ತವನ್ನು ಜಪಿಸಬೇಕು' ಎಂದು ಸಂಪ್ರದಾಯವು ಬೆಳೆದಿದೆ. ಋಗ್ವೇದದ ಮಂತ್ರಗಳಿಗೆ ಅಂತಹ ಸಂಪ್ರದಾಯಗಳನ್ನು ಕಟ್ಟಿಕೊಡುವ ಒಂದು ಪ್ರಾಚೀನ ಗ್ರಂಥವಿದೆ, ಅದರ ಹೆಸರು "ಅನುಕ್ರಮಣಿ."

ಈಗ ಯೋಚನೆ ಮಾಡೋಣ: ಈ ಸೂಕ್ತ ಮತ್ತು ಇಂತಹ ಅನೇಕ ಬೇರೆ ಸೂಕ್ತಗಳಲ್ಲಿ ಕಾವ್ಯವಿದೆಯೋ, ನಿಗೂಢಾರ್ಥವಿದೆಯೋ? ಒಬ್ಬ ತತ್ವಶಾಸ್ತ್ರಜ್ಞನು ತನ್ನ ಸಿದ್ಧಾಂತವನ್ನು ಬೆಳೆಸುವಾಗ 'ವೇದದ ಅಧಿಕಾರಕ್ಕೆ ಮಾನ್ಯತೆ ನೀಡಬೇಕು' ಎಂದರೆ ಇಂತಹ ಸೂಕ್ತದ ಹಿನ್ನೆಲೆಯಲ್ಲಿ ಅವನು ಯಾವ ಸಿದ್ಧಾಂತವನ್ನು ಪುರಸ್ಕರಿಸಬೇಕು? ಆಸ್ತಿಕ ಬಣದ ಭಾರತೀಯ ತತ್ವಶಾಸ್ತ್ರವು ವೇದಕ್ಕೆ ಮಾನ್ಯತೆ ನೀಡುತ್ತದೆಂಬ ಮಾತು ತೀರಾ ಯಾಂತ್ರಿಕವೆನಿಸುವುದು ಈ ಕಾರಣದಿಂದ. ಯಾವ ತತ್ವಶಾಸ್ತ್ರ ಸಿದ್ಧಾಂತದ ಬಗೆಗೂ ತಲೆಕೆಡಿಸಿಕೊಳ್ಳದ ಇಂತಹ ಋಗ್ವೇದ ಸೂಕ್ತಗಳು ನೂರಾರಿವೆ. ಅಂಥವೇ ಜಾಸ್ತಿ, ತತ್ವಶಾಸ್ತ್ರದ ಅಂಚಿಗೆ ಬರುವ ಸೂಕ್ತಗಳು ಕೆಲವು ಮಾತ್ರ. ಅಂತಹ ಕೆಲವನ್ನು ಮುಂದೆ ನೋಡೋಣ. ಸದ್ಯದಲ್ಲಿ, ತತ್ವಶಾಸ್ತ್ರದ ಗೀಳು ಲವಲೇಶವೂ ಇಲ್ಲದ ಇನ್ನೊಂದು ಋಗ್ವೇದ ಸೂಕ್ತವನ್ನು ಪರಿಚಯಿಸಿಕೊಳ್ಳೋಣ. ಆ ಸೂಕ್ತಕ್ಕೆ "ಜೂಜುಗಾರನ ಅಳಲು" (ಅಥವಾ ಅಳರ್ಪು) ಎಂಬ ಶೀರ್ಷಿಕೆಯು ಸೂಕ್ತವಾಗಿರುತ್ತದೆ. ಆ ಸೂಕ್ತದಲ್ಲಿ ಬರುವ ಮಾತೊಂದು

ಹೀಗಿದೆ: ಸಾಲವನ್ನು ಮಾಡಿ ಅದನ್ನು ತೀರಿಸದಿದ್ದವನು ದಾಸನಾಗುತ್ತಾನೆ, ಅವನನ್ನು ಹಿಡಿದುಕೊಂಡು ಹೋಗಿರೆಂದು ಸಾಲಗಾರನ ತಂದೆ–ತಾಯಂದಿರು ಲೇಣಿದಾರನಿಗೆ ಹೇಳುತ್ತಾರೆ (೧೦.೩೪.೪). ಋಗ್ವೇದ ಕಾಲವು ಅಂತ್ಯವನ್ನು ಸಮೀಪಿಸುತ್ತಿದ್ದ ಕಾಲದ ಸಾಮಾಜಿಕ ಮತ್ತು ಸಾಮೂಹಿಕ ಚಿತ್ರಣವೊಂದನ್ನು ನೀಡುವ ಅದ್ಭುತ ಕವನ ಈ ಜೂಜುಗಾರನ ಸೂಕ್ತ (೧೦.೩೪). ಅದು ಕಾವ್ಯವೋ, ನಿಗೂಢತೆಯ ಪರಾಕಾಷ್ಠೆಯೋ, ತತ್ವಶಾಸ್ತ್ರ ಸಿದ್ಧಾಂತವೋ, ಸಾಮೂಹಿಕ ಜೀವನಶೈಲಿಯು ಶಿಥಿಲವಾಗಿರುತ್ತಿರುವಾಗಿನ ತುಮುಲವೋ ಎಂಬುದನ್ನು ಓದುಗರು ತೀರ್ಮಾನಿಸಿಕೊಳ್ಳಬಹುದು. ಅದಕ್ಕೆ ತತ್ವಶಾಸ್ತ್ರದ ಮಾನ್ಯತೆಯೋ, ಸಮಾಜಶಾಸ್ತ್ರದ ಮಾನ್ಯತೆಯೋ, ಯಾವುದು ದಕ್ಕಬೇಕೆಂಬುದನ್ನೂ ಓದುಗರೇ ನಿಷ್ಕರ್ಷೆ ಮಾಡಿಕೊಳ್ಳಬೇಕು. ಸಾಯಣನು ತನ್ನ ಕೌಶಲವನ್ನೆಲ್ಲಾ ವ್ಯಯಿಸಹೋಗಿ ಈ ಸೂಕ್ತದ ದೇವತೆ ಯಾರೆಂಬುದರ ಬಗ್ಗೆ ಬಹಳ ಸಂದಿಗ್ಧತೆಗೆ ಸಿಲುಕಿದ್ದಾನೆ. ದೇವತೆಯನ್ನು ಸ್ತುತಿಸದ ಸೂಕ್ತವೊಂದು ಋಗ್ವೇದದಲ್ಲಿರಲು ಹೇಗೆ ಸಾಧ್ಯ, ಎಂಬ ಜಡ್ಡು ಮಂಕುತನ ಅವನನ್ನು ಬಾಧಿಸುತ್ತದೆ. ಅಂತಹ ಬಾಧೆಯನ್ನು ದ್ವಿಗುಣಗೊಳಿಸಿಕೊಂಡಿರುವ "ಆಧುನಿಕ ಸಾಯಣರು" ನಮ್ಮಲ್ಲಿ ಪ್ರಶಸ್ತ "ವೈದಿಕ ವಿದ್ವಾಂಸರು" ಎಂಬ ಘನವಾದ ಬಿರುದನ್ನು ಪಡೆದುಕೊಂಡುಬಿಟ್ಟಿದ್ದಾರೆ. ಆಂಗ್ಲ ಕವಿ ರಾಬರ್ಟ್ ಬ್ರೌನಿಂಗ್‌ನ ಕೆಲವು ಕವನಗಳನ್ನು "ನಾಟಕೀಯ ಸ್ವಗತ" ಎಂದು ಬಣ್ಣಿಸುವುದುಂಟು. ಋಗ್ವೇದದ 'ಜೂಜುಗಾರನ ಅಳಲು' ಅಂತಹ ಒಂದು ಕವನ. ಋಗ್ವೇದದಲ್ಲಾಗಲೆ ಅಂತಹ ಒಂದು ಕಾವ್ಯಶೈಲಿಯನ್ನು ಅಳವಡಿಸಿಕೊಳ್ಳಲಾಗಿದೆಯೆಂಬುದು ಚಾರಿತ್ರಿಕವಾಗಿ ಬಹು ಹೆಮ್ಮೆಯ ಸಂಗತಿಯೆಂದು ನಮ್ಮ ವೈದಿಕ ವಿದ್ವಾಂಸರನೇಕರು ಏಕೆ ತಿಳಿಯುವುದಿಲ್ಲವೋ ಗೊತ್ತಿಲ್ಲ. ಈ ಸೂಕ್ತವನ್ನು ಕವಷ ಐಲೂಷ ಎಂಬುವನು ರಚಿಸಿದನೆಂಬ ಮಾತಿದೆ. ಮುಜವಾನ್ ಎಂಬುವವನ ಮಗ ಅಕ್ಷನ ಕೃತಿಯೂ ಇರಬಹುದೆಂದು ಸಾಯಣನ ಅನುಮಾನ ವ್ಯಕ್ತವಾಗಿದೆ. ಇಲ್ಲಿ ಕೆಲವು ಮಂತ್ರಗಳಲ್ಲಿ ಜೂಜಾಟದ ದಾಳವು (ಅಕ್ಷ) ದೇವತೆ, ಇನ್ನೊಂದೆಡೆ ಕೃಷಿಯ ಮಾತಿರುವುದರಿಂದ ಅದಕ್ಕೆ ಕೃಷಿಯೇ ದೇವತೆ, ಇನ್ನು ಕೆಲವು ಮಂತ್ರಗಳಲ್ಲಿ ದಾಳ ಮತ್ತು ಜೂಜುಗಾರನ ಪ್ರಸ್ತಾಪವಿರುವುದರಿಂದ ಅವೇ ದೇವತೆಗಳು, ಎಂದು ಸಾಯಣ ಹಲುಬುತ್ತಾನೆ. ಅಂತಹ ದುಃಖ ಮತ್ತು ಸಂಶಯಗಳ ಅಗತ್ಯವಿಲ್ಲ. ಇದೊಂದು ಉನ್ನತ ಮಟ್ಟದ ಸಾಮಾಜಿಕ–ಸಾಂಸ್ಕೃತಿಕ ಚಿತ್ರಣದ ಗಾಥೆ. ಅದನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳೋಣ:

ದಾಳಗಳನ್ನು 'ಅಕ್ಷ' ಮತ್ತು 'ಪ್ರಾವೇಪ' ಎಂದು ಕರೆಯುತ್ತಾರೆ. ಅವು ಬಹಳ ದೊಡ್ಡ ಫಲವನ್ನು ಕೊಡಿಸುವಂಥವು ಮತ್ತು ಅವುಗಳ ಗೀಳಿಗೆ ಬಿದ್ದವನಿಗೆ ಅದೊಂದು ಮಾದಕವಿದ್ದಂತೆ. ಅವು ಒಳ್ಳೆಯ ಫಲ ನೀಡಬಹುದು, ಇಲ್ಲವೆ ಇರುವುದನ್ನು ಕಳೆದುಕೊಳ್ಳುವಂತೆ ಮಾಡಬಹುದು; ಆ ಕಾರಣದಿಂದ ಅವು ಭಯ ಉಂಟುಮಾಡುತ್ತವೆ. ಸೋಮರಸವು ಹೊಂದಿರುವ ಲಕ್ಷಣಗಳನ್ನು ಅಕ್ಷವೂ ಹೊಂದಿದೆ (೧೦.೩೪.೧). ಸೂಕ್ತದ ಎರಡನೆಯ ಮಂತ್ರದಲ್ಲಿ ಜೂಜುಗಾರನು ತನ್ನ ಸ್ವಂತದ ಪರಿತಾಪವನ್ನು ಹೇಳಿಕೊಳ್ಳುತ್ತಾನೆ. ಸಹೃದಯ ಸಾಹಿತ್ಯ ವಿದ್ಯಾರ್ಥಿಯು ಅವನಿಗೆ ಅನುಕಂಪ ತೋರಬೇಕೋ, ಜಿಗುಪ್ಸೆ ತೋರಬೇಕೋ ಎಂಬುದು ಆಯಾ ವಿಮರ್ಶಕನಿಗೆ ಬಿಟ್ಟ ತೀರ್ಮಾನ. ಜೂಜುಗಾರನ ಹೆಂಡತಿ ಅವನಲ್ಲಿ ಅನುರಕ್ತಳು; ಮೊದಲಿಗೆ ಸ್ನೇಹಪರಳಾಗಿದ್ದಳು. ಪತಿ–ಪತ್ನಿ ಸಂಬಂಧವು ಗಟ್ಟಿಯಾಗಿತ್ತು, ಪರಸ್ಪರ ಅನುಕೂಲಕರವಾಗಿತ್ತು. ಆದರೆ ಇವನ ಅಕ್ಷದ ಮೇಲಿನ ಗೀಳಿನಿಂದಾಗಿ ಸನ್ನಿವೇಶ ಕದಡಿಹೋಯಿತು. ಕವಿಯು ಪತ್ನಿಗೆ ಉಂಟಾಗಿರುವ ದುಃಖ ಮತ್ತು ಅಶಾಂತಿಯನ್ನು ಕೇಂದ್ರೀಕರಿಸಿಲ್ಲ, ಬದಲಾಗಿ ಜೂಜುಗಾರನು ಪರಿತ್ಯಕ್ತನಾಗಿರುವುದನ್ನು ಅವನ ಮಾತುಗಳಲ್ಲಿ ಹೇಳಿಸಿದ್ದಾನೆ: ಈಗ ಹೆಂಡತಿಗೆ ಅವನ ಬಗ್ಗೆ ಅಸಡ್ಡೆ; ಅವಳಿಗೆ ಭಯವೂ ಇಲ್ಲ, ಸಂಕೋಚವೂ ಇಲ್ಲ. ಸುಂದರ ಸಂಸಾರವು ಭಗ್ನವಾಗಿಹೋಗಿದೆ. (ನ ಮಾ ಮಿಮೇಥ ನ ಜಿಹೀಳೇ ಏಷಾ ಶಿವಾ ಸಖಿಭ್ಯಃ ಉತ ಮಹ್ಯಮಾಸೀತ್। ಅಕ್ಷಸ್ಯ ಅಹಮೇಕಪರಸ್ಯ ಹೇತೋಃ ಅನುವ್ರತಾಂ ಅಪ ಜಾಯಾಂ ಅರೋಧಂ॥) ತನ್ನೊಡನೆ ಮತ್ತು ಇತರರೊಡನೆ ಹಾಗೆ ನಗುಮುಖದಿಂದ ವರ್ತಿಸುತ್ತಿದ್ದ ಹೆಂಡತಿಯು ಇವನ ಚಟದಿಂದಾಗಿ ದಿಕ್ಕುತೋಚದವಳಂತಾಗಿದ್ದಾಳೆ. ಅವನಿಗೆ ಅಕ್ಷವೊಂದೇ ಪ್ರಧಾನವಾಯಿತು (ಏಕಪರಸ್ಯ), ಅವಳ ಬದುಕು ಬರಡಾಯಿತು. ಹೆಂಡತಿ ಮಾತ್ರವೇ ಹಾಗೆ ಅವನನ್ನು ಉಪೇಕ್ಷಿಸಲಿಲ್ಲ. ಅತ್ತೆಯು ಇವನನ್ನು ಕಂಡರೆ ಕೆಂಡ ಕಾರುತ್ತಾಳೆ, ಹೆಂಡತಿ ಕ್ರುದ್ಧಳಾಗುತ್ತಾಳೆ, ಅಂಗಲಾಚಿದರೂ ಅವನಿಗೆ ಬಿಡಿಕಾಸು ಕೊಡುವವರಿಲ್ಲ. ತನ್ನ ಪ್ರಾಮುಖ್ಯವನ್ನು ಕಳೆದುಕೊಂಡ ಮುದಿಕುದುರೆಯಂತಾಗಿಬಿಟ್ಟಿದ್ದಾನೆ ಇವನು. ಜಹಾಂಗೀರನ ಕತೆಯೊಂದರಲ್ಲಿ ಬರುವಂತೆ ಈ ಮುದಿಕುದುರೆ ಯಾರ ಬಳಿಯೂ ಹೋಗಿ ನ್ಯಾಯಕ್ಕಾಗಿ ಕೈಯೊಡ್ಡುವಂತಿಲ್ಲ. ಹೀಗಾಗಿ ಜೂಜಿನ ಸುಖವೂ ಇವನಿಗೆ ದೂರವಾಗುತ್ತಿದೆ. (೧೦.೩೪.೩: ದ್ವೇಷ್ಟಿ ಶ್ವಶ್ರೂಃ ಅಪ ಜಾಯಾ ರುಣದ್ಧಿ ನ ನಾಥಿತೋ ವಿಂದತೇ ಮರ್ಡಿತಾರಂ। ಅಂದರೆ, ಹೋಗಿ ಕೇಳಿಕೊಂಡರೂ ಕಾಸು ಕೊಟ್ಟು ಸಂತೈಸುವವರಿಲ್ಲ; ಅಶ್ವಸ್ಯೇವ ಜರತೋ ವಸ್ನ್ಯಸ್ಯ ನಾಹಂ ವಿಂದಾಮಿ ಕಿತವಸ್ಯ ಭೋಗಂ॥ ಅಂದರೆ, ಜೀವನ ವ್ರತವೂ ಹಾಳಾಯಿತು, ಜೂಜಿನ ಸುಖವೂ ಇಲ್ಲದಾಯಿತು.)

ಅವನ ಹೀನಾಯ ಸ್ಥಿತಿ ಇಲ್ಲಿಗೆ ಮುಗಿಯಲಿಲ್ಲ; ಮತ್ತು ಅವನ ಹೆಂಡತಿಯ ಗೌರವವಂತೂ ಮಣ್ಣುಪಾಲಾಗುತ್ತಲೇ ಹೋಯಿತು. ತಂದೆ, ತಾಯಿ, ಸೋದರರು, ಎಲ್ಲರೂ ಇವನನ್ನು ಅವಕೃಪೆಯಿಂದ ಕಾಣುವವರೇ. 'ಇವನಾರೋ ನಮಗೆ ತಿಳಿಯದು' ಎಂದುಬಿಡುವಷ್ಟು ದೂರ ಸರಿದಿದ್ದಾರೆ, ನಿಂದಿಸುತ್ತಾರೆ. ಅವನನ್ನು ಯಾರಾದರೂ ಬಂಧಿಸಿದರೆ 'ಒಳ್ಳೆಯ ಕೆಲಸ, ಹಿಡಿದುಕೊಂಡು ಹೋಗಿ' ಎಂದುಬಿಡುತ್ತಾರೆ. ಇವನ ಹೆಂಡತಿಯನ್ನು ಛೇಡಿಸುವವರು ಯಾವ ಮಟ್ಟಕ್ಕಿಳಿಯಬಹುದೋ ಹೇಳುವಂತಿಲ್ಲ. ಇಷ್ಟೆಲ್ಲಾ ಯಾವುದರ ಪರಿಣಾಮ? ಅಕ್ಷದ ಹಿಡಿತ, ಅದಕ್ಕೆ ಇವನು ಮಾರುಹೋದದ್ದು. ಅವನ ಹಣ ಮತ್ತು ಶಕ್ತಿ ಎಲ್ಲಾ ಅದಕ್ಕೆ ಮುಡಿಪು. (೧೦.೩೪.೪: ಅನ್ಯೇ ಜಾಯಾಂ ಪರಿ ಮೃಶಂತಿ ಅಸ್ಯ, ಯಸ್ಯ ಅಗೃಧತ್ ವೇದನೇ ವಾಜೀ ಅಕ್ಷಃ। ಪಿತಾ ಮಾತಾ ಭ್ರಾತರಃ ಏನಮಾಹುಃ ನ ಜಾನೀಮೋ ನಯತ ಬದ್ಧಮೇತಃ॥). 'ವೇದನೇ' ಅಂದರೆ ಸಂಪತ್ತು, 'ವಾಜೀ' ಎಂದರೆ ಬಲ. ಎರಡೂ ಜೂಜಿನ ಕೈಂಕರ್ಯಕ್ಕೆ ಬಳಕೆಯಾಗಿವೆ. ಕವಿಯು ಇಲ್ಲೊಂದು ಸ್ವಾರಸ್ಯದ ಭಾಷೆ ಬಳಸಿದ್ದಾನೆ. "ಇವನನ್ನು ಹಿಡಿದುಕೊಂಡು ಹೋಗಿ" ಎನ್ನುವ ಬದಲು ತಂದೆ–ಸೋದರರು ಎಲ್ಲಾ "ಇದನ್ನು ಹಿಡಿದುಕೊಂಡು ಹೋಗಿ" ಎನ್ನುತ್ತಾರೆ. 'ಏನಂ' ಬದಲು ಕವಿ 'ಏತಂ' ಎಂದುಬಿಟ್ಟಿದ್ದಾನೆ. ಅಂದರೆ, ಜೂಜುಗಾರನು ತನ್ನವರಿಗೆ ಅಷ್ಟು ಅಸಹ್ಯನೆನಿಸಿದ್ದಾನೆ. ಋಗ್ವೇದದ ಸಾವಿರಾರು ವರ್ಷಗಳ ನಂತರವೂ ಇಂತಹ ಕವನಗಳು ಹೇರಳವಾಗಿ ಬಂದಿವೆ. ಸಂಸ್ಕೃತ ಸಾಹಿತ್ಯದಲ್ಲಿ ಅಂಥವು ಹಲವಾರಿವೆ. ಹರಿಕಥೆ ದಾಸರಿಗೆ ಅವೆಲ್ಲಾ ಉತ್ಕೃಷ್ಟ ಸಾಮಗ್ರಿ; ಅವನ್ನು ರಾಗರಾಗವಾಗಿ ಹಾಡಿ ಅರ್ಥ ವಿವರಿಸಿ ಶಹಭಾಸ್‌ಗಿರಿ ಪಡೆಯುವುದು ನಡೆದುಬಂದ ದಾರಿ. ಅಂತಹ ಒಂದು ಪದ್ಯ "ಮಾತಾ ನಿಂದತಿ ನಾಭಿನಂದತಿ ಪಿತಾ ಭ್ರಾತಾ ನ ಸಂಭಾಷತೇ" ಎಂದಾರಂಭವಾಗುತ್ತದೆ (ತಾಯಿ ಬಯ್ಯುತ್ತಾಳೆ, ತಂದೆ ತಲೆ ತಿರುಗಿಸಿ ಇನ್ನೆತ್ತಲೋ ನೋಡುತ್ತಾನೆ, ಸೋದರನು ಮಾತನಾಡಿಸುವುದಿಲ್ಲ). ಋಗ್ವೇದದ ಜೂಜುಗಾರನ ಸೂಕ್ತವನ್ನು ಚೆನ್ನಾಗಿ ಕನ್ನಡಕ್ಕೆ ಅನುವಾದಿಸಿದರೆ ಅದೊಂದು ಒಳ್ಳೆಯ ಭಾವಗೀತೆಯೇ ಆದೀತು. ಅಂತಹ ಕವನದಲ್ಲಿ ಯಾವ ತತ್ವಶಾಸ್ತ್ರದ ಪ್ರಣಾಲಿಕೆಯನ್ನು ಅರಸಬೇಕು, ಯಾವ ನಿಗೂಢ ತತ್ವವನ್ನು ಕಂಡುಕೊಳ್ಳಬೇಕು, ಎಂತಹ ಅಧ್ಯಾತ್ಮ ಪ್ರತೀಕಗಳನ್ನು ಸಂಶೋಧಿಸಬೇಕು? ಕಾವ್ಯದಲ್ಲಿ ಜೀವನಾನುಭವವು ಮಡುಗಟ್ಟಿರುತ್ತದೆಂದು ವ್ಯಾಖ್ಯಾನ ಮಾಡುವವರು ಋಗ್ವೇದದಲ್ಲೇಕೆ ಅಂತಹ ಅನುಭವವನ್ನು ಗ್ರಹಿಸಿ ಸಹೃದಯರಂತೆ ವರ್ತಿಸಬಾರದು? ಋಗ್ವೇದವು ನಮಗೆ ಆಪ್ತವಾಗಬೇಕಾದಂತಹ ಸಂಹಿತೆ. ಆದರೆ ಅದನ್ನು ಆಪ್ತವಾಗಿಸಿಕೊಳ್ಳುವ ಬದಲು ಅದಕ್ಕೆ ಅರ್ಥವೇ ಇಲ್ಲವೇನೋ ಎಂಬಂತೆ ಅದನ್ನು ಅಟ್ಟದ ಮೇಲೆ ಕೂರಿಸಿ 'ಅದು ನಿಗೂಢ, ಅದು ಅಧ್ಯಾತ್ಮ, ಅದು ದೇವವಾಣಿ, ಅದು ಸರ್ವಜ್ಞತ್ವದ ಖನಿ' ಎಂದೆಲ್ಲಾ ಹೇಳುವುದು ತೀರಾ ವಿಪರ್ಯಾಸ. ಋಗ್ವೇದದ ಕಾವ್ಯತ್ವದ ಘನತೆಗೆ ಅನಗತ್ಯವಾಗಿ ಕಪ್ಪುಚುಕ್ಕೆ ಇಕ್ಕುವ ಅಪಕ್ರಮ ಇದು. ಅದು ಸಲ್ಲದು.

"ಜೂಜುಗಾರನ ಅಳಲು" ಎಂಬ ಸೂಕ್ತದಲ್ಲಿ ಇನ್ನೂ ಹತ್ತು ಮಂತ್ರಗಳಿವೆ ಮತ್ತು ಇಡೀ ಸೂಕ್ತಕ್ಕೆ ಚಾರಿತ್ರಿಕವಾಗಿ ಬೇರೊಂದು ಆಯಾಮವೂ ಇದೆ – ಅದನ್ನು ಮುಂದಿನ ಕಂತಿನಲ್ಲಿ ಪರಿಶೀಲಿಸೋಣ.

**ಡಾ॥ ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ ಬೆಂಗಳೂರು – ೫೬೦ ೦೮೫

# ಗುಜರಾತ್ ಅಭಿವೃದ್ಧಿ ಮಾದರಿ V/s ಮಾನವ ಅಭಿವೃದ್ಧಿ ಮಾದರಿ



ದೇಶ ೧೬ನೇ ಲೋಕಸಭಾ ಚುನಾವಣೆಗೆ ಮುನ್ನಡೆಯುತ್ತಿರುವ ಸಂದರ್ಭದಲ್ಲಿ ಜನಮನದ ಮೇಲೆ ಪ್ರಭಾವ ಬೀರಲು ರಾಜಕೀಯ ಪಕ್ಷಗಳು ಹಲವಾರು ಕಸರತ್ತುಗಳನ್ನು ಆರಂಭಿಸುತ್ತಿವೆ. ಅಂಥವುಗಳಲ್ಲಿ ಭಾರತೀಯ ಜನತಾ ಪಕ್ಷ ನರೇಂದ್ರ ಮೋದಿಯವರನ್ನು ಪ್ರಧಾನಿ ಅಭ್ಯರ್ಥಿಯೆಂದೂ, ಗುಜರಾತ್ ಮಾದರಿ ತಮ್ಮ ಗುರಿ ಎಂದೂ ಪ್ರಚಾರ ಮಾಡುತ್ತಿರುವುದೂ ಒಂದು. ಇಂಥ ಸಂದರ್ಭದಲ್ಲಿ ಗುಜರಾತ್ ಮಾದರಿ ಏನು, ಅಲ್ಲಿ ನರೇಂದ್ರ ಮೋದಿಯವರ ಸಾಧನೆ ಎಂಥದ್ದು, ವಾಸ್ತವವೇನು, ಅಭಿವೃದ್ಧಿಯ ಮಾದರಿ ಯಾವುದು ಎಂಬ ವಿಷಯಗಳ ಕುರಿತು ಕರ್ನಾಟಕದ ಪ್ರಮುಖ ಚಿಂತಕರು, ಅಭಿವೃದ್ಧಿ ವಿಷಯ ತಜ್ಞರಾದ ಡಾ|| ಟಿ. ಆರ್. ಚಂದ್ರಶೇಖರ ಅವರ ಈ ಲೇಖನದ ಮೊದಲ ಭಾಗ ಇಲ್ಲಿದೆ. ಎರಡನೇ ಭಾಗ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುವುದು.

– ಸಂ.

**ಟಿ. ಆರ್. ಚಂದ್ರಶೇಖರ**

ನಮ್ಮ ದೇಶದಲ್ಲಿ ಇಂದು ೨೦೧೪ರ ಲೋಕಸಭಾ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಅಭಿವೃದ್ಧಿ ಮಾದರಿಗಳ ಬಗ್ಗೆ ಬಿಸಿ ಬಿಸಿ ಚರ್ಚೆಯೊಂದು ಶುರುವಾಗಿದೆ. ಮಾಧ್ಯಮಗಳು, ರಾಜಕೀಯ ಪಕ್ಷಗಳು, ಸಾಮಾಜಿಕ ಕಾರ್ಯಕರ್ತರು, ಹೋರಾಟದ ಸಂಘಟನೆಗಳು – ಹೀಗೆ ಅಭಿವೃದ್ಧಿ ಮಾದರಿ ಬಗ್ಗೆ ಅವು ತಮ್ಮ ವಿಚಾರಗಳನ್ನು ಮಂಡಿಸುತ್ತಿವೆ. ಈ ಎಲ್ಲ ಚರ್ಚೆ, ಸಂವಾದ, ವಿವಾದಗಳು, ವಾಗ್ವಾದಗಳು ಗುಜರಾತ್ ಅಭಿವೃದ್ಧಿ ಮಾದರಿಯ ಸುತ್ತ ಗಿರಕಿ ಹೊಡೆಯುತ್ತಿವೆ. ಅದೊಂದು ಶ್ರೇಷ್ಠ ಮಾದರಿಯೆಂದು, ಅದರಿಂದ ಮಾತ್ರ ದೇಶವನ್ನು ಸಮೃದ್ಧಗೊಳಿಸುವುದು/ಸಂರಕ್ಷಿಸುವುದು ಸಾಧ್ಯವೆಂದು ಹೇಳಲಾಗುತ್ತಿದೆ. ಗಾಂಧಿ–ನೆಹರೂ, ಲೋಹಿಯಾ–ಜೆಪಿ, ಫುಲೆ–ಅಂಬೇಡ್ಕರ್ ಮುಂತಾದವರು ಪ್ರತಿಪಾದಿಸಿದ್ದ ಮಾದರಿಗೆ ಪ್ರತಿಯಾಗಿ ಗುಜರಾತ್ ಅಭಿವೃದ್ಧಿ ಮಾದರಿಯನ್ನು ಇಂದು ಮುಂಚೂಣಿಗೆ ತರಲಾಗುತ್ತಿದೆ. ನಮ್ಮ ದೇಶದ ಒಂದು ರಾಜಕೀಯ ಪಕ್ಷವು ಮುಂದಿನ ಲೋಕಸಭಾ ಚುನಾವಣೆಗೆ ತನ್ನ ಪ್ರಧಾನಮಂತ್ರಿ ಅಭ್ಯರ್ಥಿಯನ್ನು ಘೋಷಿಸಿದೆ. ಈ ಪಕ್ಷದ ಪ್ರಧಾನಿ ಅಭ್ಯರ್ಥಿಯಾಗಿರುವವರು ಸದರಿ ಮಾದರಿಯನ್ನು ತೊಡೆ ತಟ್ಟಿ–ತೋಳೇರಿಸಿಕೊಂಡು ಪ್ರತಿಪಾದಿಸುತ್ತಿದ್ದಾರೆ. ದೇಶದ ಉದ್ಯಮಪತಿಗಳು ಸಹ ಸದರಿ ಮಾದರಿಯ ಪರವಾಗಿ ಮಾತನಾಡತೊಡಗಿದ್ದಾರೆ. ಕಳೆದ ೫–೬ ದಶಕಗಳಿಂದ ನಾವು ಅನುಸರಿಸಿಕೊಂಡು ಬಂದಿರುವ ಅಭಿವೃದ್ಧಿ ಮಾದರಿಯನ್ನು ಟೀಕಿಸುತ್ತಾ ಹೀಯಾಳಿಸುತ್ತಾ ತಿರಸ್ಕರಿಸುತ್ತಾ ಕೆಲವು ರಾಜಕಾರಣಿಗಳು ಗುಜರಾತ್ ಮಾದರಿಯನ್ನು ಸರ್ವಶ್ರೇಷ್ಠ ಪರ್ಯಾಯವೆನ್ನುವಂತೆ ಮಂಡಿಸುತ್ತಿದ್ದಾರೆ. ಅದರ ಆರಾಧನೆಯಲ್ಲಿ ಒಂದು ಪಕ್ಷ ಮತ್ತು ಅದನ್ನು ಪೋಷಿಸುತ್ತಿರುವ ಸಂಘಟನೆಗಳು ತೊಡಗಿವೆ. ಆರಂಭಕ್ಕಿಂತ (ಕೃಷಿ) ಆರಾಧನೆಯಲ್ಲಿ ಅದಕ್ಕೆ ನಂಬಿಕೆ ಜಾಸ್ತಿ.

ಈ ಎಲ್ಲ ಅಬ್ಬರ–ಅಟಾಟೋಪಗಳ ನಡುವೆ ಕಳೆದ ೪–೫ ದಶಕಗಳಿಂದ ಜನರನ್ನು ಕೇಂದ್ರವನ್ನಾಗಿಟ್ಟುಕೊಂಡು ಭಾರತದಲ್ಲಿ ಮಾತ್ರವಲ್ಲ, ಇಡೀ ವಿಶ್ವದಲ್ಲಿ ಮನ್ನಣೆ ಪಡೆದ ಯಶಸ್ವೀ ಕೇರಳ ಅಭಿವೃದ್ಧಿ ಮಾದರಿಯನ್ನು ಉದ್ದೇಶಪೂರ್ವಕವಾಗಿ ಮೂಲೆಗುಂಪು ಮಾಡಲಾಗುತ್ತಿದೆ. ಅದರ ಬಗ್ಗೆ ರಾಜಕಾರಣಿಗಳಾಗಲಿ, ತಜ್ಞರಾಗಲಿ, ಉದ್ಯಮಪತಿಗಳಾಗಲಿ – ಯಾರೂ ಮಾತನಾಡುತ್ತಿಲ್ಲ. ವಿಶ್ವವಿಖ್ಯಾತ ಅಭಿವೃದ್ಧಿ ತಜ್ಞರು ಮತ್ತು ನೊಬೆಲ್ ಪ್ರಶಸ್ತಿ ವಿಜೇತ ಅರ್ಥಶಾಸ್ತ್ರಜ್ಞರು (ಅಮರ್ತ್ಯ ಸೇನ್) ಕೇರಳ ಮಾದರಿಯ ಬಗ್ಗೆ ಅಧ್ಯಯನಗಳನ್ನು ನಡೆಸುತ್ತಿದ್ದಾರೆ. ಅದರ ವಿಶಿಷ್ಟತೆಯನ್ನು ವ್ಯಾಪಕವಾಗಿ ಗುರುತಿಸುತ್ತಿದ್ದಾರೆ. ಇಂದು ಅದೊಂದು ಯಶಸ್ವೀ – ಸಿದ್ಧ ಮಾದರಿಯಾಗಿದೆ. ಜನರ ಬದುಕು ಎಷ್ಟು ಸಮೃದ್ಧವಾಗಿದೆ ಎಂಬುದನ್ನು ಅಳೆಯಲು ಯುಎನ್‌ಡಿಪಿಯು ಸೂಚ್ಯಂಕವೊಂದನ್ನು ರೂಪಿಸಿದೆ. ಅದನ್ನು ಮಾನವ ಅಭಿವೃದ್ಧಿ ಸೂಚ್ಯಂಕ ಎಂದು ಕರೆಯಲಾಗಿದೆ. ಈ ಸೂಚ್ಯಂಕದಲ್ಲಿ ಮೌಲ್ಯವು

ಕನಿಷ್ಠ ಶೂನ್ಯ ಮತ್ತು ಗರಿಷ್ಠ ಒಂದರ ನಡುವೆ ಹರಡಿಕೊಂಡಿರುತ್ತದೆ. ಕೇರಳ ರಾಜ್ಯದ ಮಾನವ ಅಭಿವೃದ್ಧಿ ಸೂಚ್ಯಂಕ ಯಾವತ್ತೂ ಭಾರತದಲ್ಲಿ ಉನ್ನತ ಸ್ಥಾನದಲ್ಲಿದೆ (ಕೇರಳ : ೦.೭೯೦. ಗುಜರಾತ್ : ೦.೫೨೭. ೨೦೧೧. ವಿವರಗಳಿಗೆ ನೋಡಿ ಅನುಬಂಧ–೧). ಅಭಿವೃದ್ಧಿಯ ಯಾವ ಸೂಚಿಯನ್ನು ತೆಗೆದುಕೊಂಡರೂ ಅದರ ಸಾಧನೆಯು ಉತ್ತಮವಾಗಿದೆ. ಅದು ಸಾಕ್ಷರತೆಯಿರಬಹುದು, ಪ್ರಾಥಮಿಕ ಶಿಕ್ಷಣವಿರಬಹುದು, ಆರೋಗ್ಯ ಇರಬಹುದು, ಲಿಂಗ ಸಮಾನತೆಯಿರಬಹುದು, ವಿಕೇಂದ್ರೀಕರಣವಿರಬಹುದು – ಎಲ್ಲದರಲ್ಲೂ ಅದು ಮುಂಚೂಣಿಯಲ್ಲಿದೆ. ನಮ್ಮ ಉದ್ಯಮಪತಿಗಳು ಅದರ ಬಗ್ಗೆ ಮಾತನಾಡುವುದಿಲ್ಲ. ಅದರ ಸಾಧನೆಯನ್ನು ಗುರುತಿಸುತ್ತಿಲ್ಲ. ಅದರ ವಿಶಿಷ್ಟತೆಯ ಬಗ್ಗೆ ಮಾಧ್ಯಮಗಳಲ್ಲಿ ಚರ್ಚೆ ನಡೆಯುತ್ತಿಲ್ಲ. ಅದನ್ನು ಎಡಪಂಥೀಯ ಮಾದರಿಯೆಂದು ನಿರ್ಲಕ್ಷ್ಯ ಮಾಡಲಾಗುತ್ತಿದೆ.

ಪ್ರಸ್ತುತ ಪ್ರಬಂಧದಲ್ಲಿ ಗುಜರಾತ್ ಅಭಿವೃದ್ಧಿ ಮಾದರಿ ಏಕೆ ಅನುಕರಣೀಯವಲ್ಲ ಎಂಬುದನ್ನು ಅನೇಕ ಅಭಿವೃದ್ಧಿ ಸೂಚಿಗಳನ್ನು ಆದರಿಸಿ ಇಲ್ಲಿ ಚರ್ಚೆ ಮಾಡಲಾಗಿದೆ. ಮಾನವ ಅಭಿವೃದ್ಧಿ ಸೂಚಿಗಳಲ್ಲಿ ಅದು ಕೇರಳ, ತಮಿಳುನಾಡು, ಗೋವಾ ಮುಂತಾದ ರಾಜ್ಯಗಳಿಗಿಂತ ಕೆಳಸ್ಥಾನದಲ್ಲಿದೆ. ಗುಜರಾತ್ ಅಭಿವೃದ್ಧಿ ಮಾದರಿಯ ಬಗ್ಗೆ ಅಲ್ಲಿನ ಮುಖ್ಯಮಂತ್ರಿ ಅವರ ವಿಚಾರಗಳೇನಿವೆ ಅವು ಕೇವಲ ರೆಟರಿಕ್ಕಿನ ರೂಪದಲ್ಲಿವೆ ವಿನಾ ವಸ್ತುರೂಪದಲ್ಲಿಲ್ಲ. ತಮ್ಮ ಅಭಿವೃದ್ಧಿ ನೀತಿಯನ್ನು ಖಚಿತ ರೂಪದಲ್ಲಿ ಮಂಡಿಸಲು ಅದರ ಪ್ರತಿಪಾದಕರು ಹೇಗೆ ಸೋಲುತ್ತಿದ್ದಾರೆ ಎಂಬುದನ್ನು ಇಲ್ಲಿ ತೋರಿಸಲಾಗಿದೆ.

### ಭಾಗ–೧

### ಯಶಸ್ವೀ ಮಾದರಿ ಮತ್ತು ಪ್ರಯೋಗದ ಮಾದರಿ

ಕೇರಳ ಅಭಿವೃದ್ಧಿ ಮಾದರಿಯು ಒಂದು ಯಶಸ್ವೀ ಗಾಥೆಯಾಗಿದೆ. ಈ ಮಾದರಿಗೆ ನಮ್ಮ ದೇಶದಲ್ಲಿ ಐದು ದಶಕಗಳಿಗೂ ಮೀರಿದ ಚರಿತ್ರೆಯಿದೆ. ರಾಷ್ಟ್ರೀಯ–ಅಂತಾರಾಷ್ಟ್ರೀಯ ಮಟ್ಟದಲ್ಲಿ ನಡೆದ ಅನೇಕ ಅಧ್ಯಯನಗಳು ಸದರಿ ಮಾದರಿಯ ಯಶಸ್ಸನ್ನು ಗುರುತಿಸಿವೆ. ಮಹಿಳೆಯರನ್ನೂ ಸೇರಿಸಿಕೊಂಡು ಅದು ಜನರನ್ನು ಒಳಗೊಳ್ಳುವ ಮಾದರಿಯಾಗಿದೆ. ಇದಕ್ಕೆ ಪ್ರತಿಯಾಗಿ ಗುಜರಾತ್ ಅಭಿವೃದ್ಧಿಯ ಮೂಲದಲ್ಲಿನ ಚಾಲಕ ಶಕ್ತಿಯೆಂದರೆ ಬಂಡವಾಳ ಮತ್ತು ಅದರ ಅಡಿಪಾಯವೆಂದರೆ ಕಾರ್ಪೊರೇಟ್ ಸಂಸ್ಕೃತಿ. ಗುಜರಾತ್ ಮಾದರಿಯು ಇನ್ನೂ ಪ್ರಯೋಗದ ಹಂತದಲ್ಲಿದೆ. ಅದಿನ್ನೂ ಪರೀಕ್ಷೆಗೆ ಒಳಗಾಗಬೇಕಾಗಿದೆ. ಸಿದ್ಧವಾದ ಒಂದು ಮಾದರಿಗೆ ಪ್ರತಿಯಾಗಿ ಪ್ರಯೋಗದ ಹಂತದಲ್ಲಿರುವ ಮಾದರಿಯ ಬಗ್ಗೆ ಇನ್ನಿಲ್ಲದಂತೆ ಮಾತನಾಡಲಾಗುತ್ತಿದೆ. ಇಲ್ಲಿರುವ ತಾರತಮ್ಯದ ನೆಲೆಗಳನ್ನು ಅವಶ್ಯ ನಾವು ಗಮನಿಸಬೇಕು.

ಕೇರಳದ ಯಶಸ್ವೀ ಮಾದರಿಯ ಪಟ್ಟಿಗೆ ಇಂದು ತಮಿಳುನಾಡನ್ನು ಸೇರಿಸಬಹುದು. ಕೇರಳದ ನಂತರ ಜನರ ಬದುಕನ್ನು ಸಮೃದ್ಧಗೊಳಿಸಿರುವ ಮತ್ತೊಂದು ಯಶಸ್ವೀ ರಾಜ್ಯವೆಂದರೆ ತಮಿಳುನಾಡು. ಇಲ್ಲಿಯ ಮಾದರಿಯಲ್ಲಿ ಎಡಪಂಥೀಯ ತತ್ವಗಳಿಗೆ ಅವಕಾಶ ಇಲ್ಲ. ಕೇವಲ ಜನಲೋಲುಪತೆಯ ರಾಜಕಾರಣ ಮಾಡುತ್ತವೆಯೆಂದು ತಮಿಳುನಾಡಿನ ದ್ರಾವಿಡ ಪಕ್ಷಗಳನ್ನು ಟೀಕಿಸಲಾಗುತ್ತಿದೆ. ಆದರೆ ನಮ್ಮ ದೇಶದಲ್ಲಿ ಇಂದು ಕೇರಳದ ನಂತರ ಅಭಿವೃದ್ಧಿಯಲ್ಲಿ ಮುಂಚೂಣಿಯಲ್ಲಿರುವ ರಾಜ್ಯ ತಮಿಳುನಾಡು. ಇತ್ತೀಚಿಗಿನ ರಘುರಾಮ್ ರಾಜನ್ ಸಮಿತಿ ಸಿದ್ಧಪಡಿಸಿದ್ದ ಸಮಗ್ರ ದುಸ್ಥಿತಿ ಸೂಚ್ಯಂಕದ ಪ್ರಕಾರ ಇವೆರಡೂ ರಾಜ್ಯಗಳು ಮುಂದುವರಿದ ರಾಜ್ಯಗಳ ಪಟ್ಟಿಯಲ್ಲಿವೆ. ದುಸ್ಥಿತಿಯ ಆರೋಹಣ ಕ್ರಮದಲ್ಲಿ ಜೋಡಿಸಿರುವ ಪಟ್ಟಿಯಲ್ಲಿ ಅವೆರಡು ರಾಜ್ಯಗಳು ಕ್ರಮವಾಗಿ ಎರಡನೆಯ ಮತ್ತು ಮೂರನೆಯ ಸ್ಥಾನದಲ್ಲಿವೆ. ಕೇರಳದ ಸಮಗ್ರ ದುಸ್ಥಿತಿ ಸೂಚ್ಯಂಕ ಕೇವಲ ೦.೦೯೫ರಷ್ಟಾದರೆ ತಮಿಳುನಾಡಿನ ಸೂಚ್ಯಂಕ ೦.೩೪೧. ಆದರೆ ಸದರಿ ವರದಿಯಲ್ಲಿನ 'ಅತಿ ಹಿಂದುಳಿದ' ರಾಜ್ಯಗಳ ಪಟ್ಟಿಯಲ್ಲಿ ಗುಜರಾತ್ ರಾಜ್ಯವಿದೆ. ಅದರ ದುಸ್ಥಿತಿ ಸೂಚ್ಯಂಕ ೦.೪೯೧. ಗೋವಾ, ಕೇರಳ, ತಮಿಳುನಾಡು, ಸಿಕ್ಕಿಮ್, ಕರ್ನಾಟಕ ಮತ್ತು ತ್ರಿಪುರ ರಾಜ್ಯಗಳು ದುಸ್ಥಿತಿಯ ದೃಷ್ಟಿಯಿಂದ ಗುಜರಾತ್ ರಾಜ್ಯಕ್ಕಿಂತ ಉತ್ತಮ ಮಟ್ಟದಲ್ಲಿವೆ. ನಮ್ಮ ರಾಜ್ಯದಲ್ಲಿ ಕೆಲವರು ವ್ಯಸನದಂತೆ ಗುಜರಾತ್ ಅಭಿವೃದ್ಧಿ ಮಾದರಿಯನ್ನು ಅನುಸರಿಸುವ ಮಾತನಾಡುತ್ತಿದ್ದಾರೆ. ಗುಜರಾತ್ ಅಭಿವೃದ್ಧಿ ಪ್ರಕ್ರಿಯೆಯನ್ನು ಶ್ರೇಷ್ಠ ಮಾದರಿಯೆಂದು ಪ್ರಚಾರ ಮಾಡುತ್ತಿರುವ ರಾಜಕಾರಣಿಗಳು ಒಂದು ಸಾರಿ ರಘುರಾಮ್ ರಾಜನ್ ಸಮಿತಿ ವರದಿಯನ್ನು ಪರಿಶೀಲಿಸುವುದು ಸೂಕ್ತ (ನೋಡಿ : ಅನುಬಂಧ–೨).

ಕರ್ನಾಟಕವು ೧೯೫೬ರಿಂದ ಮಧ್ಯಮಗತಿ ರಾಜಕಾರಣವನ್ನು ಅನುಸರಿಸಿಕೊಂಡು ಬರುತ್ತಿದೆ. ಅದಕ್ಕೆ ಅದರದೇ ಆದ ವಿಶಿಷ್ಟತೆಯಿದೆ. ಅದು ಪಂಜಾಬ್–ಹರಿಯಾಣಗಳಂತೆ 'ಆರ್ಥಿಕ ಸಮೃದ್ಧತೆ'ಯನ್ನು ಸಾಧಿಸಿಕೊಂಡಿಲ್ಲ. ಕೇರಳ–ತಮಿಳುನಾಡುಗಳಂತೆ ಜನರ ಬದುಕು ಸಮೃದ್ಧಗೊಳ್ಳುವಂತಹ

## ಗುಜರಾತಿನಲ್ಲಿ ಪ್ರತಿ ಮೂರು ಮಕ್ಕಳಲ್ಲಿ ಒಂದು ಅಪೌಷ್ಟಿಕತೆಗೆ ಒಳಗಾಗಿದೆ

ಗುಜರಾತ್ ಮಾದರಿಯ ಬಗ್ಗೆ ತುತ್ತೂರಿ ಊದುತ್ತಿರುವವರೆಲ್ಲರೂ ಅಲ್ಲಿನ ಮಕ್ಕಳಲ್ಲಿನ ಅಪೌಷ್ಟಿಕತೆ ಬಗ್ಗೆ ಗಮನ ನೀಡುತ್ತಿಲ್ಲ. ಆ ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಚಿವರು ನೀಡಿರುವ ಮಾಹಿತಿ ಪ್ರಕಾರ ಅಲ್ಲಿ ಒಟ್ಟು ೨೬ ಜಿಲ್ಲೆಗಳ ಪೈಕಿ ೧೨ರಲ್ಲಿ ಅಪೌಷ್ಟಿಕತೆಯಿಂದ ನರಳುತ್ತಿರುವ ಮಕ್ಕಳ ಸಂಖ್ಯೆ ೬೧.೩ ಲಕ್ಷ (ಇನ್ನು ಉಳಿದ ೧೪ ಜಿಲ್ಲೆಗಳನ್ನೂ ಸೇರಿಸಿಕೊಂಡರೆ ಅಲ್ಲಿ ಅಪೌಷ್ಟಿಕತೆಗೆ ಒಳಗಾಗಿರುವ ಮಕ್ಕಳ ಸಂಖ್ಯೆ ಎಷ್ಟಾಗಬಹುದು ಎಂಬುದನ್ನು ಊಹಿಸಿಕೊಳ್ಳಬಹುದು). ಇದನ್ನು ಚರ್ಚೆ ಮಾಡಿರುವ ಸಿಎಜಿ ವರದಿಯಲ್ಲಿನ ಮಾಹಿತಿ ಪ್ರಕಾರ ಅಲ್ಲಿ ಪ್ರತಿ ಮೂರು ಮಕ್ಕಳಲ್ಲಿ ಒಂದು ಮಗು ಅಪೌಷ್ಟಿಕತೆಯಿಂದ ನರಳುತ್ತಿದೆ. ಚಾಲ್ತಿಯಲ್ಲಿರುವ ಮಾನದಂಡದ ಪ್ರಕಾರ ಗುಜರಾತ್ ರಾಜ್ಯದಲ್ಲಿ ೭೫೪೮೦ ಅಂಗನವಾಡಿಗಳು ಇರಬೇಕಾಗಿತ್ತು. ಆದರೆ ಅಲ್ಲಿ ಕೆಲಸ ಮಾಡುತ್ತಿರುವ ಅಂಗನವಾಡಿಗಳ ಸಂಖ್ಯೆ ಕೇವಲ ೫೦೨೨೫. ಇಲ್ಲಿನ ಕೊರತೆ ಶೇ. ೩೩.೪೬.

ಸಿಎಜಿ ವರದಿ ಪ್ರಕಾರ ಅಲ್ಲಿ ೧೮೭ ಲಕ್ಷ ಜನರು ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆಯ ಫಲಗಳಿಂದ ವಂಚಿತರಾಗಿದ್ದಾರೆ. ಈ ಬಗೆಯ ಅಭಿವೃದ್ಧಿ ಮಾದರಿಯನ್ನು ಅನುಕರಣೀಯ ಎಂದು ಹೇಗೆ ಹೇಳುವುದು ?

*(ಆಧಾರ : ದಿ ಹಿಂದು, ಶನಿವಾರ, ಅಕ್ಟೋಬರ್, ೨೦೧೩. ಪು : ೧೪)*



ಸಾಧನೆಯನ್ನು ಅದು ಮಾಡಿಲ್ಲ. ಈ ಎರಡು ಮಾದರಿಗಳ ನಡುವೆ ಸಮತೋಲನವನ್ನು ಕಾಯ್ದುಕೊಂಡು ಅದು ಮುಂದೆ ಸಾಗುತ್ತಿದೆ. ಯಾವತ್ತೂ ಕರ್ನಾಟಕವು 'ಉಗ್ರ'ವೆನ್ನಬಹುದಾದ ಅಭಿವೃದ್ಧಿ ಕ್ರಮಗಳನ್ನು ಅಳವಡಿಸಿಕೊಳ್ಳಲಿಲ್ಲ. ಕರ್ನಾಟಕ ಅಭಿವೃದ್ಧಿ ಮಾದರಿಯು ಕೇರಳ–ತಮಿಳುನಾಡುಗಳ ಮಾದರಿಗೆ ಹೆಚ್ಚು ಹತ್ತಿರದಲ್ಲಿದೆ. ಅದು ಅನೇಕ ಅಭಿವೃದ್ಧಿ ಸಂಬಂಧಿ ವಿಷಯಗಳಲ್ಲಿ ಗುಜರಾತಿಗಿಂತ ಮುಂದಿದೆ.

**ಆರ್ಥಿಕ ಸಮೃದ್ಧತೆ ಮತ್ತು ಬದುಕಿನ ಸಮೃದ್ಧತೆ**

ಈಗಾಗಲೆ ಹೇಳಿರುವಂತೆ ಗುಜರಾತ್ ಅಭಿವೃದ್ಧಿ ಮಾದರಿಯದ್ದು ವೀರಾವೇಷದ ಪರಿಭಾಷೆಯಾಗಿದೆ. ಅಲ್ಲಿ ಆರ್ಥಿಕ ಸಮೃದ್ಧತೆಗೆ ಆದ್ಯತೆಯು ದೊರೆಯುತ್ತದೆ. ಅಲ್ಲಿ ವರಮಾನವೇ ಜನರ ಬದುಕಿನ ಮೊತ್ತವಾಗಿದೆ. ಈ ಕಾರಣಕ್ಕೆ ಉದ್ಯಮಪತಿಗಳು ಅದರ ಪರವಾಗಿ ಉತ್ಸಾಹದಿಂದ ಮಾತನಾಡುತ್ತಿದ್ದಾರೆ. ಈ ಮಾದರಿಗೆ ಕಾರ್ಪೊರೇಟ್ ಸಂಸ್ಕೃತಿಯನ್ನು ಪೋಷಿಸುವ ಗುಣವಿದೆ. ಭಾರತವು 'ಸೂಪರ್ ಪವರ್' ಆಗಬೇಕು ಎಂಬ ಸಂಗತಿಯು ಸದರಿ ಮಾದರಿಯ ಮೂಲದಲ್ಲಿ ಕೆಲಸ ಮಾಡುತ್ತಿದೆ. ಅದಕ್ಕಾಗಿ ಈ ಮಾದರಿಯನ್ನು 'ತೊಡೆ ತಟ್ಟಿ–ತೋಳೇರಿಸಿ' ಮಂಡಿಸಲಾಗುತ್ತಿದೆ. ಆದರೆ ಅಭಿವೃದ್ಧಿ ಎನ್ನುವುದು ಜನರ ಬದುಕಿಗೆ ಸಂಬಂಧಿಸಿದ್ದಾಗಿದೆ. ವರಮಾನವೇ ಜನರ ಬದುಕಿನ ಮೊತ್ತವಲ್ಲ. ಜನರ ಬದುಕನ್ನು ಸಮೃದ್ಧಗೊಳಿಸುವುದು ಅಭಿವೃದ್ಧಿಯ ಗುರಿಯಾಗಬೇಕೇ ವಿನಾ ಆರ್ಥಿಕ ಸಮೃದ್ಧತೆಯಲ್ಲ. ಅಭಿವೃದ್ಧಿ ಫಲಗಳು ಎಲ್ಲರಿಗೂ ದೊರೆಯುವಂತೆ ಮಾಡುವುದು ಇಲ್ಲಿ ಮುಖ್ಯವಾಗಬೇಕು. ವರಮಾನದಲ್ಲಿ ಏರಿಕೆಯಾಗಿಬಿಟ್ಟರೆ, ಉತ್ಪಾದನೆಯು ತೀವ್ರಗತಿಯಲ್ಲಿ ಬೆಳೆದುಬಿಟ್ಟರೆ, ಬಂಡವಾಳ ಹೂಡಿಕೆಯು ದೊಡ್ಡದಾಗಿ ನಡೆದುಬಿಟ್ಟರೆ ಅಭಿವೃದ್ಧಿ ಆದಂತೆ ಅಲ್ಲ. ಈ ಎಲ್ಲ ಬೆಳವಣಿಗೆಯ, ಏರಿಕೆಯ ಫಲಗಳನ್ನು ಜನರು ಅನುಭವಿಸುತ್ತಿದ್ದಾರೆಯೇ ಎಂಬುದು ಇಲ್ಲಿ ಆತ್ಯಂತಿಕ ಸಂಗತಿಯಾಗಿದೆ. ವರಮಾನದಲ್ಲಿ, ಉತ್ಪಾದನೆಯಲ್ಲಿ, ಬಂಡವಾಳ ಹೂಡಿಕೆಯಲ್ಲಿ ಏರಿಕೆಯು ಅಭಿವೃದ್ಧಿಗೆ ಅಗತ್ಯ. ಆದರೆ ಅದೇ ಅಭಿವೃದ್ಧಿಯಲ್ಲ.

ಗುಜರಾತ್ ಅಭಿವೃದ್ಧಿ ಮಾದರಿಯಲ್ಲಿ ಪ್ರಭುತ್ವಕ್ಕೆ ಪರಮೋಚ್ಚ ಸ್ಥಾನವಿರುತ್ತದೆ. ಪ್ರಭುತ್ವವು ಶಕ್ತಿಶಾಲಿಯಾದರೆ, ಅಲ್ಲಿ ವೀರಾವೇಷದ ಪರಿಭಾಷೆ ಬಳಸಿದರೆ, ಶಸ್ತ್ರಾಸ್ತ್ರಗಳ ಉತ್ಪಾದನೆಗೆ ಆದ್ಯತೆ ನೀಡಿದರೆ ದೇಶ/ಆರ್ಥಿಕತೆಯು ಸಮೃದ್ಧವಾಗಿ ಬಿಡುತ್ತದೆ ಎಂಬ ನಂಬಿಕೆಯಿದೆ. ಅಭಿವೃದ್ಧಿಯಲ್ಲಿ ಪ್ರಭುತ್ವದ ಪಾತ್ರ ತುಂಬ ಮುಖ್ಯ, ನಿಜ. ಆದರೆ ಅದು ವೀರಾವೇಷದ್ದಾಗಬಾರದು. ಅದು ಜೀವಪರವಾದುದಾಗಬೇಕು. ಗುಜರಾತ್ ಅಭಿವೃದ್ಧಿ ಮಾದರಿಯಲ್ಲಿ 'ಅಭಿವೃದ್ಧಿಗಾಗಿ ಜನರು' ಎಂಬ ಸೂತ್ರವಿದೆ ವಿನಾ 'ಜನರಿಗಾಗಿ ಅಭಿವೃದ್ಧಿ' ಎಂಬ ಸೂತ್ರವಿಲ್ಲ. ಗುಜರಾತ್ ಅಭಿವೃದ್ಧಿ ಮಾದರಿಯ ಮೂಲದಲ್ಲಿರುವ ರೆಟರಿಕ್ ಬಗ್ಗೆ ನಾವು ಎಚ್ಚರದಿಂದಿರಬೇಕು. ನಾಡು ಮೊದಲು, ನಾಡವರು ನಂತರ ಎಂಬ ಉನ್ಮಾದದ ತತ್ವ ಇಲ್ಲಿ ಕೆಲಸ ಮಾಡುತ್ತಿದೆ. ನಾಡು ಮುಖ್ಯ ಮತ್ತು ಮೊದಲು, ನಿಜ. ಆದರೆ ನಾಡವರಿಲ್ಲದೆ ನಾಡು ಇರಲು ಸಾಧ್ಯವೆ ! ನಾಡವರ ಜೊತೆಗೆ ನಾಡಿನ ಬದುಕು ಸಮೃದ್ಧವಾಗಬೇಕು. ಆದರೆ ಗುಜರಾತಿನ ಅಭಿವೃದ್ಧಿ ಮಾದರಿಯಲ್ಲಿ ನಾಡವರು ನಾಡಿನ ಮುಂದೆ ಎರಡನೆಯವರಾಗಿಬಿಡುತ್ತಾರೆ. ಇದರ ಬಗ್ಗೆ ನಾವು ಎಚ್ಚರದಿಂದಿರಬೇಕು.

**ಭಾಗ–೨**

**ಲಿಂಗ ಸಮಾನತೆಯ ರಾಜಕಾರಣ**

ಕೇರಳ, ತಮಿಳುನಾಡು, ಗೋವಾ, ತ್ರಿಪುರ, ಸಿಕ್ಕಿಂ ರಾಜ್ಯಗಳ ಅಭಿವೃದ್ಧಿ ಮಾದರಿಗಳು ಮಹಿಳಾ–ಸ್ಪಂದಿ ಮಾದರಿಗಳಾಗಿವೆ. ಗುಜರಾತಿನದ್ದು 'ವೀರಾವೇಷ'ದ ಮಾದರಿಯಾಗಿದೆ. ವೀರಾವೇಷದ ಪರಿಭಾಷೆ ಎಲ್ಲಿರುತ್ತದೋ ಅಲ್ಲಿ ಲಿಂಗ ಸಮಾನತೆಗೆ ಆದ್ಯತೆ ದೊರೆಯುವುದಿಲ್ಲ. 'ವೀರಾವೇಷ' ಅನ್ನುವುದೇ ಲಿಂಗ ತಾರತಮ್ಯದ ನುಡಿ (ಸೆಕ್ಸಿಯಿಸ್ಟ್). ಜನಗಣತಿ ೨೦೧೧ರ ಪ್ರಕಾರ ಲಿಂಗ ಅನುಪಾತದಲ್ಲಿ ಗುಜರಾತಿನ ಸಾಧನೆ ಹೇಳಿಕೊಳ್ಳುವಂತಿಲ್ಲ. ಆ ರಾಜ್ಯದಲ್ಲಿನ ಲಿಂಗ ಅನುಪಾತ ೨೦೧೧ರಲ್ಲಿ ಕೇವಲ ೯೧೯ರಷ್ಟಾದರೆ ಕರ್ನಾಟಕದ್ದು ೯೭೩ ಮತ್ತು ಕೇರಳ ರಾಜ್ಯದಲ್ಲಿ ಅದು ೧೦೮೪. ಮಹಿಳೆಯರಿಗೆ ಅನುಕೂಲವಾದ ರೀತಿಯಲ್ಲಿ ಅದು ಕರ್ನಾಟಕ ಮತ್ತು ಕೇರಳ ರಾಜ್ಯಗಳಲ್ಲಿದ್ದರೆ ಅದು ಗುಜರಾತಿನಲ್ಲಿ ಮಹಿಳೆಯರಿಗೆ ತೀವ್ರ ಪ್ರತಿಕೂಲವಾಗಿದೆ. ಲಿಂಗ ಅನುಪಾತವು ಸಾವಿರಕ್ಕಿಂತ ಕಡಿಮೆಯಿದ್ದರೆ ಅದು ಮಹಿಳೆಯರಿಗೆ ಪ್ರತಿಕೂಲವಾಗಿರುತ್ತದೆ ಮತ್ತು ಅದು ಸಾವಿರ ಅಥವಾ ಸಾವಿರಕ್ಕಿಂತ ಅಧಿಕವಿದ್ದರೆ ಅದು ಮಹಿಳೆಯರಿಗೆ ಅನುಕೂಲವಾಗಿರುತ್ತದೆ. ನಮ್ಮ ದೇಶದಲ್ಲಿ ಹೆಣ್ಣು ಶಿಶುಗಳ ಮರಣ ಪ್ರಮಾಣ ಗಂಡು ಶಿಶುಗಳ ಮರಣ ಪ್ರಮಾಣಕ್ಕಿಂತ ಅಧಿಕವಿರುವ ೨೦ ರಾಜ್ಯಗಳ ಅವರೋಹಣ ಪಟ್ಟಿಯಲ್ಲಿ ಗುಜರಾತಿನ ಸ್ಥಾನ ನಾಲ್ಕನೆಯದಾದರೆ ಕರ್ನಾಟಕದ ಸ್ಥಾನ ೧೪ ಮತ್ತು ಕೇರಳದ್ದು ೨೦. ಅದೇ ರೀತಿಯಲ್ಲಿ ಲಿಂಗ

**ಕಾಣೆಯಾದ ಮಹಿಳೆಯರು**

ಅಮರ್ತ್ಯ ಸೇನ್ ಅವರು ಲಿಂಗ ಅನುಪಾತವನ್ನು ಲಿಂಗ ಸಮಾನತೆಯ ಸೂಚಿಯನ್ನಾಗಿ ಬಳಸುತ್ತಾರೆ. ಒಂದು ಸಮಾಜದಲ್ಲಿನ ಪ್ರತಿ ಸಾವಿರ ಪುರುಷರ ಎದುರಿಗಿರುವ ಮಹಿಳೆಯರ ಸಂಖ್ಯೆಯನ್ನು ಲಿಂಗ ಅನುಪಾತವೆಂದು ನಿರ್ವಚಿಸಲಾಗಿದೆ. ವೈಜ್ಞಾನಿಕವಾಗಿ ಲಿಂಗ ಅನುಪಾತವು ೧೦೦೦ಕ್ಕಿಂತ ಅಧಿಕವಿರಬೇಕು. ಅದು ೧೦೦೦ಕ್ಕಿಂತ ಕಡಿಮೆಯಿದ್ದರೆ ಅಲ್ಲಿ ಮಹಿಳೆಯರು ಕಾಣೆಯಾಗಿದ್ದಾರೆ ಎಂದರ್ಥ. ನಮ್ಮ ದೇಶದ ಸಂದರ್ಭದಲ್ಲಿ ಲಿಂಗ ಅನುಪಾತವು ಕೇರಳ ರಾಜ್ಯದಲ್ಲಿ ಮಹಿಳೆಯರಿಗೆ ಅನುಕೂಲವಾಗಿದೆ. ಅಲ್ಲಿ ಮಹಿಳೆಯರು ಕಾಣೆಯಾಗಿಲ್ಲ. ಆದರೆ ಬಹಳಷ್ಟು ರಾಜ್ಯಗಳಲ್ಲಿ ಮಹಿಳೆಯರು ಅಪಾರ ಸಂಖ್ಯೆಯಲ್ಲಿ ಕಾಣೆಯಾಗಿದ್ದಾರೆ. ಕೆಳಗಿನ ಕೋಷ್ಟಕ ನೋಡಿ :

**ಕೋಷ್ಟಕ–೧**

**ಆಯ್ದ ರಾಜ್ಯಗಳಲ್ಲಿ ಕಾಣೆಯಾದ ಮಹಿಳೆಯರು : ೨೦೧೧**

| ಆಯ್ದ ರಾಜ್ಯಗಳು | ಪುರುಷರು (ಲಕ್ಷಗಳಲ್ಲಿ) | ಮಹಿಳೆಯರು (ಲಕ್ಷಗಳಲ್ಲಿ) | ಕಾಣೆಯಾದ ಮಹಿಳೆಯರು (ಲಕ್ಷಗಳಲ್ಲಿ) | ಕಾಣೆಯಾದ ಮಹಿಳೆಯರ ಪ್ರಮಾಣ (ಶೇ.) |
|---|---|---|---|---|
| ಕೇರಳ | ೧೬೦.೨೭ | ೧೭೩.೭೯ | ಇಲ್ಲ | -- |
| ಗುಜರಾತ್ | ೩೧೪.೯೧ | ೨೮೯.೪೮ | ೨೫.೪೩ | ಶೇ. ೮.೭೯ |
| ಕರ್ನಾಟಕ | ೩೦೯.೬೬ | ೩೦೧.೨೮ | ೮.೩೮ | ಶೇ. ೨.೭೮ |
| ಗೋವಾ | ೭.೩೯ | ೭.೧೯ | ೦.೨೦ | ಶೇ. ೨.೬೪ |
| ತಮಿಳುನಾಡು | ೩೬೧.೩೭ | ೩೬೦.೦೯ | ೧.೨೮ | ಶೇ. ೦.೩೫ |
| ಭಾರತ | ೬೨೩೧.೨೨ | ೫೮೭೪.೪೭ | ೩೫೬.೭೫ | ಶೇ.೧೬.೨೮ |

***ಮೂಲ :*** *ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಕರ್ನಾಟಕ. ಸಿರೀಸ್ ೩೦.*

***ಟಿಪ್ಪಣಿ :*** *ಈಗಾಗಲೆ ಹೇಳಿರುವಂತೆ ವೈಜ್ಞಾನಿಕವಾಗಿ ಲಿಂಗ ಅನುಪಾತ ಸಾವಿರಕ್ಕಿಂತ ಅಧಿಕ ಇರಬೇಕು. ಇಲ್ಲಿ ಅದನ್ನು ಸಾವಿರ ಎಂದು ಊಹಿಸಿಕೊಂಡು ಕಾಣೆಯಾದ ಮಹಿಳೆಯರನ್ನು ಲೆಕ್ಕ ಹಾಕಲಾಗಿದೆ. ಪ್ರತಿ ರಾಜ್ಯದಲ್ಲಿನ ಒಟ್ಟು ಮಹಿಳೆಯರಲ್ಲಿ ಕಾಣೆಯಾದ ಮಹಿಳೆಯರ ಪ್ರಮಾಣವನ್ನು ಪ್ರಸ್ತುತ ಅಧ್ಯಯನಕ್ಕಾಗಿ ಇಲ್ಲಿ ನೀಡಲಾಗಿದೆ.*

ಕೋಷ್ಟಕ–೧ರಲ್ಲಿ ತೋರಿಸಿರುವಂತೆ ಐದು ರಾಜ್ಯಗಳ ಪೈಕಿ ಕಾಣೆಯಾದ ಮಹಿಳೆಯರು ಅತ್ಯಧಿಕ ಪ್ರಮಾಣದಲ್ಲಿ ಗುಜರಾತ್ ರಾಜ್ಯದಲ್ಲಿದ್ದಾರೆ. ಅಲ್ಲಿನ ಒಟ್ಟು ಮಹಿಳೆಯರ ಸಂಖ್ಯೆಯಲ್ಲಿ ಕಾಣೆಯಾದ ಮಹಿಳೆಯರ ಪ್ರಮಾಣ ಶೇ. ೮.೭೯. ಇದು ತಮಿಳುನಾಡಿನಲ್ಲಿ ಅತ್ಯಂತ ಕಡಿಮೆಯಿದೆ (೦.೩೫). ಕೇರಳ ರಾಜ್ಯದಲ್ಲಿ ಮಹಿಳೆಯರ ಸಂಖ್ಯೆಯು ಪುರುಷರ ಸಂಖ್ಯೆಗಿಂತ ಅಧಿಕವಿರುವುದರಿಂದ ಅಲ್ಲಿ ಮಹಿಳೆಯರು ಕಾಣೆಯಾಗುವ ಪ್ರಮೇಯ ಬರುವುದಿಲ್ಲ. ಹೀಗೆ ಗುಜರಾತ್ ರಾಜ್ಯದಲ್ಲಿ ಮಹಿಳೆಯರ ಸ್ಥಿತಿಗತಿಯು ಉಳಿದ ರಾಜ್ಯಗಳಾದ ಕೇರಳ, ಕರ್ನಾಟಕ, ಗೋವಾ ಮತ್ತು ತಮಿಳುನಾಡು ರಾಜ್ಯಗಳಿಗೆ ಹೋಲಿಸಿದರೆ ಉತ್ತಮವಾಗೇನಿಲ್ಲ. ಈ ಹಿನ್ನೆಲೆಯಲ್ಲಿ ಅದನ್ನು ಉತ್ತಮವಾದ ಅಭಿವೃದ್ಧಿ ಮಾದರಿಯೆಂದು ಒಪ್ಪಿಕೊಳ್ಳುವುದು ಕಷ್ಟಸಾಧ್ಯ. ಈ ವಿಷಯದಲ್ಲಿಯೂ ಕೇರಳ ಎಲ್ಲ ರಾಜ್ಯಗಳನ್ನು ಮೀರಿಸುವ ಸ್ಥಿತಿಯಲ್ಲಿದೆ. ಆದರೆ ಇಂದು ಗುಜರಾತಿನ ಮಾದರಿಯ ಬಗ್ಗೆ ಎಲ್ಲರೂ ಮಾತನಾಡುತ್ತಿದ್ದಾರೆ. ಕೇರಳದ ಸಾಧನೆಯ ಬಗ್ಗೆ ಯಾರೂ ಗಮನ ನೀಡುತ್ತಿಲ್ಲ. ಈ ಸಂಗತಿಗಳನ್ನು ವಿವೇಚನಾಶೀಲರಾದ ಮತದಾರರು ಗಮನಿಸಬೇಕು.

ಅನುಪಾತ ಹೆಣ್ಣು ಶಿಶುಗಳಿಗೆ ಅಪಾಯಕಾರಿಯಾಗಿರುವ ರಾಜ್ಯಗಳ ಅವರೋಹಣ ಪಟ್ಟಿಯಲ್ಲಿ ಗುಜರಾತಿನ ಸ್ಥಾನ ಆರನೆಯದಾದರೆ ಕರ್ನಾಟಕದ್ದು ೧೪ ಮತ್ತು ಕೇರಳದ್ದು ೧೯ನೆಯದು. ಅಂದರೆ ಲಿಂಗ ಅಸಮಾನತೆ ತೀವ್ರವಾಗಿರುವ ರಾಜ್ಯಗಳಲ್ಲಿ ಗುಜರಾತ್ ಮುಖ್ಯ ಸ್ಥಾನದಲ್ಲಿದೆ (ಅನುಬಂಧ–೩). ಲಿಂಗ ಸಮಾನತೆಯಲ್ಲಿ ಕೇರಳ, ತಮಿಳುನಾಡು, ಗೋವಾ, ಕರ್ನಾಟಕ ರಾಜ್ಯಗಳು ಗುಜರಾತಿಗಿಂತ ಉತ್ತಮ ಸ್ಥಾನದಲ್ಲಿವೆ (ವಿವರಗಳಿಗೆ ನೋಡಿ : ದಿ ಹಿಂದು. ಗುರುವಾರ, ಸೆಪ್ಟೆಂಬರ್ ೨೬, ೨೦೧೩. ಪು : ೧೫). ಅಭಿವೃದ್ಧಿಯಲ್ಲಿ ಲಿಂಗ ಸಮಾನತೆಗೆ ನಿರ್ಣಾಯಕ ಪಾತ್ರವಿದೆ. ವಿಶ್ವಸಂಸ್ಥೆಯು ತನ್ನ ೨೦೧೨ರ ವಿಶ್ವ ಅಭಿವೃದ್ಧಿ ವರದಿಯಲ್ಲಿ ಲಿಂಗ ಸಮಾನತೆಯನ್ನು 'ಸ್ಮಾರ್ಟ್ ಎಕನಾಮಿಕ್ಸ್' ಎಂದು ಕರೆದಿದೆ. ಯುಎನ್‌ಡಿಪಿಯು ತನ್ನ ೧೯೯೫ರ ಮಾನವ ಅಭಿವೃದ್ಧಿ ವರದಿಯಲ್ಲಿ 'ಅಭಿವೃದ್ಧಿಯು ಮಹಿಳೆಯರನ್ನು ಒಳಗೊಳ್ಳದಿದ್ದರೆ ಅದಕ್ಕೆ ಅಪಾಯ ತಪ್ಪಿದ್ದಲ್ಲ' ಎಂದು ಎಚ್ಚರಿಸಿದೆ. ಅಂದರೆ ಅದು ಪ್ರಮುಖ ಆರ್ಥಿಕ ಸೂಚಿ. ಈ ವಿಷಯದಲ್ಲಿ ಗುಜರಾತ್ ಮಾದರಿ ಅನುಕರಣೀಯ ವಾದುದೇನಲ್ಲ. ಈ ಮಾದರಿಯಲ್ಲಿ ಮಹಿಳೆಯರನ್ನು ಕೇವಲ 'ತಾಯಿ'ಯಾಗಿ ಮಾತ್ರ ಮನ್ನಿಸಲಾಗುತ್ತದೆ ವಿನಾ ಒಬ್ಬ 'ವ್ಯಕ್ತಿ'ಯಾಗಿಯಲ್ಲ. ಈ ಮಾದರಿಯಲ್ಲಿ ಮಹಿಳೆಗೆ 'ಗೃಹಿಣಿ'ಯಾಗಿ ಸ್ಥಾನವಿದೆ ವಿನಾ 'ವ್ಯಕ್ತಿ'ಯಾಗಿ ಅಲ್ಲ. ಈ ಮಾದರಿಯ ಬಗ್ಗೆ ಉತ್ಸಾಹದಿಂದ ಮಾತನಾಡುವವರು ಇದರ ಬಗ್ಗೆ ಗಮನ ಹರಿಸಬೇಕು. ಲಿಂಗ ಅಸಮಾನತೆ ಅನ್ನುವುದು ಕೇವಲ ಮಹಿಳೆಯರು ಮತ್ತು ಪುರುಷರ ನಡುವಿನ ಅಸಮಾನತೆ ಮಾತ್ರವಲ್ಲ. ಅದು ಉನ್ನತ ವರ್ಗದ ಮಹಿಳೆಯರು ಮತ್ತು ಕೆಳವರ್ಗದ ಮಹಿಳೆಯರ ನಡುವಿನ ಅಸಮಾನತೆಯನ್ನು ಗಮನಿಸುವ ಅಗತ್ಯವಿದೆ.

### ಭಾಗ–೩

**ಬಹುಳಾಕಾರಿ ಅಭಿವೃದ್ಧಿ ಮಾದರಿಗಳು**

ನಮ್ಮ ದೇಶದಲ್ಲಿ ವಿವಿಧ ರಾಜ್ಯಗಳು ವಿವಿಧ ಬಗೆಯ ಅಭಿವೃದ್ಧಿ ಮಾದರಿಗಳನ್ನು ಅನುಸರಿಸುತ್ತಿವೆ. ಅವು ಆಯಾ ರಾಜ್ಯಗಳ ಚರಿತ್ರೆ, ಭೂಗೋಳ, ರಾಜಕಾರಣ, ಸಾಮಾಜಿಕ ವ್ಯವಸ್ಥೆ, ಸಂಪನ್ಮೂಲ ನಿಕ್ಷೇಪ ಮುಂತಾದ ಸಂಗತಿಗಳನ್ನು ಅವಲಂಬಿಸಿರುತ್ತವೆ. ಬೃಹತ್ ಉಪಖಂಡದೋಪಾದಿಯಲ್ಲಿರುವ ಭಾರತದಲ್ಲಿ ಏಕಘನ ಅಭಿವೃದ್ಧಿ ಮಾದರಿಯೊಂದಿರಲು ಸಾಧ್ಯವಿಲ್ಲ ಮತ್ತು ಅದು ಸಾಧುವೂ ಅಲ್ಲ. ಏಕಘನ ಸಂಸ್ಕೃತಿ ಅನ್ನುವುದು ಒಕ್ಕೂಟ ವ್ಯವಸ್ಥೆಗೆ ಅಪಾಯಕಾರಿ ಯಾದುದು. ಗುಜರಾತ್ ಅಭಿವೃದ್ಧಿ ಮಾದರಿಯು ಇಂತಹ ಏಕಘನ ಆಕೃತಿಯ ಮಾದರಿಯಾಗಿದೆ. ಅದು ನಮ್ಮ ಒಕ್ಕೂಟ ವ್ಯವಸ್ಥೆಗೆ ಅಪಾಯಕಾರಿಯಾಗಿದೆ. ನಮ್ಮ ದೇಶದಲ್ಲಿ ವಿವಿಧ ಬಗೆಯ ಅಭಿವೃದ್ಧಿ ಮಾದರಿಗಳಿವೆ. ಈ ವಿನ್ಯಾಸವು ರಾಷ್ಟ್ರಮಟ್ಟದಲ್ಲಿ ಉಂಟಾಗುವ ಕುಸಿತ/ಬಿಕ್ಕಟ್ಟನ್ನು ಎದುರಿಸಲು ಅನುಕೂಲವಾಗಿದೆ. ರಾಷ್ಟ್ರದ ಒಂದು ಭಾಗದಲ್ಲಿ ಕುಸಿತ/ಬಿಕ್ಕಟ್ಟು ಸಂಭವಿಸಿದರೆ ಅದನ್ನು ಇನ್ನೊಂದು ಭಾಗದಲ್ಲಿನ ಬೆಳವಣಿಗೆ ಮೂಲಕ ಸರಿದೂಗಿಸಬಹುದು. ಏಕಘನ ಆಕೃತಿಯ ಮಾದರಿಯಲ್ಲಿ ಇದು ಸಾಧ್ಯವಿಲ್ಲ. ನಮ್ಮ ಮಾರುಕಟ್ಟೆ, ನಮ್ಮ ಉತ್ಪಾದನಾ ವ್ಯವಸ್ಥೆ, ಅನುಭೋಗ ಸ್ವರೂಪ ಕೇವಲ ಬೃಹತ್ ಸ್ವರೂಪದ್ದು ಮಾತ್ರವಲ್ಲ. ಅವು ವೈವಿಧ್ಯಮಯವಾಗಿವೆ. ಇದನ್ನು ಮೂಲೆ ಗುಂಪು ಮಾಡಿ ಇಡೀ ದೇಶ ಗುಜರಾತ್ ಅಭಿವೃದ್ಧಿ ಮಾದರಿಯನ್ನು ಅಳವಡಿಸಿಕೊಳ್ಳಬೇಕು ಎಂದು ವಾದ ಮಾಡಿದರೆ ಅದನ್ನು ಒಪ್ಪುವುದು ಸಾಧ್ಯವಿಲ್ಲ. ಬಹುಳತೆಯಲ್ಲಿ

## ಮೋದಿ ಕುರಿತಂತೆ ಎನ್. ರಾಮ್ ಅವರ ವ್ಯಾಖ್ಯಾನ



ಖ್ಯಾತ ಚಿಂತಕ ಮತ್ತು ಪತ್ರಕರ್ತ ಎನ್. ರಾಮ್ ಪ್ರಕಾರ ನಮ್ಮ ಸಂವಿಧಾನದಲ್ಲಿನ 'ಯಾರು ಯಾರಿಗೂ ಹೆಚ್ಚು ಸಮಾನರಲ್ಲ, ಅಥವಾ ಕಡಿಮೆ ಸಮಾನರಲ್ಲ' ಎಂಬ ತತ್ವದ ಆಧಾರದಲ್ಲಿ ನರೇಂದ್ರ ಮೋದಿ ಅವರ ಪ್ರಧಾನ ಮಂತ್ರಿತ್ವವು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮತ್ತು ಜಾತ್ಯತೀತ ಮೌಲ್ಯಕ್ಕೆ ಅಪಾಯಕಾರಿಯಾಗುತ್ತದೆ.

**ಅಮೆರಿಕೆಯು ಮೋದಿ ಅವರಿಗೆ ವೀಸಾ ಏಕೆ ನೀಡಲಿಲ್ಲ !**

ಅಮೆರಿಕೆಯು ಮೋದಿ ಅವರಿಗೆ ೨೦೦೫ರಲ್ಲಿ ರಾಜತಾಂತ್ರಿಕ ವೀಸಾ ನೀಡಲಿಲ್ಲ. ಅಮೆರಿಕಾ ಸರ್ಕಾರವು ತನ್ನ ದೇಶದ ಕಾನೂನಿನ ಚೌಕಟ್ಟಿನಲ್ಲಿ ಅಂತಹ ತೀರ್ಮಾನವನ್ನು ತೆಗೆದು ಕೊಂಡಿತ್ತು. ಅಲ್ಲಿನ ಕಾನೂನಿನ ಪ್ರಕಾರ ಧಾರ್ಮಿಕ ಸ್ವಾತಂತ್ರ್ಯವನ್ನು ಯಾರು ಉಲ್ಲಂಘಿಸಿರುತ್ತಾರೋ ಅಥವಾ ಅಂತಹ ಉಲ್ಲಂಘನೆಗೆ ಜವಾಬುದಾರರಾಗಿರುತ್ತಾರೋ ಅಂತಹ ವಿದೇಶಿ ಅಧಿಕಾರಿಗಳು ಅಮೆರಿಕೆಯ ವೀಸಾಗೆ ಅರ್ಹರಾಗುವುದಿಲ್ಲ. ವಾಸ್ತವವಾಗಿ ಯಾರೂ ಕೂಡ ನರೇಂದ್ರ ಮೋದಿ ಅವರನ್ನು ವೈಯಕ್ತಿಕವಾಗಿ ವಿರೋಧಿ ಸುತ್ತಿಲ್ಲ. ಅವರು ಮತ್ತು ಅವರ ಪಕ್ಷವು ಪ್ರತಿನಿಧಿಸುತ್ತಿರುವ ಲೋಕದೃಷ್ಟಿ ಮತ್ತು ಮೌಲ್ಯ ಪ್ರಪಂಚಗಳನ್ನು ಹಾಗೂ ಅವರ ನೀತಿಗಳನ್ನು ವಿರೋಧಿಸಲಾಗುತ್ತಿದೆ.



ಈ 'ವಿಕಾಸ ಪುರುಷ'ನನ್ನು ಬಹುಪಾಲು ಜನರು ವಿರೋಧಿಸುವುದಕ್ಕೆ ಅನೇಕ ಕಾರಣಗಳಿವೆ :

೧. ಜನರಿಗೆ ಮನವರಿಕೆಯಾಗಿರುವಂತೆ ಮೋದಿ ಅವರು ವಿಭಜನಕಾರಿ ವ್ಯಕ್ತಿಯಾಗಿದ್ದಾರೆ. ಅವರ ವಿಭಜನಾ ವ್ಯಕ್ತಿತ್ವವನ್ನು ಗುಜರಾತಿನ ೨೦೦೨ರಲ್ಲಿನ ಮುಸ್ಲಿಮರ ಹತ್ಯಾಕಾಂಡದಲ್ಲಿ ಅವರ ಸರ್ಕಾರ ವಹಿಸಿದ ಪಾತ್ರದ ಮೂಲಕ ಅರ್ಥ ಮಾಡಿಕೊಳ್ಳಬಹುದು. ಅಂದು ನಡೆದ ಹತ್ಯಾಕಾಂಡ ಮತ್ತು ಹಿಂಸೆಯ ಅನುಭವದಿಂದ ಮತ್ತು ಮಾನಸಿಕ ಯಾತನೆಯಿಂದ ಹೊರ ಬರಲು ಅಲ್ಲಿನ ಮುಸ್ಲಿಮರಿಗೆ ಇನ್ನೂ ಸಾಧ್ಯವಾಗಿಲ್ಲ.

೨. ಗುಜರಾತಿನಲ್ಲಿ ಫೆಬ್ರವರಿ–ಮಾರ್ಚ್ ೨೦೦೨ರಲ್ಲಿ ನಡೆದ ಬೃಹತ್ ಹತ್ಯಾಕಾಂಡಕ್ಕೆ ಜವಾಬುದಾರರು ಯಾರು ಎಂಬುದು ಅಲ್ಲಿನ ಸರ್ಕಾರ ನಡೆಸಿದ ವಿಚಾರಣೆ–ತನಿಖೆಯಿಂದ ತಿಳಿದುಬರಲಿಲ್ಲ. ಅದು ಸರ್ವೋಚ್ಚ ನ್ಯಾಯಾಲಯದ ಮಧ್ಯಪ್ರವೇಶದಿಂದ ಬಹಿರಂಗವಾಯಿತು.

೩. ಅಂದು ನಡೆದ ಹತ್ಯಾಕಾಂಡದ ಬಗ್ಗೆ ಇಂದಿಗೂ ಮೋದಿ ಅವರಿಗೆ ಪಶ್ಚಾತ್ತಾಪವಾಗಿಲ್ಲ ಮತ್ತು ಅದರ ಬಗ್ಗೆ ಕ್ಷಮೆ ಯಾಚಿಸುವ ಕನಿಷ್ಠ ಆತ್ಮ ನಿರೀಕ್ಷಣೆಯನ್ನೂ ಅವರು ತೋರಿಸುತ್ತಿಲ್ಲ.

೪. ಗುಜರಾತಿನಲ್ಲಿ ೨೦೦೨ರಲ್ಲಿ ನಡೆದ ಹತ್ಯಾಕಾಂಡವು ಕೇವಲ ಕಾನೂನಾತ್ಮಕ ಅಥವಾ ರಾಜಕೀಯ ವೈಫಲ್ಯ ಮಾತ್ರವಾಗಿರದೆ ಅದು ಮೂಲತಃ ನೈತಿಕ ವೈಫಲ್ಯವಾಗಿದೆ.

ಈ ಹಿನ್ನೆಲೆಯಲ್ಲಿ ನಾವು ೨೦೧೪ರ ಪ್ರಧಾನ ಮಂತ್ರಿ ಉಮೇದುವಾರರಾಗಿರುವ ವ್ಯಕ್ತಿಯನ್ನು ನೋಡಬೇಕಾಗುತ್ತದೆ (ಎನ್. ರಾಮ್ ಅವರ ಲೇಖನದ ಆಯ್ದ ಭಾಗಗಳ ಸಂಕ್ಷಿಪ್ತ ವಿವರಣೆ ಇಲ್ಲಿದೆ).

*(ದಿ ಹಿಂದು, ನವೆಂಬರ್ ೬, ೨೦೧೩. ಬುಧವಾರ, ಪು : ೮)*

**ಅನುಬಂಧ–೧**

| ಆಯ್ದ ರಾಜ್ಯಗಳು | ಮಾನವ ಅಭಿವೃದ್ಧಿ ಸೂಚ್ಯಂಕ : ೧೯೯೯–೨೦೦೦ | ಮಾನವ ಅಭಿವೃದ್ಧಿ ಸೂಚ್ಯಂಕ : ೨೦೦೭–೨೦೦೮ | ಲಿಂಗ ಅನುಪಾತ : ೨೦೧೧ |
|---|---|---|---|
| ಕೇರಳ | ೦.೬೭೭ (೨) | ೦.೭೯೦ (೧) | ೧೦೮೪ |
| ಗುಜರಾತ್ | ೦.೪೬೬ (೧೦) | ೦.೫೨೭ (೧೧) | ೯೧೯ |
| ಕರ್ನಾಟಕ | ೦.೪೩೨ (೧೨) | ೦.೫೧೯ (೧೨) | ೯೭೩ |
| ಗೋವಾ | ೦.೫೯೫ (೩) | ೦.೬೧೭ (೪) | ೯೭೩ |
| ತಮಿಳುನಾಡು | ೦.೪೮೦ (೮) | ೦.೫೭೦ (೮) | ೯೯೬ |
| ಭಾರತ | ೦.೩೮೭ | ೦.೪೬೭ | ೯೪೩ |

***ಮೂಲ :*** *ಇಂಡಿಯನ್ ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್–೨೦೧೧. ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್. ನವದೆಹಲಿ. ಪುಟ ೨೪. (೨) ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಕರ್ನಾಟಕ ಸಿರೀಸ್ – ೩೦. ಪುಟ ೧೮.*

***ಟಿಪ್ಪಣಿ :*** *(೧) ಆವರಣದಲ್ಲಿನ ಅಂಕಿಗಳು ರಾಷ್ಟ್ರದಲ್ಲಿ ರಾಜ್ಯಗಳ ಶ್ರೇಣಿಯಲ್ಲಿ ಸಂಬಂಧಿಸಿದ ರಾಜ್ಯದ ಸ್ಥಾನವನ್ನು ತೋರಿಸುತ್ತವೆ. (೨) ಪಟ್ಟಿಯಲ್ಲಿ ತೋರಿಸಿರುವಂತೆ ೧೯೯೯–೨೦೦೦ದಿಂದ ೨೦೦೭–೨೦೦೮ರ ಅವಧಿಯಲ್ಲಿ ಗುಜರಾತಿನ ಸ್ಥಾನ ೧೦ರಿಂದ ೧೧ಕ್ಕೆ ಇಳಿದಿದ್ದರೆ ಕರ್ನಾಟಕವು ತನ್ನ ಸ್ಥಾನವನ್ನು ೧೨ರಲ್ಲಿ ಕಾಯ್ದುಕೊಂಡಿದೆ. ಆದರೆ ಕೇರಳವು ಎರಡನೆಯ ಸ್ಥಾನದಿಂದ ಒಂದನೆಯ ಸ್ಥಾನಕ್ಕೆ ಏರಿದೆ. ಯಾವ ಮಾದರಿಯು ಇಲ್ಲಿ ಉತ್ತಮ?*

**ಅನುಬಂಧ–೨**

**ಸಮಗ್ರ ದುಸ್ಥಿತಿ ಸೂಚ್ಯಂಕ**

ನಮ್ಮ ದೇಶದ ೨೮ ರಾಜ್ಯಗಳ ದುಸ್ಥಿತಿ ಮಟ್ಟವನ್ನು ಮತ್ತು ಅದರ ಸ್ವರೂಪವನ್ನು ಗುರುತಿಸುವ ಕಾರ್ಯಕ್ಕಾಗಿ ಶ್ರೀ ರಘುರಾಮ್ ರಾಜನ್ ಅವರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಲಾಗಿತ್ತು. ಅದು ಮಾಸಿಕ ತಲಾ ಅನುಭೋಗ ವೆಚ್ಚ, ಶಿಕ್ಷಣ, ಆರೋಗ್ಯ, ಕೌಟುಂಬಿಕ ಆಸ್ತಿ, ಬಡತನದ ಪ್ರಮಾಣ, ಮಹಿಳಾ ಸಾಕ್ಷರತೆ, ಪ.ಜಾ. ಮತ್ತು ಪ.ಪಂ.ಗಳ ಜನಸಂಖ್ಯಾ ಪ್ರಮಾಣ, ನಗರೀಕರಣ, ಹಣಕಾಸು ಒಳಗೊಳ್ಳುವಿಕೆ ಮತ್ತು ಭೌತಿಕ ಸಂಪರ್ಕ ಎಂಬ ಹತ್ತು ಸೂಚಿಗಳನ್ನು ಆಧರಿಸಿ ದುಸ್ಥಿತಿ ಸೂಚ್ಯಂಕಗಳನ್ನು ಲೆಕ್ಕ ಹಾಕಿದೆ. ಈ ಸೂಚ್ಯಂಕದ ಮೌಲ್ಯ ಸೊನ್ನೆಯಿಂದ ಒಂದರವರೆಗಿರುತ್ತದೆ. ಸೊನ್ನೆಗೆ ಹತ್ತಿರ ಇರುವ ರಾಜ್ಯಗಳಲ್ಲಿ ದುಸ್ಥಿತಿ ಕಡಿಮೆಯಿರುತ್ತದೆ. ಎಲ್ಲಿ ಸೂಚ್ಯಂಕದ ಮೌಲ್ಯ ಒಂದಕ್ಕೆ ಹತ್ತಿರ ಇರುತ್ತದೋ ಆ ರಾಜ್ಯದ ದುಸ್ಥಿತಿಯು ಅಧಿಕ ಎಂದು ತಿಳಿಯಬೇಕು. ಆರೋಹಣ ಕ್ರಮದಲ್ಲಿ ೨೮ ರಾಜ್ಯಗಳ ದುಸ್ಥಿತಿ ಸೂಚ್ಯಂಕಗಳನ್ನು ನೀಡಲಾಗಿದೆ.

**ಸಮಗ್ರ ದುಸ್ಥಿತಿ ಸೂಚ್ಯಂಕ – ೨೦೧೨**

| **ಅಭಿವೃದ್ಧಿ ಹೊಂದಿದ ರಾಜ್ಯಗಳು ಸೂಚ್ಯಂಕದ ಮೌಲ್ಯ ೦.೪ಕ್ಕಿಂತ ಕಡಿಮೆ (<೦.೪)** | | **ಅತಿ ಹಿಂದುಳಿದ ರಾಜ್ಯಗಳು ಸೂಚ್ಯಂಕದ ಮೌಲ್ಯ ೦.೪ಕ್ಕಿಂತ ಅಧಿಕ ಮತ್ತು ೦.೬ಕ್ಕಿಂತ ಕಡಿಮೆ (>೦.೪ ಮತ್ತು <೦.೬)** | | **ಅತ್ಯಂತ ಹಿಂದುಳಿದ ರಾಜ್ಯಗಳು ಸೂಚ್ಯಂಕದ ಮೌಲ್ಯ ೦.೬ಕ್ಕಿಂತ ಅಧಿಕ (>೦.೬)** | |
|---|---|---|---|---|---|
| ಗೋವಾ | ೦.೦೪೫ | ಹಿಮಾಚಲಪ್ರದೇಶ | ೦.೪೦೪ | ರಾಜಸ್ಥಾನ್ | ೦.೬೨೮ |
| ಕೇರಳ | ೦.೦೯೫ | ಸಿಕ್ಕಿಮ್ | ೦.೪೩೦ | ಉತ್ತರಪ್ರದೇಶ | ೦.೬೩೮ |
| ತಮಿಳುನಾಡು | ೦.೩೪೧ | ಕರ್ನಾಟಕ | ೦.೪೫೩ | ಮೇಘಾಲಯ | ೦.೬೯೩ |
| ಪಂಜಾಬ್ | ೦.೩೪೫ | ತ್ರಿಪುರ | ೦.೪೭೪ | ಅಸ್ಸಾಮ್ | ೦.೭೦೭ |
| ಮಹಾರಾಷ್ಟ್ರ | ೦.೩೫೨ | ಗುಜರಾತ್ | ೦.೪೯೧ | ಅರುಣಾಚಲಪ್ರದೇಶ | ೦.೭೨೯ |
| ಉತ್ತರಾಕಾಂಡ | ೦.೩೮೩ | ಮಿಝೋರಾಮ್ | ೦.೪೯೫ | ಜಾರ್ಖಂಡ್ | ೦.೭೪೬ |
| ಹರಿಯಾಣ | ೦.೩೯೫ | ಜಮ್ಮು ಮತ್ತು ಕಾಶ್ಮೀರ | ೦.೫೦೪ | ಛತ್ತೀಸ್‌ಗಡ | ೦.೭೫೨ |
| | | ಆಂಧ್ರಪ್ರದೇಶ | ೦.೫೨೧ | ಮಧ್ಯಪ್ರದೇಶ | ೦.೭೫೯ |
| | | ನಾಗಾಲ್ಯಾಂಡ್ | ೦.೫೪೬ | ಬಿಹಾರ | ೦.೭೬೫ |
| | | ಪಶ್ಚಿಮ ಬಂಗಾಳ | ೦.೫೫೧ | ಒರಿಸ್ಸಾ | ೦.೭೯೮ |
| | | ಮಣಿಪುರ | ೦.೫೭೧ | – | |

***ಟಿಪ್ಪಣಿ :*** *ಮುಂದುವರಿದ ರಾಜ್ಯಗಳ ಪಟ್ಟಿಯಲ್ಲಿ ಏಳು ರಾಜ್ಯಗಳಿವೆ. ಕೇರಳ ಎರಡನೆಯ ಸ್ಥಾನದಲ್ಲಿದ್ದರೆ ತಮಿಳುನಾಡು ಮೂರನೆಯ ಸ್ಥಾನದಲ್ಲಿದೆ. ಈ ಗುಂಪಿನಲ್ಲಿ ಗುಜರಾತ್ ಇಲ್ಲ. ಎರಡನೆಯ ಹಿಂದುಳಿದ ರಾಜ್ಯಗಳ ಪಟ್ಟಿಯಲ್ಲಿ ಹನ್ನೊಂದು ರಾಜ್ಯಗಳಿವೆ. ಅದರಲ್ಲಿ ಹಿಮಾಚಲ ಪ್ರದೇಶ, ಸಿಕ್ಕಿಂ, ಕರ್ನಾಟಕ ಮತ್ತು ತ್ರಿಪುರ ರಾಜ್ಯಗಳ ನಂತರ ಗುಜರಾತ್ ಬರುತ್ತದೆ. ಅಂದಮೇಲೆ ಗುಜರಾತಿನ ಅಭಿವೃದ್ಧಿಯನ್ನು ಶ್ರೇಷ್ಠ ಮಾದರಿಯೆಂದು ಹೇಗೆ ಭಾವಿಸುವುದು ?*




ಸೌಂದರ್ಯವಿದೆ. ಅದು ಆರ್ಥಿಕವಾಗಿಯೂ ಉಪಯುಕ್ತವಾದುದಾಗಿದೆ. ಬಹುಳತೆ ಅನ್ನುವುದು ಶಕ್ತಿಯ ಒಂದು ಸಂಗತಿಯೇ ವಿನಾ ದೌರ್ಬಲ್ಯದ ಸಂಗತಿಯಲ್ಲ.

**ಎಡಪಂಥೀಯ ಅಭಿವೃದ್ಧಿ ಮಾದರಿ**

ಇಂದು ಎಡಪಂಥೀಯ ಅಭಿವೃದ್ಧಿ ಮಾದರಿ ಅನ್ನುವುದು ಮೂಲದಲ್ಲಿ ಇದ್ದಂತೆ ಶುದ್ಧವಾಗಿ ಉಳಿದಿಲ್ಲ. ಅದು ಸಾಕಷ್ಟು ಹೊಸ ಸಂಗತಿಗಳನ್ನು ತನ್ನೊಳಗೆ ಸೇರಿಸಿಕೊಂಡಿದೆ. ಕೇರಳ ಮತ್ತು ತ್ರಿಪುರ ರಾಜ್ಯಗಳು ಎಡಪಂಥೀಯ ಅಭಿವೃದ್ಧಿ ಮಾದರಿಯನ್ನು ಅನುಸರಿಸಿಕೊಂಡು ಜನರ ಬದುಕನ್ನು ಸಮೃದ್ಧಗೊಳಿಸುವುದರಲ್ಲಿ ಯಶಸ್ವಿಯಾಗಿವೆ. ಅದೇ ರೀತಿಯಲ್ಲಿ ಜನರನ್ನು ಪ್ರಧಾನ ಧಾರೆಯಲ್ಲಿಟ್ಟುಕೊಂಡು ಅಭಿವೃದ್ಧಿಯನ್ನು ನಿರ್ವಹಿಸುತ್ತಿರುವ ತಮಿಳುನಾಡು ಜನರ ಬದುಕನ್ನು ಉತ್ತಮಪಡಿಸುವಲ್ಲಿ ಯಶಸ್ವಿಯಾಗಿದೆ. ಇಲ್ಲಿ ವೀರಾವೇಷದ, ತೊಡೆ ತಟ್ಟುವ, ತೋಳೇರಿಸುವ ಕ್ರಮದ ಪರಿಭಾಷೆಗೆ ಅವಕಾಶವಿಲ್ಲ. ಕೇರಳದ್ದು ಮೂಲಭೂತವಾಗಿ ಜನರನ್ನು ಒಳಗೊಳ್ಳುವ ಅಭಿವೃದ್ಧಿ ಮಾದರಿ. ಯಾವುದೋ ಒಂದು ಧರ್ಮದವರಿಗೆ ಮಾತ್ರ ಭಾರತದಲ್ಲಿ ಅವಕಾಶವಿದೆ ಅನ್ನುವ ವಿಚ್ಛಿದ್ರಕಾರಿ ಮಾದರಿಯಿಂದ ಜನರ ಬದುಕನ್ನು ಸಮೃದ್ಧಪಡಿಸುವುದು ಸಾಧ್ಯವಿಲ್ಲ. ಮಹಿಳೆಯರಿಗೆ, ವಂಚಿತರಿಗೆ, ಅಂಚಿನಲ್ಲಿರುವವರಿಗೆ, ಹಿಂದುಳಿದವರಿಗೆ, ಅಲ್ಪಸಂಖ್ಯಾತರಿಗೆ ಅಭಿವೃದ್ಧಿಯು ಅರ್ಥಪೂರ್ಣವಾಗಿರಬೇಕು. ಆದರೆ ಗುಜರಾತ್ ಅಭಿವೃದ್ಧಿ ಮಾದರಿಯಲ್ಲಿ ಕಾರ್ಪೊರೇಟ್ ಪರಿಭಾಷೆಯನ್ನು ಬಳಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ನಾವು ಅಭಿವೃದ್ಧಿ ಮಾದರಿಯ ಬಗ್ಗೆ ಯೋಚಿಸಬೇಕು. ಅದು ರೆಟರಿಕ್ಕಿನ

**ಅನುಬಂಧ–೩**

**ಲಿಂಗ ಅಸಮಾನತೆಯಲ್ಲಿ ರಾಜ್ಯಗಳ ಸ್ಥಾನ : ೨೦೧೧**

| ಹೆಣ್ಣು ಶಿಶುಗಳ ಮರಣ ಪ್ರಮಾಣವು ಗಂಡು ಶಿಶುಗಳ ಮರಣ ಪ್ರಮಾಣಕ್ಕಿಂತ ಅಧಿಕವಿರುವ ರಾಜ್ಯಗಳು (ಅವರೋಹಣ ಕ್ರಮದಲ್ಲಿ) | ಲಿಂಗ ಅನುಪಾತ ಹೆಣ್ಣುಮಕ್ಕಳಿಗೆ ಪ್ರತಿಕೂಲವಾಗಿರುವ ರಾಜ್ಯಗಳು (ಅವರೋಹಣ ಕ್ರಮದಲ್ಲಿ) |
|---|---|
| ಉತ್ತರಪ್ರದೇಶ | ಹರಿಯಾಣ |
| ಬಿಹಾರ | ಪಂಜಾಬ್ |
| ರಾಜಸ್ಥಾನ್ | ಜಮ್ಮು ಮತ್ತು ಕಾಶ್ಮೀರ |
| ಗುಜರಾತ್ | ರಾಜಸ್ಥಾನ್ |
| ಮಧ್ಯಪ್ರದೇಶ | ಉತ್ತರಾಕಾಂಡ |
| ಛತ್ತೀಸ್‌ಗಡ | ಗುಜರಾತ್ |
| ತಮಿಳುನಾಡು | ಮಹಾರಾಷ್ಟ್ರ |
| ಪಶ್ಚಿಮ ಬಂಗಾಳ | ಉತ್ತರಪ್ರದೇಶ |
| ಜಾರ್ಖಂಡ್ | ಹಿಮಾಚಲಪ್ರದೇಶ |
| ಪಂಜಾಬ್ | ಮಧ್ಯಪ್ರದೇಶ |
| ಮಹಾರಾಷ್ಟ್ರ | ಒರಿಸ್ಸಾ |
| ಹರಿಯಾಣ | ಬಿಹಾರ |
| ಉತ್ತರಾಕಾಂಡ | ಆಂಧ್ರಪ್ರದೇಶ |
| ಕರ್ನಾಟಕ | ಕರ್ನಾಟಕ |
| ಒರಿಸ್ಸಾ | ತಮಿಳುನಾಡು |
| ಆಂಧ್ರಪ್ರದೇಶ | ಪಶ್ಚಿಮ ಬಂಗಾಳ |
| ಅಸ್ಸಾಮ್ | ಅಸ್ಸಾಮ್ |
| ಜಮ್ಮು ಮತ್ತು ಕಾಶ್ಮೀರ | ಜಾರ್ಖಂಡ್ |
| ಹಿಮಾಚಲಪ್ರದೇಶ | ಕೇರಳ |
| ಕೇರಳ | ಛತ್ತೀಸ್‌ಗಡ |

***ಟಿಪ್ಪಣಿ :*** *ಪಟ್ಟಿಯ ಮೊದಲ ಭಾಗದಲ್ಲಿ ಹೆಣ್ಣು ಶಿಶುಗಳ ಮರಣ ಪ್ರಮಾಣ ಗಂಡು ಶಿಶುಗಳ ಮರಣ ಪ್ರಮಾಣಕ್ಕಿಂತ ಅಧಿಕವಿರುವ ರಾಜ್ಯಗಳನ್ನು ಅವರೋಹಣ ಕ್ರಮದಲ್ಲಿ ಜೋಡಿಸಿದೆ. ಈ ಪಟ್ಟಿಯಲ್ಲಿ ಗುಜರಾತಿನ ಸ್ಥಾನ ನಾಲ್ಕನೆಯದು. ಆದರೆ ಈ ಬಗೆಯ ತಾರತಮ್ಯವು ಅತ್ಯಂತ ಕಡಿಮೆ ಪ್ರಮಾಣ ಕೇರಳದಲ್ಲಿದೆ. ಅದೇ ರೀತಿಯಲ್ಲಿ ಪಟ್ಟಿಯ ಎರಡನೆಯ ಭಾಗದಲ್ಲಿ ಲಿಂಗ ಅನುಪಾತವು ಕೆಳಮಟ್ಟದಲ್ಲಿ ಇರುವ ರಾಜ್ಯಗಳನ್ನು ಅವರೋಹಣ ಕ್ರಮದಲ್ಲಿ ಜೋಡಿಸಿದೆ. ಇಲ್ಲಿಯೂ ಗುಜರಾತ್ ಆರನೆಯ ಸ್ಥಾನದಲ್ಲಿ ಇದ್ದರೆ ಕೇರಳ, ತಮಿಳುನಾಡು, ಕರ್ನಾಟಕ ಕೆಳತುದಿಯಲ್ಲಿವೆ. ಇವೆರಡೂ ಲಿಂಗ ಅಸಮಾನತೆಯನ್ನು ತೋರಿಸುವ ಸಂಗತಿಗಳಾಗಿವೆ. ಇಲ್ಲಿ ಗುಜರಾತಿನ ಸ್ಥಾನ ಹೇಳಿಕೊಳ್ಳುವ ಸ್ಥಿತಿಯಲ್ಲೇನು ಇಲ್ಲ.*

ಸಂಗತಿಯಲ್ಲ. ಗುಜರಾತಿನ ಮುಖ್ಯಮಂತ್ರಿ ಅವರನ್ನು ನಂಬುವುದಾದರೆ ಅವರ ಅಭಿವೃದ್ಧಿ ಮಾದರಿಯು ಅವರ ರೆಟರಿಕ್ಕಿನಲ್ಲಿದೆಯೆ ವಿನಾ ಖಚಿತ ರೂಪದಲ್ಲಿಲ್ಲ.

**ಭಾಗ–೪**

**ಮೋದಿ ಅಭಿವೃದ್ಧಿ ಮೂಲದಲ್ಲಿರುವ ಸೈದ್ಧಾಂತಿಕ ನೆಲೆ ಯಾವುದು ?**

ಈಗಾಗಲೆ ಹೇಳಿದಂತೆ ಈ ಮಾದರಿಯದ್ದು ತೊಡೆ ತಟ್ಟುವ, ತೋಳೇರಿಸುವ ಮತ್ತು ವೀರಾವೇಷದ ಪರಿಭಾಷೆಯಾಗಿದೆ. ಅದರಲ್ಲಿ ಸತ್ವವೇನು ಇದ್ದಂತೆ ಕಾಣುವುದಿಲ್ಲ. ವಚನಕಾರರ ಭಾಷೆಯಲ್ಲಿ ಹೇಳಬೇಕೆಂದರೆ ಇದು 'ಬರಿಯ ಮಾತಿನ ಬಳಕೆಯ ತೂತಜ್ಞಾನ'ವಾಗಿದೆ. ಇದನ್ನು ಅರ್ಥಪೂರ್ಣವಾಗಿ ನಗೆಯ ಮಾರಿತಂದೆ ಈ ಬಗೆಯ ಮಾತಿನ ಶೂರರನ್ನು ಕಂಡು '... ಮಾತಿನ ಪಸರವ ಮುಂದೆ ಇಕ್ಕಿಕೊಂಡು ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ' ಎಂದು ಹೇಳುತ್ತಾನೆ. ಮಾತು ಮಾತಿಗೆ '೬೦' ವರ್ಷದ ಕಾಂಗ್ರೆಸ್ಸಿನ ಆಡಳಿತದ ಬಗ್ಗೆ ಮಾತನಾಡುತ್ತಾ ಅದು ಅಷ್ಟೂ ವರ್ಷ ಏನೂ ಮಾಡಿಲ್ಲ ಅನ್ನುವ ರೀತಿಯಲ್ಲಿ ಅದನ್ನು ಟೀಕಿಸುತ್ತಿದ್ದಾರೆ. ನಿಜ, ಅನೇಕ ವಿಷಯಗಳಲ್ಲಿ ಕಾಂಗ್ರೆಸ್ಸು ಸೋತಿದೆ ಮತ್ತು ವಿಫಲವಾಗಿದೆ. ಆದರೆ ಈ ಪಕ್ಷದ ಸಾಧನೆಯು ಪ್ರಧಾನಿ ಅಭ್ಯರ್ಥಿಯು ಹೇಳಿದ ರೀತಿಯಲ್ಲಿಲ್ಲ. ಇಂದು ನಮ್ಮ ಸಮಾಜ, ಆರ್ಥಿಕತೆ, ರಾಜಕಾರಣ ವಿಶ್ವದಲ್ಲಿ ಅಭಿಮಾನದ ಸಂಗತಿಯಾಗಿ ಮನ್ನಣೆ ಪಡೆಯುತ್ತಿದ್ದರೆ ಅದು ೬೦ ವರ್ಷಕ್ಕೂ ಅಧಿಕ ಕಾಲಾವಧಿಯ ಕಾಂಗ್ರೆಸ್ಸಿನ ಜನೋಪಯೋಗಿ ನೀತಿ ಮತ್ತು ಜನಪರ ಕಾರ್ಯಕ್ರಮಗಳಿಂದಾಗಿ ಎಂಬುದನ್ನು ನಾವು ಮರೆಯ ಬಾರದು. ನಮ್ಮ ದೇಶವು ೧೯೯೦ರ ನಂತರ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕ್ರಾಂತಿಯನ್ನು ಸಾಧಿಸಿಕೊಂಡಿದ್ದರೆ ಅದಕ್ಕೆ ಒಂದು ಪ್ರಬಲವಾದ ಕಾರಣವೆಂದರೆ ನೆಹರೂ ಅವಧಿಯಲ್ಲಿ ಅವರು ಆದ್ಯತೆಯ ಮೇಲೆ ಕಟ್ಟಿರುವ 'ಸಾರ್ವಜನಿಕ ಉದ್ದಿಮೆಗಳು', ಮೂಲ ಸೌಲಭ್ಯಗಳು, ಶಿಕ್ಷಣ ವ್ಯವಸ್ಥೆ, ಸಂಪರ್ಕ ಜಾಲ, ಸಾರಿಗೆ ವ್ಯವಸ್ಥೆ ಇತ್ಯಾದಿ ಇತ್ಯಾದಿ. ನೆಹರೂ ಅವರನ್ನು ಟೀಕಿಸುವುದು ಸುಲಭ. ಆದರೆ ಅವರು ತಮ್ಮ ಒಂದೂವರೆ ದಶಕಗಳ ಅಧಿಕಾರವಧಿಯಲ್ಲಿ ಭದ್ರವಾಗಿ ಕಟ್ಟಿ ನಿಲ್ಲಿಸಿರುವ ಆರ್ಥಿಕತೆಯ ಅಡಿಪಾಯ ಏನಿದೆ, ಅದನ್ನು ನಿರ್ಲಕ್ಷಿಸಲು ಬರುವುದಿಲ್ಲ. ನಮ್ಮ ದೇಶದಲ್ಲಿ ವೈಚಾರಿಕತೆ, ವಿಚಾರಶೀಲತೆಯ, ವೈಜ್ಞಾನಿಕತೆಯ ಪ್ರಜ್ಞೆಯನ್ನು ಬಿತ್ತಿದವರು ನೆಹರೂ ಎಂಬುದನ್ನು ಆ ವಿಷಯದಲ್ಲಿನ ಅವರ ಕೊಡುಗೆಗಳನ್ನು ನಾವು ಯಾವತ್ತೂ ಮರೆಯುವಂತಿಲ್ಲ. ಆಧುನಿಕ ಭಾರತದ ರೂವಾರಿ ನೆಹರೂ ಆಗಿದ್ದಾರೆ.

**ಪ್ರಧಾನಿ ಅಭ್ಯರ್ಥಿಯಾಗಿರುವವರ ಅಭಿವೃದ್ಧಿ ನೀತಿ–ಸಿದ್ಧಾಂತ ಏನು ?**

ಅಭಿವೃದ್ಧಿಯನ್ನು ಕುರಿತಂತೆ ಪ್ರಧಾನಮಂತ್ರಿ ಉಮೇದುವಾರ ರಾಗಿರುವವರು ಮಾತನಾಡುತ್ತಿಲ್ಲ. ಒಂದು ಕಾಲಕ್ಕೆ ಇವರ ಪಕ್ಷವು ರಾಷ್ಟ್ರೀಯ ಸಮಾಜವಾದವನ್ನು ಪ್ರತಿಪಾದಿಸುತ್ತಿತ್ತು. ಇಂದು ಅದು ಅದರ ಬಗ್ಗೆ ಸೊಲ್ಲೆತ್ತುತ್ತಿಲ್ಲ. ಈಗ ಇವರ ಸೈದ್ಧಾಂತಿಕ ನಿಲುವೇನು ? ಇವರ ಅಭಿವೃದ್ಧಿ ಸಿದ್ಧಾಂತದಲ್ಲಿ ಬಂಡವಾಳ ಮತ್ತು ದುಡಿಯುವ ವರ್ಗಗಳ ನಡುವಿನ ಸಂಬಂಧ ಯಾವ ಬಗೆಯದು ? ಕೃಷಿಗೆ ಸಂಬಂಧಿಸಿದಂತೆ ಇವರ ಆದ್ಯತೆಯು ನೀರಾವರಿಯೇ ಅಥವಾ ಒಣಬೇಸಾಯವೇ ? ಭೂಮಾಲೀಕತ್ವ–ಭೂಮಿತಿಗಳ ಬಗ್ಗೆ ಇವರ ಧೋರಣೆಯೇನು ? ಖಾಸಗಿ ವಲಯ ಮತ್ತು ಸಾರ್ವಜನಿಕ ವಲಯಗಳ ಪಾತ್ರ ಮತ್ತು ಸ್ಥಾನಗಳ ಬಗ್ಗೆ ಇವರ ನೀತಿಯೇನು ? ಲಿಂಗ ಸಮಾನತೆ ಮತ್ತು ಅಭಿವೃದ್ಧಿಗಳ ನಡುವಿನ ಸಂಬಂಧದ ಬಗ್ಗೆ ಇವರ ಅಭಿಪ್ರಾಯವೇನಿದೆ ? ಮಹಿಳೆಯರ ಕಾರ್ಯಕ್ಷೇತ್ರ ಕೇವಲ ಮನೆ–ಕುಟುಂಬ ಎಂಬುದರಲ್ಲಿ ಇವರಿಗೆ ನಂಬಿಕೆ ಇದೆಯೇ ? ಇವೆಲ್ಲ ಅಭಿವೃದ್ಧಿಗೆ ಸಂಬಂಧಿಸಿದ ತಾತ್ವಿಕ ಪ್ರಶ್ನೆಗಳು. ಇವರಿಗೆ ಕಾಂಗ್ರೆಸ್ಸು ಹಟಾವೋ ಮುಖ್ಯವಾಗಿದೆಯೇ ವಿನಾ ಬಡತನದ ನಿವಾರಣೆ, ಹಸಿವಿನ ನಿವಾರಣೆ ಮುಖ್ಯವಾಗುತ್ತಿಲ್ಲ. ಅವರ ಸಮಾವೇಶಗಳಲ್ಲಿ ಇವುಗಳ ಬಗ್ಗೆ ಅವರು ತಮ್ಮ ಧೋರಣೆಯನ್ನು ಮಂಡಿಸುತ್ತಿಲ್ಲ. ಇವುಗಳ ಬಗ್ಗೆ ಪ್ರಧಾನಮಂತ್ರಿಯಾಗಿ ಉಮೇದುವಾರ ರಾಗಿರುವವರು ಏಕೆ ಚರ್ಚೆ ಮಾಡುತ್ತಿಲ್ಲ ? ದೇಶಪ್ರೇಮಕ್ಕೆ ಸಂಬಂಧಿಸಿದ ಉನ್ಮಾದದಿಂದ–ಉದ್ವೇಗದಿಂದ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವುದು ಸಾಧ್ಯವೇ ? ಇದರ ಬಗ್ಗೆ ಅವರು ಮಾತನಾಡುತ್ತಿಲ್ಲ. ಇವರಿಗೆ ಬರಹಗಾರರು ಮತ್ತು ಬರವಣಿಗೆ ಬಗ್ಗೆ ಸಂಪೂರ್ಣವಾಗಿ ಅಪಥ್ಯ ಇರುವಂತೆ ಕಾಣುತ್ತದೆ. ಇವರ ಲಿಂಗ ಸಮಾನತೆ, ಮಹಿಳಾ ಸಶಕ್ತೀಕರಣ, ಸಾಮಾಜಿಕ ಹೊರಗಣತನ ಮುಂತಾದ ಸೂಕ್ಷ್ಮ ಸಮಸ್ಯೆಗಳ ಬಗ್ಗೆ ಇವರ ನಿಲುವೇನು ? ಅವರ ಮಾತು–ಭಾಷಣಗಳಿಂದ ದೇಶ ಆರ್ಥಿಕವಾಗಿ ಸಮೃದ್ಧವಾಗಿ ಬಿಟ್ಟರೆ, ಅದು ಸೂಪರ್ ಪವರ್ ಆಗಿಬಿಟ್ಟರೆ ಜನರ ಹಸಿವು, ಬಡತನ, ಚಾರಿತ್ರಿಕ ಅವಮಾನ, ಮಹಿಳೆಯರ ಶೋಷಣೆ ಮುಂತಾದವು ತಮ್ಮಷ್ಟಕ್ಕೆ ತಾವೆ ಬಗೆಹರಿದುಬಿಡುತ್ತವೆ ಎಂಬುದು ತಿಳಿದುಬರುತ್ತದೆ. ಆದರೆ ಆ ರೀತಿಯಲ್ಲಿ ನಡೆಯುವುದಿಲ್ಲ ಎಂಬುದು ಅಧ್ಯಯನಗಳಿಂದ ದೃಢಪಟ್ಟಿದೆ. ಜನರ ಭಾವನೆಗಳನ್ನು ಬಡಿದೆಬ್ಬಿಸು ವುದರಿಂದ ದೇಶವನ್ನು ಕಟ್ಟುವುದು ಸಾಧ್ಯವಿಲ್ಲ. ಸಮುದಾಯಗಳ ನಡುವೆ ದ್ವೇಷವನ್ನು ಬಿತ್ತುವುದರಿಂದ ಪ್ರಬಲವಾದ ಆರ್ಥಿಕತೆಯನ್ನು ಬೆಳೆಸುವುದು ಆಗುವುದಿಲ್ಲ.

**ಟಿ. ಆರ್. ಚಂದ್ರಶೇಖರ**
೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ–೫೮೩೨೦೧

‘ಶಾಸ್ತ್ರೀಯ’ ಎನ್ನುವ ಪದವನ್ನು ಪ್ರಾಚೀನ ಅಥವಾ ಪುರಾತನ ಎಂಬುದಾಗಿ ಹಾಗೂ ಜೀವಂತ ಅಥವಾ ಚೈತನ್ಯಶೀಲ ಎಂಬುದಾಗಿ ವ್ಯಾಖ್ಯಾನಿಸುವುದರ ಹಿಂದಿನ ಉದ್ದೇಶಗಳು ವರ್ತಮಾನದಲ್ಲಿ ಅಡಕವಾಗಿವೆ ಎನ್ನುವುದಂತೂ ಸ್ಪಷ್ಟ. ಇಲ್ಲಿ ವರ್ತಮಾನದ ಉದ್ದೇಶಗಳು ಎಂದಾಗ ಭಾಷೆ ಬಳಕೆಗೊಳ್ಳುವ ರೀತಿ, ಅದಕ್ಕಿರುವ ಸಾಮರ್ಥ್ಯ, ರಾಜ್ಯದ ಅಭಿವೃದ್ಧಿಗೆ ಅದು ಎಷ್ಟರಮಟ್ಟಿಗೆ ಪೂರಕವಾಗಿದೆ ಹಾಗೂ ಬಂಡವಾಳಕೇಂದ್ರಿತ ಮಾರುಕಟ್ಟೆ ವ್ಯವಸ್ಥೆಯಲ್ಲಿ ಭಾಷೆ ಹೊಂದಿರುವ ಸ್ಥಾನ ಏನು ಎನ್ನುವುದೆಲ್ಲವೂ ಮುಖ್ಯವಾಗುತ್ತವೆ. ಶಾಸ್ತ್ರೀಯತೆ ಎಂದಾಗ ಅದು ಕೇವಲ ಪ್ರಾಚೀನ ಸಾಹಿತ್ಯದ ಅಧ್ಯಯನ ಎಂದಲ್ಲ, ಬದಲಾಗಿ ಭಾಷೆಗೆ ಸಾಮರ್ಥ್ಯವನ್ನು ತುಂಬುವ ಮೂಲಕ ಅದು ಪ್ರತಿನಿಧಿಸುವ ರಾಷ್ಟ್ರ ಅಥವಾ ರಾಜ್ಯದ ಅಭಿವೃದ್ಧಿಯ ಕಡೆಗೆ ಮುಖ ಮಾಡುವುದು ಎನ್ನುವುದೇ ಆಗಿದೆ. ಹಾಗಾಗಿ ಶಾಸ್ತ್ರೀಯತೆಯನ್ನು ನಾಡು ಹಾಗೂ ನುಡಿಯ ಅಥವಾ ನಾಡವರ ಹಾಗೂ ಭಾಷಿಕರ ಬದುಕಿನ ಪ್ರಶ್ನೆಯಾಗಿ ನೋಡುವುದು ಹೆಚ್ಚು ಸೂಕ್ತ.

# ಕನ್ನಡ ಶಾಸ್ತ್ರೀಯ ಭಾಷೆಯ ಚಾರಿತ್ರಿಕ ವಿಶ್ಲೇಷಣೆ



**ಭಾ**ಷೆಗಳು ತಮ್ಮ ಅಸ್ತಿತ್ವ ಹಾಗೂ ಅಭಿವೃದ್ಧಿಯ ಕಾರಣಕ್ಕಾಗಿ ನಡೆಸುವ ಹಕ್ಕೊತ್ತಾಯಗಳಿಗೆ ಶಾಸ್ತ್ರೀಯ ಸ್ಥಾನಮಾನಕ್ಕಾಗಿ ನಡೆಯುವ ಹೋರಾಟಗಳು ಉತ್ತಮ ಉದಾಹರಣೆಗಳಾಗಿವೆ. ಪ್ರಸ್ತುತ ಲೇಖನದಲ್ಲಿ ಶಾಸ್ತ್ರೀಯ ಸ್ಥಾನಮಾನವನ್ನು ಪಡೆದು ಕೊಂಡಿರುವ ಭಾಷೆಗಳಾದ ಸಂಸ್ಕೃತ, ತಮಿಳು, ಕನ್ನಡ ಹಾಗೂ ಶಾಸ್ತ್ರೀಯತೆಯ ಕಡೆಗೆ ಮುಖ ಮಾಡಿರುವ ಭಾಷೆಯಾದ ತುಳು ಇವುಗಳ ಸಂದರ್ಭದಲ್ಲಿನ ಪ್ರಮುಖ ವಿದ್ಯಮಾನ ಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯಲೇಬೇಕು, ಅದು ಕೇವಲ ಪ್ರತಿಷ್ಠೆಯ ವಿಚಾರವಾಗಿರದೆ ಅಭಿವೃದ್ಧಿಯ ಮಂತ್ರವಾಗಿದೆ ಎನ್ನುವ ನಿಲುವಿನತ್ತ ಹಲವಾರು ಭಾಷಾ ಪಂಡಿತರು ಹಾಗೂ ಹೋರಾಟಗಾರರು ಬಂದರು. ಶಾಸ್ತ್ರೀಯತೆಯನ್ನು ಪಡೆಯುವುದೆಂದರೆ ಚರಿತ್ರೆಯನ್ನೊಮ್ಮೆ ಮರು ಓದಿಗೆ ಒಳಪಡಿಸಿ ಗತ ಹಾಗೂ ವರ್ತಮಾನಗಳ ಮೂಲಕ ಭಾಷೆಗಿರುವ ಸಾಮರ್ಥ್ಯವನ್ನು ಸಾಬೀತುಪಡಿಸುವುದಾಗಿದೆ. ಶಾಸ್ತ್ರೀಯ ಭಾಷೆಗಿರಬೇಕಾದ ಲಕ್ಷಣಗಳನ್ನು ಚರಿತ್ರೆಯ ಮೂಲಕವೇ ಗುರುತಿಸಲಾಗಿದೆ. ಅದೇ ರೀತಿ ಜಗತ್ತಿನಲ್ಲಿ ಶಾಸ್ತ್ರೀಯ ಭಾಷೆಗಳಾಗಿ ಗುರುತಿಸಿಕೊಂಡಿರುವ ಗ್ರೀಕ್, ಲ್ಯಾಟಿನ್, ಅರೇಬಿಕ್, ಪರ್ಶಿಯನ್, ಚೈನೀಸ್ ಹಾಗೂ ಸಂಸ್ಕೃತ ಭಾಷೆಗಳನ್ನು ಚರಿತ್ರೆಯಲ್ಲಿಯೇ ಹುಡುಕಲಾಗಿದೆ. ಈ ಭಾಷೆಗಳ ಸಂದರ್ಭದಲ್ಲಿ ಬಳಕೆಯಾದ ‘ಕ್ಲಾಸಿಕಲ್’ ಎನ್ನುವ ಪದವೂ ಬಹುಚರ್ಚಿತವಾಗಿ ವಿದ್ವಾಂಸರಲ್ಲಿ ಈ ವಿಚಾರ ಕುರಿತು ಅಭಿಪ್ರಾಯಭೇದ ಕಾಣಿಸಿಕೊಂಡಿತು. ‘ಕ್ಲಾಸಿಕಲ್’ ಎನ್ನುವ ಪದವನ್ನು ಪುರಾತನ ಎಂಬರ್ಥದಲ್ಲಿ ಬಳಕೆ ಮಾಡಲಾಯಿತು. ಆದರೆ ತಮಿಳು, ತೆಲುಗು ಹಾಗೂ ಕನ್ನಡ ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನ ಬಂದಾಗ ಪುರಾತನ ಎನ್ನುವ ಅರ್ಥ ಮರುವ್ಯಾಖ್ಯಾನಕ್ಕೆ ಒಳಗಾಗಿ ಜೀವಂತ, ವರ್ತಮಾನದ ಸ್ಪಂದನೆ ಇರುವ, ಸೃಜನಶೀಲ ಮುಂತಾದ ಅರ್ಥಗಳು ಬಳಕೆಗೆ ಬಂದವು. ಇವು ಆಡುಭಾಷೆಯಾಗಿ, ಆಡಳಿತದ ಹಾಗೂ ಅಧಿಕಾರದ ಭಾಷೆಯಾಗಿ ಇರುವಂಥವು ಹಾಗೂ ಜನರಿಂದ ದೂರವಾದ ಭಾಷೆಗಳಲ್ಲ. ಆದರೆ ಇದೇ ಮಾತನ್ನು ಗ್ರೀಕ್, ಲ್ಯಾಟಿನ್, ಸಂಸ್ಕೃತ ಮುಂತಾದ ಭಾಷೆಗಳ ಸಂದರ್ಭದಲ್ಲಿ ಹೇಳಲು ಸಾಧ್ಯವಾಗುವುದಿಲ್ಲ. ಇದನ್ನೇ ಭಾಷಾ ರಾಜಕಾರಣ ಎನ್ನುವುದು. ಸಮಯ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಭಾಷಿಕ ಧೋರಣೆಗಳು ಬದಲಾಗುತ್ತಿರುತ್ತವೆ. ಶಾಸ್ತ್ರೀಯತೆಯ ಹಳೆಯ ವ್ಯಾಖ್ಯಾನ ಇಂದು ಬದಲಾಗಿದೆ. ಚಾರಿತ್ರಿಕವಾಗಿ ವಿಸ್ತಾರವಾದ ಕಾಲಾವಧಿಯನ್ನು ಹೊಂದಿರುವ, ಪ್ರಾಚೀನ ಸಂದರ್ಭದಿಂದಲೇ ಸಾಹಿತ್ಯಿಕವಾಗಿ ಬೆಳೆದುಬಂದಿರುವ, ಚರಿತ್ರೆಯ ಆಯಾ ಕಾಲಘಟ್ಟಗಳ ವಿದ್ಯಮಾನಗಳನ್ನು ಸಮರ್ಥವಾಗಿ ಬಿಂಬಿಸುತ್ತಾ ಬಂದಿರುವ, ಆದರೆ ಪ್ರಸ್ತುತ ಆಡುಭಾಷೆಯಾಗಿರದ ಭಾಷೆಗಳನ್ನು ಶಾಸ್ತ್ರೀಯ ಅಥವಾ ಕ್ಲಾಸಿಕಲ್ ಎಂಬುದಾಗಿ ಕರೆಯಲಾಗಿತ್ತು. ಹೀಗೆ ಶಾಸ್ತ್ರೀಯತೆಯ ವ್ಯಾಖ್ಯಾನಗಳು ಬದಲಾಗುತ್ತಿರುವುದನ್ನು ಕಾಣಬಹುದಾಗಿದೆ.

‘ಶಾಸ್ತ್ರೀಯ’ ಎನ್ನುವ ಪದವನ್ನು ಪ್ರಾಚೀನ ಅಥವಾ ಪುರಾತನ ಎಂಬುದಾಗಿ ಹಾಗೂ ಜೀವಂತ ಅಥವಾ ಚೈತನ್ಯಶೀಲ ಎಂಬುದಾಗಿ ವ್ಯಾಖ್ಯಾನಿಸುವುದರ ಹಿಂದಿನ ಉದ್ದೇಶಗಳು ವರ್ತಮಾನದಲ್ಲಿ ಅಡಕವಾಗಿವೆ ಎನ್ನುವುದಂತೂ ಸ್ಪಷ್ಟ. ಇಲ್ಲಿ ವರ್ತಮಾನದ ಉದ್ದೇಶಗಳು ಎಂದಾಗ ಭಾಷೆ ಬಳಕೆಗೊಳ್ಳುವ ರೀತಿ, ಅದಕ್ಕಿರುವ ಸಾಮರ್ಥ್ಯ, ರಾಜ್ಯದ ಅಭಿವೃದ್ಧಿಗೆ ಅದು ಎಷ್ಟರಮಟ್ಟಿಗೆ ಪೂರಕವಾಗಿದೆ ಹಾಗೂ ಬಂಡವಾಳ ಕೇಂದ್ರಿತ ಮಾರುಕಟ್ಟೆ ವ್ಯವಸ್ಥೆಯಲ್ಲಿ ಭಾಷೆ ಹೊಂದಿರುವ ಸ್ಥಾನ ಏನು ಎನ್ನುವುದೆಲ್ಲವೂ ಮುಖ್ಯವಾಗುತ್ತವೆ. ಶಾಸ್ತ್ರೀಯತೆ ಎಂದಾಗ ಅದು

**ಡಾ॥ ಕೆ. ಮೋಹನ್‌ಕೃಷ್ಣ ರೈ**

ಕೇವಲ ಪ್ರಾಚೀನ ಸಾಹಿತ್ಯದ ಅಧ್ಯಯನ ಎಂದಲ್ಲ, ಬದಲಾಗಿ ಭಾಷೆಗೆ ಸಾಮರ್ಥ್ಯವನ್ನು ತುಂಬುವ ಮೂಲಕ ಅದು ಪ್ರತಿನಿಧಿಸುವ ರಾಷ್ಟ್ರ ಅಥವಾ ರಾಜ್ಯದ ಅಭಿವೃದ್ಧಿಯ ಕಡೆಗೆ ಮುಖ ಮಾಡುವುದು ಎನ್ನುವುದೇ ಆಗಿದೆ. ಹಾಗಾಗಿ ಶಾಸ್ತ್ರೀಯತೆಯನ್ನು ನಾಡು ಹಾಗೂ ನುಡಿಯ ಅಥವಾ ನಾಡವರ ಹಾಗೂ ಭಾಷಿಕರ ಬದುಕಿನ ಪ್ರಶ್ನೆಯಾಗಿ ನೋಡುವುದು ಹೆಚ್ಚು ಸೂಕ್ತ. ಸಂಸ್ಕೃತ ಹಾಗೂ ಕನ್ನಡ ಭಾಷೆಗಳ ಶಾಸ್ತ್ರೀಯ ಸ್ಥಾನಮಾನವನ್ನು ಏಕರೂಪದ್ದಾಗಿ ನೋಡಲು ಸಾಧ್ಯವಾಗುವುದಿಲ್ಲ. ಈ ವಿಂಗಡಣೆಯನ್ನು ಗಮನದಲ್ಲಿಟ್ಟುಕೊಂಡೇ ಇಂದು ಜನಮುಖಿಯಾಗಿರುವ ಭಾಷೆಗಳ ಶಾಸ್ತ್ರೀಯತೆಯ ವಿಚಾರವನ್ನು ಚರ್ಚಿಸ ಬೇಕಾಗುತ್ತದೆ. ಪುರಾತನ ಎಂಬುದಾಗಿ ಗುರುತಿಸಿ ಕೊಳ್ಳುವ ಭಾಷೆಗಳು – ಉದಾಹರಣೆಗೆ ಸಂಸ್ಕೃತ – ಜನಮುಖಿ ನೆಲೆಯಲ್ಲಿ ಗುರುತಿಸಿಕೊಳ್ಳಲಿಲ್ಲ. ಆದರೆ ಅವುಗಳಿಗೆ ಜೀವಂತಿಕೆಯನ್ನು ತುಂಬುವ ಹಾಗೂ ದೇವ ಭಾಷೆಯನ್ನು ಜನಭಾಷೆಯನ್ನಾಗಿಸುವ ಪ್ರಯತ್ನ ವರ್ತಮಾನದಲ್ಲಿ ನಡೆಯುತ್ತಿರುತ್ತದೆ. ಆದರೆ ಅದೇ ಸಂದರ್ಭದಲ್ಲಿ ಜನಮುಖಿಯಾಗಿರುವ ಹಾಗೂ ಜೀವಂತಿಕೆಯಿಂದ ಕೂಡಿರುವ ಭಾಷೆಗಳು ಭಾಷಾಭಿವೃದ್ಧಿಯ ಹಾಗೂ ಉದ್ಯೋಗದ ಭಾಷೆಯಾಗಿ ರೂಪುಗೊಳ್ಳುವ ಉದ್ದೇಶದಿಂದ ಶಾಸ್ತ್ರೀಯ ಭಾಷೆಗಳಾಗುವ ಪ್ರಯತ್ನದಲ್ಲಿ ತೊಡಗಿವೆ. ಶಾಸ್ತ್ರೀಯತೆಯ ಕುರಿತ ಚರ್ಚೆಗಳಲ್ಲಿ ಈ ಅಂಶ ಮುಖ್ಯವಾದಾಗ ಮಾತ್ರ ಪುರಾತನ – ಜೀವಂತ, ಗತ –ವರ್ತಮಾನ ಮುಂತಾದ ಪದಗಳ ಹಿಂದಿರುವ ಅಜೆಂಡಾಗಳು ಗೋಚರಿಸಲು ಸಾಧ್ಯ.

ಪುರಾತನವನ್ನು ಸೃಜನಶೀಲವನ್ನಾಗಿಸುವ, ಗತವನ್ನು ವೈಭವೀಕರಿಸುವ ಹಾಗೂ ವರ್ತಮಾನ ವನ್ನು ಸಮೃದ್ಧಗೊಳಿಸುವ ಉದ್ದೇಶಗಳೆಲ್ಲವೂ ಶಾಸ್ತ್ರೀಯತೆಯಲ್ಲಿ ಅಡಕವಾಗಿವೆ. ವಿದ್ವಾಂಸರು ತಮ್ಮ ಸೈದ್ಧಾಂತಿಕ ದೃಷ್ಟಿಕೋನಕ್ಕೆ ಅನುಗುಣವಾಗಿ ಶಾಸ್ತ್ರೀಯತೆಯನ್ನು ವ್ಯಾಖ್ಯಾನಿಸುತ್ತಿರುತ್ತಾರೆ. ಇಲ್ಲಿ ವಿದ್ವಾಂಸರು ಮಾತ್ರವಲ್ಲದೆ ಸರ್ಕಾರ, ಸಂಘಟನೆಗಳು ಹಾಗೂ ಜನತೆ ಶಾಸ್ತ್ರೀಯತೆಯನ್ನು ತಮ್ಮದೇ ಆದ ನೆಲೆಗಳಲ್ಲಿ ಅರ್ಥೈಸಿಕೊಂಡು ಶಾಸ್ತ್ರೀಯ ಸ್ಥಾನಮಾನದ ಚರ್ಚೆಯಲ್ಲಿ ಭಾಗಿಯಾಗುತ್ತವೆ. ಭಾರತದಲ್ಲಿ ಪುರಾತನ ಭಾಷೆ ಎಂಬುದಾಗಿ ಗುರುತಿಸಿಕೊಂಡಿರುವ ಸಂಸ್ಕೃತಕ್ಕೆ ಶಾಸ್ತ್ರೀಯ ಮಾನ್ಯತೆ ಸಿಕ್ಕಿರುವುದು (೨೦೦೫) ತಮಿಳು ಶಾಸ್ತ್ರೀಯ ಭಾಷೆಯಾದ (೨೦೦೪) ಮೇಲೆ. ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಂಸ್ಕೃತಕ್ಕಿಂತ ಮೊದಲು ಹೇಗೆ ಲಭ್ಯ ವಾಯಿತು ಎನ್ನುವುದಕ್ಕೆ ಉತ್ತರಗಳು ನೇರ ಹಾಗೂ ಸ್ಪಷ್ಟವಾಗಿವೆ. ವೈದಿಕ ಭಾಷೆಯಾಗಿದ್ದ ಸಂಸ್ಕೃತ ಜನಭಾಷೆಯಾಗಲು ಹೊರಟಾಗ ಅದಕ್ಕೆ ಜನಬೆಂಬಲ ಪ್ರಾಪ್ತವಾಗಲಿಲ್ಲ. ಏಕೆಂದರೆ ಅದು ಹಿಂದಿನಿಂದಲೂ ಜನರೊಂದಿಗೆ ಬೆರೆಯಲೇ ಇಲ್ಲ. ಇದರಿಂದಾಗಿ ಒಂದು ಕಾಲಕ್ಕೆ ದೇವ ಭಾಷೆಯಾಗಿ ಮೆರೆದು ಭಾಷಿಕ ಯಜಮಾನಿಕೆಯನ್ನು ಸ್ಥಾಪಿಸಿಕೊಂಡಿದ್ದ ಸಂಸ್ಕೃತ ಮೃತಭಾಷೆಯಾಗಿ ಪರಿವರ್ತನೆಗೊಳ್ಳಬೇಕಾಯಿತು.




ಇಲ್ಲಿ ಮೃತಭಾಷೆಯೆಂದರೆ ಜನರ ಮಧ್ಯೆ ಬಳಕೆ ಯಲ್ಲಿಲ್ಲದ ಭಾಷೆ ಎಂದರ್ಥ. ಈ ಪ್ರಕ್ರಿಯೆಯಲ್ಲಿ ಸಂಸ್ಕೃತ ಭಾಷೆಯನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವುದು ತಪ್ಪು. ಏಕೆಂದರೆ ಸಂಸ್ಕೃತ ಭಾಷೆಯನ್ನು ಒಂದು ಸಾಧನವನ್ನಾಗಿ ಪುರೋಹಿತಶಾಹಿ ವ್ಯವಸ್ಥೆ ಬಳಸಿಕೊಂಡಿತು. ಸಂಸ್ಕೃತ ಭಾಷೆಯ ಮೂಲಕ ಅಲೌಕಿಕ ಚಿಂತನೆಗಳನ್ನು ಹುಟ್ಟುಹಾಕಲಾಯಿತು. ಅದೊಂದು ಬೃಹತ್ ಕಥನವಾಗಿ ರೂಪುಗೊಂಡು ಸ್ಥಳೀಯ ಭಾಷೆ ಹಾಗೂ ಆಚರಣೆಗಳ ಮೇಲೆ ಪ್ರಭಾವ ಬೀರಲಾರಂಭಿಸಿತು. ಈ ಪ್ರಕ್ರಿಯೆಯನ್ನು ಸಂಸ್ಕೃತಾನುಸರಣ ಎಂಬುದಾಗಿಯೂ ಕರೆಯ ಲಾಗಿದೆ. ಈ ಪ್ರಕ್ರಿಯೆಯಿಂದಾಗಿ ಸಂಸ್ಕೃತ ಒಂದು ವರ್ಗಕ್ಕಷ್ಟೇ ಸೀಮಿತಗೊಂಡು ಶ್ರೇಷ್ಠತೆಯ ಹಾಗೂ ಮಡಿವಂತಿಕೆಯ ನೆಲೆಯಿಂದ ಪ್ರತಿಪಾದನೆಗೊಂಡಿತು. ಇಲ್ಲಿರುವ ತರ್ಕವೆಂದರೆ ಭಾಷೆಗೆ ವಿರೋಧಿಸುವ ಅಥವಾ ಹಿಂಸಿಸುವ ಗುಣ ಇರುವುದಿಲ್ಲ ಎನ್ನುವುದು. ಭಾಷೆಯನ್ನು ಬಳಸುವ ಜನವರ್ಗಗಳು ತಮ್ಮ ಹಿತಾಸಕ್ತಿಯ ಈಡೇರಿಕೆಗಾಗಿ ಭಾಷೆಯ ಮೂಲಕ ರಾಜಕಾರಣ ನಡೆಸುತ್ತಿರುತ್ತವೆ.

ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿರುವುದು ಹಾಗೂ ತಮಿಳುನಾಡು ತನಗೆ ಬೇಕಾದದ್ದನ್ನು ಕೇಂದ್ರ ಸರ್ಕಾರದಿಂದ ಪಡೆದು ಕೊಳ್ಳಲು ಸಾಧ್ಯವಾಗಿರುವುದು ಅದರ ಪ್ರಾದೇಶಿಕ ಗಟ್ಟಿತನದಿಂದಾಗಿ. ಪೆರಿಯಾರ್ ಅವರ ತಮಿಳು ಪುನರುತ್ಥಾನ ಹಾಗೂ ಹಿಂದಿ ವಿರೋಧಿ ಚಳವಳಿಗಳು ಈ ನಿಟ್ಟಿನಲ್ಲಿ ಮಹತ್ವವನ್ನು ಪಡೆಯುತ್ತವೆ. ಅದೇ ರೀತಿ ಪ್ರಾದೇಶಿಕ ಪಕ್ಷಗಳು ರಾಜ್ಯದ ಅಭಿವೃದ್ಧಿಯಲ್ಲಿ ಯಾವ ಪಾತ್ರವನ್ನು ವಹಿಸಬಹುದೆನ್ನುವುದನ್ನು ತಮಿಳುನಾಡಿನ ಪ್ರಾದೇಶಿಕ ಪಕ್ಷಗಳು ತೋರಿಸಿಕೊಟ್ಟವು. ತಮಿಳು ಭಾಷೆಯನ್ನು ಶಾಸ್ತ್ರೀಯ ಭಾಷೆಯನ್ನಾಗಿ ಘೋಷಿಸಬೇಕೆನ್ನುವ ಒತ್ತಾಯ ೧೮೮೭ರಲ್ಲಿಯೇ ಕಾಣಿಸಿಕೊಂಡಿತ್ತು. ಪರುತ್ತಿಮಲ್ ಕಲ್ಯೆಂಞರ್ ಎಂಬ ವಿದ್ವಾಂಸರು ಈ ಬೇಡಿಕೆಯನ್ನು ಮುಂದಿಟ್ಟಿದ್ದರು. ಇದಕ್ಕೆ ಪೂರಕವೆಂಬಂತೆ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಸಂಸ್ಕೃತ ಹಾಗೂ ತಮಿಳು ಪ್ರಾಧ್ಯಾಪಕರಾದ ಜಾರ್ಜ್ ಎಲ್. ಹಾರ್ಟ್ ಎನ್ನುವವರು ತಮಿಳು ಭಾಷೆ ಶಾಸ್ತ್ರೀಯ ಸ್ಥಾನಮಾನಕ್ಕೆ ಅರ್ಹ ಎಂಬ ವಾದವನ್ನು ಮಂಡಿಸಿದರು. ಅವರ ಪ್ರಕಾರ 'ತಮಿಳು ಭಾಷೆ ಶಾಸ್ತ್ರೀಯ ಭಾಷೆಯಾಗುವ ಎಲ್ಲ ಅರ್ಹತೆಗಳನ್ನೂ ಪಡೆದುಕೊಂಡಿದೆ, ಅದೊಂದು ಪುರಾತನ ಭಾಷೆ, ಬೇರೆ ಭಾಷೆಯಿಂದ ಪ್ರಭಾವಿತ ಗೊಂಡಿಲ್ಲ, ಜಾಗತಿಕ ದೃಷ್ಟಿಕೋನವಿದೆ ಹಾಗೂ ಭಾರತೀಯ ಸಂಸ್ಕೃತಿಗೆ ತಮಿಳು ಮೂಲ ತಳಹದಿ.' ತಮಿಳು ಭಾಷೆ ಹಾಗೂ ಸಾಹಿತ್ಯದ ಪ್ರಾಚೀನತೆಗೆ ಸಂಗಂ ಸಾಹಿತ್ಯವನ್ನು ಬಳಸಿಕೊಳ್ಳಲಾಯಿತು. ಅಲ್ಲಿ ಸಂಗಂ ಸಾಹಿತ್ಯ ಪ್ರಾಚೀನ ಅಥವಾ ಗತವಾಗಿರದೆ ವರ್ತಮಾನದ ಸಾಹಿತ್ಯವಾಗಿ ಪರಿವರ್ತನೆಗೊಂಡಿತು. ಕೊನೆಗೂ ತಮಿಳು ಶಾಸ್ತ್ರೀಯ ಮಾನ್ಯತೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿ, ಶಾಸ್ತ್ರೀಯತೆಯ ಲಾಭಗಳನ್ನು ಪಡೆದುಕೊಂಡಿತು. ವೈಭವಯುತವಾದ ಗತವನ್ನು ಕಟ್ಟುವುದರ ಮೂಲಕ ವರ್ತಮಾನದಲ್ಲಿ ಲಾಭಗಳನ್ನು ಪಡೆಯುವ ಪ್ರಯತ್ನಗಳು ತಮಿಳುನಾಡಿನಲ್ಲಿ ನಡೆದವು. ತಮಿಳುನಾಡಿನಲ್ಲಿ ನಾಡು ಹಾಗೂ ನುಡಿಯ ವಿಚಾರ ಕುರಿತು ಅಲ್ಲಿನ ಸರ್ಕಾರ, ಜನತೆ ಹಾಗೂ ಸಂಘಟನೆಗಳಲ್ಲಿ ಒಮ್ಮತದ ಅಭಿಪ್ರಾಯ ಇರುವುದನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲೂ ಶಾಸ್ತ್ರೀಯ ಮಾನ್ಯತೆಗಾಗಿ ಹೋರಾಟಗಳು ನಡೆದವು. ಶಾಸ್ತ್ರೀಯ ಸ್ಥಾನಮಾನ ಸಿಗಬೇಕಾದರೆ ಭಾಷೆಯೊಂದು ಹೊಂದಿರಬೇಕಾದ ಅರ್ಹತೆಗಳನ್ನು ಸಾಬೀತುಪಡಿಸುವ ಪ್ರಯತ್ನವನ್ನು ಕರ್ನಾಟಕವೂ ಮಾಡಿತು. ಭಾರತ ಸರ್ಕಾರವು ಯಾವುದೇ ಭಾಷೆ ಶಾಸ್ತ್ರೀಯ ಮಾನ್ಯತೆಯನ್ನು ಪಡೆಯಬೇಕಾದರೆ ಪ್ರಮುಖವಾಗಿ ನಾಲ್ಕು ಅರ್ಹತೆ ಗಳನ್ನು ಅಥವಾ ಲಕ್ಷಣಗಳನ್ನು ಹೊಂದಿರಬೇಕೆಂದು ಘೋಷಿಸಿತು. ಅವುಗಳೆಂದರೆ ಭಾಷೆಯ ಪಠ್ಯಗಳು ಒಂದು ಸಾವಿರ ವರ್ಷ ಪುರಾತನವಾಗಿರಬೇಕು (ಈಗ ಒಂದೂವರೆ ಸಾವಿರ ವರ್ಷ ಎಂಬುದಾಗಿ ನಿಗದಿಪಡಿಸ ಲಾಗಿದೆ); ಪುರಾತನ ಸಾಹಿತ್ಯವು ಅತ್ಯಂತ ಮೌಲಿಕ ಪರಂಪರೆಯೆಂದು ಪರಿಗಣಿತವಾಗಿರಬೇಕು ಹಾಗೂ ತಲೆಮಾರುಗಳಿಂದ ಜನರು ಸಾಹಿತ್ಯ / ಪಠ್ಯಗಳನ್ನು ತಮ್ಮ ಬದುಕಿನ ಭಾಗವೆಂದು ಪರಿಗಣಿಸಿರಬೇಕು, ಸಾಹಿತ್ಯಕ ಪರಂಪರೆ ಸ್ವೋಪಜ್ಞವಾಗಿದ್ದು, ಯಾವುದೇ ಭಾಷಾ ಸಮುದಾಯದಿಂದ ಸ್ವೀಕಾರವಾಗಿರಬಾರದು, ಪ್ರಸ್ತುತ ಭಾಷೆ ಮತ್ತು ಸಾಹಿತ್ಯಕ್ಕಿಂತ ಶಾಸ್ತ್ರೀಯ ಭಾಷೆ ಮತ್ತು ಸಾಹಿತ್ಯ ಭಿನ್ನತೆಯನ್ನು ಹೊಂದಿರಬೇಕು. ಎಲ್ಲ ಭಾಷೆಗಳಿಗೂ ಈ ಲಕ್ಷಣಗಳನ್ನು ಹೊಂದಿರಲು ಸಾಧ್ಯವಿಲ್ಲ ಅಥವಾ ಸಾಧ್ಯವಾಗಬಾರದು ಎನ್ನುವ ಧೋರಣೆಯೂ ಇದ್ದಿರಬಹುದು. ಈ ಎಲ್ಲ ಅರ್ಹತೆ ಗಳನ್ನು ಸಾಬೀತುಪಡಿಸುವುದರ ಮೂಲಕ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನವನ್ನು ೨೦೦೮ರಲ್ಲಿ (ತೆಲುಗು ಭಾಷೆಯ ಜೊತೆ) ತಂದುಕೊಡುವಲ್ಲಿ ಕರ್ನಾಟಕ ಸರ್ಕಾರ, ಸಂಘ–ಸಂಸ್ಥೆಗಳು ವಿದ್ವಾಂಸರು ಹಾಗೂ ಜನತೆ ಯಶಸ್ವಿಯಾದದ್ದುಂಟು. ಆದರೂ ಯಾವುದೇ ಭಾಷಾ ಸಮುದಾಯದ ಪ್ರಭಾವಕ್ಕೆ ಒಳಗಾಗಿರಬಾರದು

ಎನ್ನುವ ಚಹರೆಯನ್ನು ಸಾಬೀತುಪಡಿಸುವುದು ಯಾವ ಭಾಷೆಗಾದರೂ ಕಷ್ಟಕರವೇ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿದೆ ಎನ್ನುವುದು ನಿಜ. ಆದರೆ ಶಾಸ್ತ್ರೀಯ ಮಾನ್ಯತೆಗಾಗಿ ನಡೆದ ಹೋರಾಟದ ಪ್ರಕ್ರಿಯೆಯನ್ನು ಅವಲೋಕಿಸಿ ನೋಡಿದರೆ ಅದೊಂದು ಸಂಘಟಿತ ರೂಪದ ಪ್ರಯತ್ನವಾಗಿ ಕಂಡುಬರುವುದಿಲ್ಲ. ಕರ್ನಾಟಕದಲ್ಲಿ ತಮಿಳುನಾಡಿನಂತೆ ಬಲಿಷ್ಠವಾದ ಪ್ರಾದೇಶಿಕ ಪಕ್ಷಗಳಿಲ್ಲ. ತಮಿಳುನಾಡಿನಲ್ಲಿ ಪ್ರಾದೇಶಿಕ ಪಕ್ಷಗಳು ದ್ರಾವಿಡ ಹಾಗೂ ಹಿಂದುಳಿದ ವರ್ಗಗಳ ಹೋರಾಟದ ಮೂಸೆಯಿಂದ ಬಂದಿರುವ ಕಾರಣ ಹೋರಾಟದ ಮನೋಭಾವವನ್ನು ಮುಂದುವರಿಸಿಕೊಂಡು ಹೋದವು. ಪ್ರಾದೇಶಿಕ ಪಕ್ಷಗಳಿಗೆ ಅವು ಪ್ರತಿನಿಧಿಸುವ ಪ್ರದೇಶದ ಅಭಿವೃದ್ಧಿಯೇ ಪ್ರಥಮ ಆದ್ಯತೆಯಾಗಿರುತ್ತದೆ. ರಾಷ್ಟ್ರೀಯ ಪಕ್ಷಗಳು ಅವು ಅಧಿಕಾರದಲ್ಲಿರುವ ಎಲ್ಲ ರಾಜ್ಯಗಳಿಗೂ ಅನ್ವಯಿಸುವ ಪ್ರಣಾಳಿಕೆ ಹೊಂದಿರುತ್ತವೆ. ಹಾಗೆಯೇ ಆಯಾ ಪಕ್ಷಗಳ ಹೈಕಮಾಂಡಿನ ತೀರ್ಮಾನ ಅಂತಿಮವಾಗಿರುತ್ತದೆ. ಕರ್ನಾಟಕದ ರಾಜಕೀಯ ಪರಿಸ್ಥಿತಿ ಈ ಬಗೆಯದು. ಕರ್ನಾಟಕದಲ್ಲಿ ಎಷ್ಟೇ ಪ್ರಾದೇಶಿಕ ಪಕ್ಷಗಳು ಹುಟ್ಟಿಕೊಂಡರೂ ಅವುಗಳಿಗೆ ಗಟ್ಟಿಯಾಗಿ ನೆಲೆಯೂರಲು ಸಾಧ್ಯವಾಗಲಿಲ್ಲ. ಸ್ವಾರ್ಥ ರಾಜಕಾರಣದ ನೆಲೆಯಲ್ಲಿ ಹುಟ್ಟಿಕೊಳ್ಳುವ ಪ್ರಾದೇಶಿಕ ಪಕ್ಷಗಳಿಂದ ಹೆಚ್ಚಿನದನ್ನೇನನ್ನೂ ನಿರೀಕ್ಷಿಸಲು ಸಾಧ್ಯವಿಲ್ಲ. ಇನ್ನು ವಿದ್ವಾಂಸರ ವಲಯಗಳಲ್ಲಿ ಭಿನ್ನ ಭಿನ್ನ ನಿಲುವುಗಳು ಮನೆ ಮಾಡಿರುವುದರಿಂದಾಗಿ ಶಾಸ್ತ್ರೀಯತೆಯ ಕುರಿತು ಒಮ್ಮತದ ತೀರ್ಮಾನ ಮೂಡಿಬರಲಿಲ್ಲ. ಆದರೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಾಗ ಎಲ್ಲ ವಿದ್ವಾಂಸರೂ (ಬಹುತೇಕ ಸಾಹಿತಿಗಳು) ಖುಷಿಪಟ್ಟಿರುವುದಂತೂ ನಿಜ. ಇನ್ನು ವಿಜ್ಞಾನ, ತಂತ್ರಜ್ಞಾನ, ಸಮಾಜ ವಿಜ್ಞಾನ ಹಾಗೂ ಇನ್ನಿತರ ಶಿಸ್ತುಗಳ ವಿದ್ವಾಂಸರು ಹಾಗೂ ಅಧಿಕಾರಿಗಳು ಸಹಜವಾಗಿಯೇ ಕನ್ನಡದ ಮೇಲಿನ ಅಭಿಮಾನದಿಂದ ಸಂತೋಷಪಟ್ಟರು. ದುಡಿಯುವ ವರ್ಗಗಳಿಗೆ, ಅದರಲ್ಲೂ ಕೃಷಿ ಹಾಗೂ ಕೈಗಾರಿಕಾ ಕಾರ್ಮಿಕರಿಗೆ, ತಮ್ಮ ಹೊಟ್ಟೆಪಾಡಿನ ಪ್ರಶ್ನೆಯೇ ಮುಖ್ಯವಾಗಿರುವುದರಿಂದಾಗಿ ಶಾಸ್ತ್ರೀಯತೆ ಅವರ ಆದ್ಯತೆಯಾಗಿರಲಿಲ್ಲ. ಆದರೂ ಅರೆಹೊಟ್ಟೆಯಲ್ಲಿದ್ದರೂ ಕನ್ನಡದ ಮೇಲಿನ ಅಭಿಮಾನದಿಂದ ಸಂಭ್ರಮಿಸಿದರು.

ಕನ್ನಡ ಭಾಷೆಗೆ ಶಾಸ್ತ್ರೀಯ ಮಾನ್ಯತೆ ಸಿಕ್ಕಾಗ ಅದು ಕೇವಲ ಕನ್ನಡ ಭಾಷೆಗಷ್ಟೆ ಲಭಿಸಿದ ಮಾನ್ಯತೆ ಅಥವಾ ಮನ್ನಣೆ ಎಂಬುದಾಗಿ ಕರ್ನಾಟಕದ ಜನತೆ ಭಾವಿಸದೆ ಕನ್ನಡ ನಾಡು – ನುಡಿಗೆ ಲಭಿಸಿದ ಗೌರವ ಎಂಬುದಾಗಿ ಭಾವಿಸಿತು. ಏಕೆಂದರೆ ಕರ್ನಾಟಕ ಬಹುಧಾರ್ಮಿಕ, ಬಹುಸಾಂಸ್ಕೃತಿಕ ಹಾಗೂ ಬಹುಭಾಷಿಕ ಪರಿಸರವನ್ನು ಹೊಂದಿರುವ ರಾಜ್ಯ. ಕನ್ನಡ ಶಾಸ್ತ್ರೀಯತೆಯ ಲಾಭವನ್ನು ಕನ್ನಡ ಭಾಷೆ ಮಾತ್ರ ಪಡೆಯುವಂತಾದರೆ ಕರ್ನಾಟಕದೊಳಗೆ ಇರುವ ಇತರ ಭಾಷೆಗಳಾದ ತುಳು, ಕೊಡವ, ಕೊಂಕಣಿ, ಬ್ಯಾರಿ, ಉರ್ದು ಮುಂತಾದವು ಶಾಸ್ತ್ರೀಯತೆಯಿಂದ ತಮಗೇನು ಲಾಭ ಎಂಬುದಾಗಿ ಚಿಂತಿಸುವ ಸಂದರ್ಭ ನಿರ್ಮಾಣವಾಗುವುದು ಸಹಜ. ಈ ಸಂದರ್ಭ ನಿರ್ಮಾಣವಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ಕನ್ನಡದ್ದಾಗಿದೆ. ಶಾಸ್ತ್ರೀಯತೆಯಿಂದಾಗಿ ಕನ್ನಡದ ಸರ್ವಾಂಗೀಣ ಅಭಿವೃದ್ಧಿಗಾಗಿ ಕೋಟ್ಯಾಂತರ ರೂಪಾಯಿ ಅನುದಾನ ಹಂತಹಂತವಾಗಿ ಬಿಡುಗಡೆಯಾಗಲಿದೆ. ಈಗಾಗಲೇ ಕರ್ನಾಟಕದ ವಿಶ್ವವಿದ್ಯಾಲಯಗಳಿಗೆ ಒಂದೊಂದು ಕೋಟಿ ಹಣ ಬಿಡುಗಡೆಯಾಗಿದ್ದು, ಕರ್ನಾಟಕದ ನಾಡು ನುಡಿಗೆ ಸಂಬಂಧಿಸಿದ ಕೃತಿಗಳು ಪ್ರಕಟಗೊಂಡಿವೆ. ಕನ್ನಡ ಭಾಷಾಭಿವೃದ್ಧಿಗೆ ಬಿಡುಗಡೆಯಾದ ಅನುದಾನ ಸರಿಯಾದ ರೀತಿಯಲ್ಲಿ ಬಳಕೆಯಾಗಿಲ್ಲ ಎನ್ನುವ ಆರೋಪವೂ ಇದೆ. ಕನ್ನಡ ಶಾಸ್ತ್ರೀಯ ಭಾಷೆಯಾಗಿ ಗುರುತಿಸಲ್ಪಟ್ಟ ಕಾರಣದಿಂದಾಗಿ ಇನ್ನೂ ಹಲವಾರು ಅನುಕೂಲತೆಗಳು ಪ್ರಾಪ್ತವಾಗಲಿವೆ. ಅವುಗಳೆಂದರೆ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಶಾಸ್ತ್ರೀಯ ಅಧ್ಯಯನ ಪೀಠಗಳ ಸ್ಥಾಪನೆ, ಶಾಸ್ತ್ರೀಯ ಭಾಷೆಯ ಅಧ್ಯಯನಕ್ಕೆ ಒಂದು ಉನ್ನತ ಅಧ್ಯಯನ ಕೇಂದ್ರದ ಸ್ಥಾಪನೆ, ಅಂತಾರಾಷ್ಟ್ರೀಯ ಹಾಗೂ ರಾಷ್ಟ್ರೀಯ ಪ್ರಶಸ್ತಿಗಳು, ಹಳೆಗನ್ನಡದ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳು ಮುಂತಾದವು.

ತುಳು ಭಾಷೆ ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯುವ ಸಾಮರ್ಥ್ಯವನ್ನು ಹೊಂದಿದೆಯೇ ? ಎನ್ನುವ ಪ್ರಶ್ನೆಯ ಜೊತೆಗೆ ಈಗಾಗಲೇ ಅದು ಶಾಸ್ತ್ರೀಯ ಮನ್ನಣೆಯನ್ನು ಪಡೆದಿರುವ ಭಾಷೆಯ ಅಧೀನದಲ್ಲಿದೆ ಎನ್ನುವುದು ಕೂಡ ಮುಖ್ಯವಾಗುತ್ತದೆ. ತುಳುವನ್ನು ಸಂವಿಧಾನದ ಎಂಟನೆಯ ಪರಿಚ್ಛೇದದಲ್ಲಿ ಸೇರ್ಪಡೆಗೊಳಿಸುವ ಹಾಗೂ ಶಿಕ್ಷಣದ ಭಾಷೆಯನ್ನಾಗಿ ಮಾಡುವ ಪ್ರಯತ್ನಗಳು ಆರಂಭಗೊಂಡಿವೆ. ಅದೇ ರೀತಿ ಶಾಸ್ತ್ರೀಯ ಸ್ಥಾನಮಾನಕ್ಕೂ ತುಳು ಭಾಷೆ, ಅರ್ಹತೆಯನ್ನು ಪಡೆದುಕೊಂಡಿದೆ ಎನ್ನುವ ಅಭಿಪ್ರಾಯವೂ ಇದೆ. ಮೌರ್ಯರ ಸಂದರ್ಭದ ಸತಿಯ ಪುತ್ರ ಹಾಗೂ ಸಂಗಂ ಸಾಹಿತ್ಯದ ಕೋಶರ್ ಉಲ್ಲೇಖಗಳು ತುಳುನಾಡಿನ ಪ್ರಾಚೀನತೆಯನ್ನು ಇನ್ನಷ್ಟು ಹಿಂದಕ್ಕೆ ಕೊಂಡೊಯ್ಯುತ್ತವೆ. ರಾಬರ್ಟ್ ಕಾಲ್ಡ್‌ವೆಲ್ ಅಭಿಪ್ರಾಯಪಡುವಂತೆ ತುಳು ಸ್ವತಂತ್ರ ಭಾಷೆ ; ಅದು ಯಾವುದೇ ಭಾಷೆಯ ಉಪಭಾಷೆಯಲ್ಲ ; ಆದರೆ ಇತರ ಭಾಷೆಗಳೊಂದಿಗೆ ನಿಕಟವಾದ ಸಂಬಂಧವನ್ನು ಹಾಗೂ ಸಾಮ್ಯತೆಯನ್ನು ಹೊಂದಿದೆ. ದ್ರಾವಿಡ ಭಾಷಾವರ್ಗದಲ್ಲಿ ತುಳು ಪ್ರಮುಖವಾಗಿ ಕಾಣಿಸಿಕೊಳ್ಳುವ ಭಾಷೆ ಎನ್ನುವುದು ಭಾಷಾವಿಜ್ಞಾನಿಗಳ ಅಭಿಮತ. ತುಳು ದಕ್ಷಿಣ ದ್ರಾವಿಡ ಭಾಷಾ ಗುಂಪಿನಲ್ಲಿ ಗುರುತಿಸಿಕೊಂಡಿರುವ ಭಾಷೆ. ಇದು ಭಾಷಾವಿಜ್ಞಾನಿಗಳ ಸಂಶೋಧನೆಯಿಂದ ಸಾಬೀತಾಗಿರುವ ಅಂಶ. ಇನ್ನು ಲಿಪಿಯ ವಿಚಾರ ಬಂದಾಗ ಈಗಾಗಲೇ ತುಳು ಲಿಪಿಯನ್ನು ಪತ್ತೆ ಹಚ್ಚಲಾಗಿದ್ದು ಆ ಲಿಪಿಯಲ್ಲಿ ರಚನೆಗೊಂಡಿರುವ ಕಾವ್ಯಗಳು ಲಭ್ಯವಿವೆ. ತುಳು ಲಿಪಿಯನ್ನು ತುಳು – ಮಲಯಾಳಂ ಲಿಪಿ ಎಂಬುದಾಗಿಯೂ ಕರೆಯಲಾಗುತ್ತದೆ. ಆದರೆ ಈ ಲಿಪಿ ಬ್ರಾಹ್ಮಣರ ಖಾಸಗಿ ಬರವಣಿಗೆಗಷ್ಟೆ ಯಾಕೆ ಸೀಮಿತವಾಯಿತು ಹಾಗೂ ತನ್ನ ನಿರಂತರತೆಯನ್ನು ಯಾಕೆ ಕಳೆದುಕೊಂಡಿತು ಎನ್ನುವುದರ ಕುರಿತು ಸಂಶೋಧನೆಗಳು ನಡೆಯುತ್ತಿವೆ. ತುಳು ಭಾಷೆ ಲಿಪಿ ಇದ್ದೂ ಇಲ್ಲದ ಹಾಗೆ ಇರುವುದಕ್ಕೆ ಪುರೋಹಿತಶಾಹಿ ವ್ಯವಸ್ಥೆಯ ನಿಯಂತ್ರಣ, ಕನ್ನಡದ ಯಜಮಾನಿಕೆ ಹಾಗೂ ರಾಜಾಶ್ರಯದ ಕೊರತೆ ಕಾರಣವಾಗಿರಬೇಕೆಂದು ಬಹುತೇಕ ಅಧ್ಯಯನಗಳು ತೀರ್ಮಾನಿಸಿವೆ. ಇನ್ನು ತುಳು ಲಿಪಿಯಲ್ಲಿ ರಚನೆಗೊಂಡ ಕಾವ್ಯಗಳು ತುಳುನಾಡಿಗೆ ಲಿಖಿತ ಸಾಹಿತ್ಯ ಇರುವುದನ್ನು ದೃಢೀಕರಿಸಿವೆ. ವಿಷ್ಣುತುಂಗನ ಶ್ರೀ ಭಾಗವತೊ, ಅರುಣಾಬ್ಜನ ಮಹಾಭಾರತೊ, ಕವಿ ಹಾಗೂ ಕಾಲ ಇನ್ನೂ ನಿರ್ಣಯವಾಗದಿರುವ ತುಳು ದೇವಿ ಮಹಾತ್ಮೆ ಹಾಗೂ ಕಾವೇರಿ ಕಾವ್ಯ ಇಲ್ಲಿಯವರೆಗೆ ಲಭ್ಯವಾದ ಪ್ರಮುಖ ಕಾವ್ಯಗಳು. ಇವುಗಳಲ್ಲದೆ ಇನ್ನೂ ಅನೇಕ ತಾಡವಾಲೆಗಳೂ ದೊರಕಿವೆ. ಆದರೆ ಇವೆಲ್ಲವೂ ತುಳುನಾಡಿನ ಲಿಖಿತ ನೆಲೆಯ ವೈಭವೀಕರಣಕ್ಕೆ ಸಾಮಗ್ರಿಗಳಾದರೆ ಸ್ಥಳೀಯತೆಯನ್ನು ಕಂಡುಕೊಳ್ಳಲು ಸಾಧ್ಯವಿಲ್ಲ. ಈ ಕಾವ್ಯಗಳು ಭಾರತದಲ್ಲಿ ಪ್ರಾಚೀನ ಸಂದರ್ಭದಲ್ಲಿಯೇ ರಚನೆಗೊಂಡಿರುವ ವೈದಿಕ ಕಾವ್ಯಗಳ ವಿಶ್ವಾತ್ಮಕ ನಿರೂಪಣೆಯ ಪ್ರಾದೇಶಿಕ ರೂಪಗಳೇ ಆಗಿವೆ. ಪ್ರಸ್ತುತ ಇವು ಮುಖ್ಯವಾಗುವುದು ಲಿಪಿಯ ವಿಚಾರದಲ್ಲಿ. ಲಿಪಿ ಇದೆ ಎನ್ನುವುದನ್ನು ಸಾಬೀತುಪಡಿಸುವುದು ಕೂಡ ಆಡು ಭಾಷೆಗಳಿಗೆ ತಮ್ಮ ಅಸ್ತಿತ್ವದ ದೃಷ್ಟಿಯಿಂದ ಅತ್ಯಂತ ಮಹತ್ವದ್ದೇ ಆಗಿದೆ. ಮೌಖಿಕ ಸಾಹಿತ್ಯದ ವಿಚಾರಕ್ಕೆ ಬಂದಾಗ ತುಳುನಾಡಿನಷ್ಟು ಸಮೃದ್ಧವಾದ ಜನಪದ ಸಾಹಿತ್ಯ ಬೇರೆ ಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಇವೆಲ್ಲ ಕೇವಲ ಸಮರ್ಥನೆಗಳಾಗಿರದೆ ತುಳು ಭಾಷೆಯ ಪ್ರಾಚೀನತೆ, ಜೀವಂತಿಕೆ ಹಾಗೂ ತುಳುವರ ಬದುಕನ್ನು ಬೆಸೆದುಕೊಂಡಿರುವುದರ ಚಿತ್ರಣವಾಗಿದೆ. ತುಳುನಾಡಿನ ಪ್ರಧಾನ ಆಡುಭಾಷೆಯಾಗಿರುವ ತುಳು ರಾಜಾಶ್ರಯ ಸಿಗದ ಕಾರಣ ಆಡಳಿತ ಭಾಷೆಯಾಗಲು ಸಾಧ್ಯವಾಗಲಿಲ್ಲ ಎನ್ನುವುದು ತುಳುನಾಡಿನ ಚರಿತ್ರೆಯ ಅಧ್ಯಯನದಿಂದ ತಿಳಿದುಬರುವ ವಾಸ್ತವ ಸಂಗತಿ.

ಕರ್ನಾಟಕದ ಭಾಗವಾಗಿರುವ ತುಳುನಾಡು ಕನ್ನಡ ಶಾಸ್ತ್ರೀಯತೆಯ ಲಾಭವನ್ನು ಯಾವ ರೀತಿ ಪಡೆಯುತ್ತದೆ ಅಥವಾ ಪಡೆಯಲು ಸಾಧ್ಯ



ಎನ್ನುವುದು ಕುತೂಹಲಕರವಾದ ವಿಚಾರ. ಭಾಷಿಕ ಸಂಬಂಧಗಳು ಹಾಗೂ ಬಹುಭಾಷಿಕ ಸಂಸ್ಕೃತಿಯನ್ನು ಅಧ್ಯಯನ ನಡೆಸುವ ಯೋಜನೆಗಳು ರೂಪುಗೊಂಡಾಗ ಮಾತ್ರ ಕನ್ನಡ ಹಾಗೂ ತುಳುವಿನ ನಡುವಿನ ಭಾಷಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡು-ಕೊಳ್ಳುವಿಕೆಗಳ ಸೂಕ್ಷ್ಮ ಅಧ್ಯಯನ ಸಾಧ್ಯವಾಗುತ್ತದೆ. ಕನ್ನಡ ಶಾಸ್ತ್ರೀಯತೆ ಯಲ್ಲಿ ಕನ್ನಡ ಭಾಷೆ, ಕನ್ನಡ ಸಮುದಾಯಗಳು, ಕನ್ನಡ ಪ್ರದೇಶಗಳು ಮುಂತಾದ ವಿಂಗಡಣೆಗಳಿರುವುದಿಲ್ಲ. ಕರ್ನಾಟಕದ ಗಡಿಗಳೊಳಗಿನ ಜನರೆಲ್ಲರೂ ವಿಶಾಲಾರ್ಥದಲ್ಲಿ ಕನ್ನಡಿಗರೇ ಆಗಿರುವುದರಿಂದ ಅವರೆಲ್ಲರೂ ಶಾಸ್ತ್ರೀಯತೆಯ ಲಾಭಗಳ ಹಕ್ಕುದಾರರೇ ಆಗಿರುತ್ತಾರೆ. ಅದೇ ರೀತಿ ಕರ್ನಾಟಕದ ಗಡಿಗಳಿಂದಾಚೆಗಿರುವ ಕನ್ನಡಿಗರೆಲ್ಲರೂ ಶಾಸ್ತ್ರೀಯತೆಯ ಚೌಕಟ್ಟಿನೊಳಗೇ ಬರುತ್ತಾರೆ. ಕರ್ನಾಟಕದೊಳಗಿನ ಎಲ್ಲ ಜಾತಿ, ಧರ್ಮ, ಭಾಷೆ, ಸಂಸ್ಕೃತಿ, ಆಚರಣೆ ಮುಂತಾದವು ಶಾಸ್ತ್ರೀಯತೆಯ ಅಧ್ಯಯನದ ವಸ್ತುಗಳೇ ಆಗಿವೆ. ಇದು ಸಾಧ್ಯವಾಗಬೇಕಾದರೆ ಎಲ್ಲದಕ್ಕಿಂತ ಮೊದಲು ಕನ್ನಡ ಭಾಷೆ ಗಟ್ಟಿಯಾದ ಅಸ್ತಿತ್ವವನ್ನು ಹೊಂದಬೇಕಾಗುತ್ತದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಸ್ತಕ ಅಭಿವೃದ್ಧಿ ಪ್ರಾಧಿಕಾರ, ರಕ್ಷಣಾ ವೇದಿಕೆಗಳು ಮುಂತಾದವು ಕನ್ನಡದ ಅಭಿವೃದ್ಧಿಯನ್ನೇ ಮಂತ್ರವನ್ನಾಗಿಸಿಕೊಂಡ ವೇದಿಕೆಗಳು. ಆದರೂ ಕನ್ನಡದ ವ್ಯವಸ್ಥಿತವಾದ ಹಾಗೂ ಯೋಜನಾಬದ್ಧವಾದ ಅಭಿವೃದ್ಧಿ ಸಾಧ್ಯವಾಗಲಿಲ್ಲ. ಕನ್ನಡದ ಸ್ಥಿತಿಯೇ ಹೀಗಿರುವಾಗ ಕರ್ನಾಟಕದೊಳಗಿನ ಆಡು ಭಾಷೆಗಳ ಸ್ಥಿತಿ ಹೇಗಿರಬೇಕು ! ಅವು ತಮ್ಮ ಸಾಮರ್ಥ್ಯದ ಹಿನ್ನೆಲೆಯಲ್ಲಿ ಅಸ್ತಿತ್ವವನ್ನು ಕಂಡುಕೊಂಡು ಜೀವಂತಿಕೆಯಿಂದ ಸೃಜನಶೀಲವಾಗಿ ಗುರುತಿಸಿಕೊಂಡು ಬಂದಿವೆ. ಸರ್ಕಾರ ಅವುಗಳ ಅಭಿವೃದ್ಧಿಗಾಗಿ ಅಕಾಡೆಮಿಗಳನ್ನು ಸ್ಥಾಪಿಸಿದೆ. ತುಳು ಸಾಹಿತ್ಯ ಅಕಾಡೆಮಿ ತುಳು ಭಾಷೆಗೆ ರಾಷ್ಟ್ರೀಯ ಮಾನ್ಯತೆಯನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ಕೆಲಸ ನಿರ್ವಹಿಸುತ್ತಿದೆ. ತುಳು ಸಾಹಿತ್ಯ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಪೂರಕವಾಗಿದ್ದು, ಕನ್ನಡ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸುವಂತೆ ಮಾಡಿದೆ. ಅದೇ ರೀತಿ ಕನ್ನಡ ಸಾಹಿತ್ಯಲೋಕ ತುಳು ಭಾಷೆ ಹಾಗೂ ಸಾಹಿತ್ಯದ ಅಭಿವೃದ್ಧಿಯ ಕಡೆಗೂ ಆಲೋಚನೆ ನಡೆಸಬೇಕಾಗುತ್ತದೆ. ಸಾಹಿತ್ಯ ಪರಸ್ಪರ ಮುಖಾಮುಖಿಯಾದಾಗ ಮಾತ್ರ ಅವುಗಳ ಪುನಾರಚನೆ ಅಥವಾ ಮರು ಓದು ಸಾಧ್ಯವಾಗುತ್ತದೆ. ಕೊಡಗಿನ ಚರಿತ್ರೆ ಹಾಗೂ ಸಾಹಿತ್ಯ ಕೊಡಗಿಗಷ್ಟೇ ಹಾಗೂ ತುಳುನಾಡಿನ ಚರಿತ್ರೆ ಹಾಗೂ ಸಾಹಿತ್ಯ ತುಳುನಾಡಿಗಷ್ಟೇ ಸೀಮಿತವಾದರೆ ಅದರಿಂದ ಕರ್ನಾಟಕದ ಬಹುತ್ವದ ನೆಲೆಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ. ಕರ್ನಾಟಕದ ವೈಭವವನ್ನು ಸಾರುವುದಕ್ಕೆ ಮಾತ್ರ ಪ್ರಾದೇಶಿಕ ಸಂಸ್ಕೃತಿ ಬಳಕೆಗೊಂಡರೆ ಅದರಿಂದ ಕರ್ನಾಟಕಕ್ಕೆ ಒಂದು ಲಾಭದಾಯಕ ಮಾರುಕಟ್ಟೆ ಸಿಗಬಹುದೇ ಹೊರತು ಭಾಷೆ ಹಾಗೂ ಭಾಷಿಕರ ಸಂಬಂಧವನ್ನು ಬೆಸೆಯಲು ಸಾಧ್ಯವಿಲ್ಲ.




ಶಾಸ್ತ್ರೀಯತೆಯ ಕಾರಣಕ್ಕಾಗಿ ನಡೆಯುವ ಸಾಹಿತ್ಯ ಚರಿತ್ರೆಯ ಪುನಾರಚನೆ ಸಾಹಿತ್ಯದ ಲಿಖಿತ ನೆಲೆಯ ವೈಭವೀಕರಣವಾಗಿ ಪರಿವರ್ತನೆಗೊಂಡಿದೆ. ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯಬೇಕಾದರೆ ಭಾಷೆ ಒಂದೂವರೆ ಸಾವಿರ ವರ್ಷಗಳಷ್ಟು ಪುರಾತನವಾಗಿರಬೇಕು ಎನ್ನುವುದು ಪ್ರಮುಖವಾದ ಮಾನದಂಡ. ಇದರಿಂದಾಗಿ ಒಂದೂವರೆ ಸಾವಿರ ವರ್ಷಗಳ ಹಿಂದಿನ ಸಾಹಿತ್ಯ, ಸಂಸ್ಕೃತಿ, ಚರಿತ್ರೆ ಅಥವಾ ಒಟ್ಟಾರೆಯಾಗಿ ಜನರ ಬದುಕು ವರ್ತಮಾನದ ಗ್ರಹಿಕೆಯಲ್ಲಿ ವ್ಯಾಖ್ಯಾನಗೊಳ್ಳು ವಂತಾಯಿತು. ಭಾಷೆ ಪುರಾತನವಾದಷ್ಟೂ ಯಜಮಾನಿಕೆಯ ಭಾಷೆಯಾಗುವ ಹಾಗೂ ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯುವ ಅರ್ಹತೆಯನ್ನು ಗಳಿಸುವ ಭಾಷೆಯಾಗಿ ರೂಪುಗೊಳ್ಳುತ್ತಾ ಸಾಗುತ್ತದೆ. ಆದರೆ ಈ ಪ್ರಕ್ರಿಯೆಯಲ್ಲಿ ಪುನಾರಚನೆಗೊಳ್ಳುವ ಚರಿತ್ರೆ ಲಿಖಿತ ಚರಿತ್ರೆಯಾಗಿರುತ್ತದೆ. ಅಷ್ಟೇ ಅಲ್ಲದೆ, ವೈಭವದ ಚರಿತ್ರೆಯೂ ಆಗಿರುತ್ತದೆ. ಚರಿತ್ರೆ ಅಭಿವ್ಯಕ್ತಗೊಳ್ಳುವುದು ಭಾಷೆಯ ಮೂಲಕ. ಚರಿತ್ರೆ ನಿರ್ಮಾಣಗೊಳ್ಳುತ್ತಾ ಹೋದ ಹಾಗೆ ಭಾಷೆಯೂ ಅಭಿವೃದ್ಧಿಗೊಳ್ಳುತ್ತಾ ಸಾಗುತ್ತದೆ. ಶಾಸ್ತ್ರೀಯ ಮಾನ್ಯತೆಯ ಫಲವಾಗಿ ಚರಿತ್ರೆಯ ಒಂದು ಮುಖ, ಅಂದರೆ ಚರಿತ್ರೆಯ ಲಿಖಿತ ನೆಲೆ, ವಿಸ್ತಾರ ಗೊಳ್ಳುತ್ತಾ ಸಾಗುವಂತಾಯಿತು. ತಮಿಳು ಶಾಸ್ತ್ರೀಯತೆಯ ವಿಚಾರ ಬಂದಾಗ ಸಂಗಂ ಸಾಹಿತ್ಯದ ವೈಭವೀಕೃತ ಚಿತ್ರಣವನ್ನು ಕಾಣಬಹುದು. ಅದೇ ರೀತಿ ಕನ್ನಡದಲ್ಲಿ ಹಳೆಗನ್ನಡವನ್ನು ಅಧ್ಯಯನ ಮಾಡಲು ವಿಶೇಷ ಯೋಜನೆಗಳನ್ನು ರೂಪಿಸಲಾಯಿತು. ಶಾಸ್ತ್ರೀಯತೆ ಎನ್ನುವುದು ಚರಿತ್ರೆಯ ಲಿಖಿತ ನೆಲೆಯಿಂದ ಅಧಿಕೃತಗೊಳ್ಳುತ್ತಾ ಹೋಗುತ್ತದೆ. ಪ್ರಾಚೀನತೆಯನ್ನು ಅಥವಾ ಪುರಾತನವನ್ನು ನಿರ್ಧರಿಸುವ ಮಾನದಂಡ ಬರವಣಿಗೆ ಅಥವಾ ಲಿಖಿತತೆ ಆದಾಗ ಜನಮುಖಿ ಚರಿತ್ರೆಯಾಗಲಿ ಅಥವಾ ಜನಪದ ಸಾಹಿತ್ಯವಾಗಲಿ ರಚನೆಗೊಳ್ಳುವುದು ಕಷ್ಟಸಾಧ್ಯವಾಗುತ್ತದೆ. ಶಾಸ್ತ್ರೀಯತೆಯ ಪ್ರಶ್ನೆ ಅಸ್ಮಿತೆಯ ಪ್ರಶ್ನೆಯೇ ಆಗಿರುವುದರಿಂದ ಅಲ್ಲಿ ಚರ್ಚಿತವಾಗುವ ವಿಷಯಗಳೂ ಭಾವನಾತ್ಮಕ ನೆಲೆಯಿಂದ ಹೆಚ್ಚಾಗಿ ರೂಪು ಗೊಂಡಿರುತ್ತವೆಯೇ ಹೊರತು ತರ್ಕಬದ್ಧ ಗ್ರಹಿಕೆಗಳಿಂದಲ್ಲ. ಭಾವನಾತ್ಮಕ ನೆಲೆಯಿಂದ ಚರಿತ್ರೆಯ ಅಥವಾ ಸಾಹಿತ್ಯದ ಪುನಾರಚನೆಯಾದರೆ ಅದರಿಂದ ಹೆಚ್ಚಿನದನ್ನೇನೂ ನಿರೀಕ್ಷಿಸಲು ಸಾಧ್ಯವಾಗುವುದಿಲ್ಲ. ಲಿಖಿತತೆ ಹಾಗೂ ಭಾವನಾತ್ಮಕತೆಗಳಿಗಷ್ಟೇ ಸೀಮಿತಗೊಳ್ಳದೆ ಮೌಖಿಕತೆ ಹಾಗೂ ವಾಸ್ತವತೆಯ ಕಡೆಗೂ ಶಾಸ್ತ್ರೀಯತೆಯ ಅಧ್ಯಯನಗಳು ಚಿಂತನೆ ನಡೆಸಬೇಕಾದ ಅನಿವಾರ್ಯತೆ ಇಂದಿನ ಸಂದರ್ಭದಲ್ಲಿದೆ.

ಭಾಷೆಯಲ್ಲಿ ವೈಭವದ ಹಾಗೂ ಭಾವನಾತ್ಮಕ ನೆಲೆಗಳು ಇರುವಂತೆ ವೈಜ್ಞಾನಿಕ ಹಾಗೂ ತರ್ಕಬದ್ಧ ಗ್ರಹಿಕೆಗಳೂ ಇರುತ್ತವೆ. ಆದರೆ ಭಾಷೆಯನ್ನು ಯಾರು, ಯಾವ ಸಂದರ್ಭದಲ್ಲಿ ಹಾಗೂ ಯಾವ ಉದ್ದೇಶಕ್ಕಾಗಿ ಬಳಸಿಕೊಂಡಿರುತ್ತಾರೆ ಎನ್ನುವುದರ ಮೇಲೆ ಭಾಷೆಯ ಸಾಮರ್ಥ್ಯ ನಿರ್ಧಾರಿತವಾಗುತ್ತದೆ. ಆಡುಭಾಷೆ, ಆಡಳಿತದ ಭಾಷೆ, ಉದ್ಯೋಗದ ಭಾಷೆ, ದೇವಭಾಷೆ ಮುಂತಾದವು ಭಾಷೆಯ ಬಳಕೆಯ ವಿವಿಧ ವಿಧಾನಗಳು ಹಾಗೂ ಅಸ್ತಿತ್ವದ ನೆಲೆಗಳು. ಭಾಷೆಯೊಂದು ಜೀವಂತಿಕೆಯನ್ನು ಪಡೆದು ಕೊಳ್ಳುವುದು ಅದು ಸಮಾಜದಲ್ಲಿ ಜನರಿಗೆ ಹತ್ತಿರವಾದಾಗ ಹಾಗೂ ಜನರ ಬದುಕಿ ನೊಂದಿಗೆ ಬೆಸೆದುಕೊಂಡಾಗ. ಭಾಷೆ ಜನರ ಬದುಕನ್ನು ಬೇರ್ಪಡಿಸುವ ಹಾಗೂ ಮನಸ್ಸನ್ನು ಕೆಡಿಸುವ ಪ್ರಯತ್ನದಲ್ಲಿ ತೊಡಗಿದಾಗ ವಿರೋಧಿ ಸ್ಥಾನದಲ್ಲಿ ನಿಲ್ಲುತ್ತದೆ ಅಥವಾ ಅದನ್ನು ನಿಲ್ಲಿಸಲಾಗುತ್ತದೆ. ಹಾಗಾಗಿ ಭಾಷೆ ಹಾಗೂ ಭಾಷಿಕರ ನಡುವಿನ ಸಂಬಂಧದ ಸ್ವರೂಪ ಇಲ್ಲಿ ಮುಖ್ಯವಾಗುತ್ತದೆ. ಪ್ರತಿಯೊಂದು ಭಾಷೆಯೂ ತನ್ನದೇ ಆದ ವಲಯವೊಂದನ್ನು ನಿರ್ಮಿಸಿಕೊಳ್ಳುತ್ತದೆ. ಭಾಷೆಯ ಅಸ್ತಿತ್ವದ ದೃಷ್ಟಿಯಿಂದ ಅದು ಅನಿವಾರ್ಯವೂ ಆಗಿರುತ್ತದೆ. ಇಂಗ್ಲಿಷ್ ಭಾಷೆ ಜಾಗತಿಕ ಮಟ್ಟದಲ್ಲಿ, ಹಿಂದಿ ಭಾಷೆ ರಾಷ್ಟ್ರ ಮಟ್ಟದಲ್ಲಿ, ಕನ್ನಡ ಭಾಷೆ ರಾಜ್ಯ ಮಟ್ಟದಲ್ಲಿ ಹಾಗೂ ತುಳು ಭಾಷೆ ಪ್ರಾದೇಶಿಕ ಮಟ್ಟದಲ್ಲಿ ಪ್ರಭಾವ ವಲಯಗಳನ್ನು ನಿರ್ಮಿಸಿಕೊಂಡಿವೆ. ಈ ಭಾಷೆಗಳೆಲ್ಲವೂ ನಮ್ಮ ವಲಯಗಳಲ್ಲಿ ಪ್ರಭಾವಶಾಲಿಯಾಗಿ ಹಾಗೂ ಜೀವಂತಿಕೆಯಿಂದ ಕೂಡಿರುತ್ತವೆ. ಮಾನವನ ಬದುಕಿಗೆ ಹತ್ತಿರವಾಗುತ್ತಾ ಹೋದಂತೆಲ್ಲಾ ಭಾಷೆ ಇನ್ನಷ್ಟು ಗಟ್ಟಿಗೊಳ್ಳುತ್ತಾ ಹಾಗೂ ಸೃಜನಶೀಲವಾಗುತ್ತಾ ಸಾಗುತ್ತದೆ. ಅದೇ ರೀತಿ ಸಾಮಾಜಿಕ ಅಥವಾ ಸಾಂಸ್ಕೃತಿಕ ಅಂತರವನ್ನು ಕಾಯ್ದುಕೊಂಡು, ಶ್ರೇಷ್ಠತೆ ಹಾಗೂ ಮಡಿವಂತಿಕೆಯ ಪ್ರತಿಪಾದನೆಯಲ್ಲಿ ತೊಡಗುವ ಭಾಷೆ ಸಮಾಜದಿಂದ ದೂರ ಸರಿಯುತ್ತದೆ ಹಾಗೂ ಜೀವಂತಿಕೆಯನ್ನು ಕಳೆದುಕೊಳ್ಳುತ್ತದೆ. ಭಾಷಾತಜ್ಞರಾದ ಕೆ. ವಿ. ನಾರಾಯಣ ಅವರು ಹೇಳುವಂತೆ ಕನ್ನಡವು ಒಂದು ಜೀವಂತ ಶಾಸ್ತ್ರೀಯ ಭಾಷೆ. ಕನ್ನಡವು ಜನರ ನಡುವೆಯೇ ಉಸಿರಾಡುವ ಭಾಷೆಯಾಗಿದ್ದು, ಲಿಖಿತವಾಗಿ ಅಥವಾ ಮೌಖಿಕವಾಗಿ, ರಾಜ್ಯಭಾಷೆಯಾಗಿ ಅಥವಾ ಮಾತೃಭಾಷೆಯಾಗಿ ಜನರೊಂದಿಗೇ ಬದುಕುತ್ತಿದೆ. ಕರ್ನಾಟಕದೊಳಗೆ ಕೊಡಗು, ತುಳು, ಕೊಂಕಣಿ ಮುಂತಾದ ಅನ್ಯಭಾಷಿಕ ಪ್ರದೇಶಗಳು ಸೇರಿಕೊಂಡಾಗ ಅವುಗಳೆಲ್ಲವನ್ನೂ ಅನ್ಯವಾಗಿ ನೋಡದೆ ಅಥವಾ ಆ ಭಾವನೆ ಬರದಂತೆ ನೋಡಿಕೊಂಡು ಎಚ್ಚರಿಕೆಯಿಂದ ಅವುಗಳೊಂದಿಗೆ ವ್ಯವಹರಿಸುತ್ತ ಬಂದಿವೆ. ಈ ಕಾರಣದಿಂದಾಗಿ ಕರ್ನಾಟಕದಲ್ಲಿ ಕನ್ನಡ ಎನ್ನುವುದು ಕೇವಲ ಭಾಷೆ ಮಾತ್ರ ಆಗದೆ, ಕನ್ನಡ ನಾಡು ಹಾಗೂ ಕನ್ನಡ ಜನತೆಯ ಸಂಕೇತವೂ ಆಗಿದೆ. ಕನ್ನಡದ ಶಾಸ್ತ್ರೀಯ ಸ್ಥಾನಮಾನ ಎಂದಾಗ ಅದು ಅಖಂಡ ಕರ್ನಾಟಕ ಜನತೆಯ ಸ್ಥಾನಮಾನವೂ ಆಗಿದೆ. ಇದು ಕರ್ನಾಟಕದ ಚರಿತ್ರೆ ಬೆಳೆದುಬಂದ ಬಗೆಯಾಗಿದ್ದು, ಸಮಕಾಲೀನ ಸಂದರ್ಭದಲ್ಲಿಯೂ ಭಾಷಾ ಸಾಮರಸ್ಯವನ್ನು ಸಾಧಿಸುವುದರ ಮೂಲಕ ಬಹುಭಾಷಿಕರ ನಡುವೆ ಕಂದಕ ಏರ್ಪಡದಂತೆ ನೋಡಿಕೊಳ್ಳುವ ಜವಾಬ್ದಾರಿ ಪ್ರತಿಯೊಂದು ಭಾಷೆ ಹಾಗೂ ಭಾಷಿಕರ ಮೇಲಿದೆ.

ಡಾ|| ಕೆ. ಮೋಹನ್‌ಕೃಷ್ಣ ರೈ
ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ ವಿದ್ಯಾರಣ್ಯ-೫೮೩೨೭೬

# ಘೂತಾವ್ರೊ ಘೂ ನಾಂಗ್ ಪರ್ವತಗಳ ಕಥೆ

**ದೇವರ ದಯಿದಿಂದ ಘೂ ಎಂಬ ಆ ತರುಣ ತನ್ನ ಘೋರ ಅಪರಾಧವನ್ನು ನೆನೆದು ಪಶ್ಚಾತ್ತಾಪದಿಂದ ಮರುಗಿದ. ತನಗೆ ಅಷ್ಟೊಂದು ಉಪಕಾರವೆಸಗಿದ ಆ ನತದೃಷ್ಟ ಹೆಣ್ಣಿಗೆ ತಾನು ಯೋಗ್ಯನಲ್ಲವೆಂದು ದುಃಖಿಸಿದ. ಕೊಳದ ಆಚೆ ಬದಿಯಲ್ಲಿ ಬಿದ್ದಿದ್ದ ಅವಳು ಇನ್ನೂ ಜೀವಂತವಾಗಿರುವಳೆಂದು ಭ್ರಮಿಸಿ ಶೈತ್ಯೋಪಚಾರ ಮಾಡಲು ಹೊರಗಿ ಸೋತ.**

**ಎಚ್. ಕೆ. ರಾಮಚಂದ್ರಮೂರ್ತಿ**



**ಕಾಂ**ಬೋಡಿಯಾ (ಕಾಂಭೋಜ)ದ ಒಂದು ಹಳೆಯ ಜಾನಪದ ಕಥೆ ಹೀಗಿದೆ :

ಸಹಸ್ರಾರು ವರ್ಷಗಳ ಹಿಂದೆ, ಪರ್ವತ ತಪ್ಪಲಿನಲ್ಲಿದ್ದ ಒಂದು ಸುಂದರವಾದ ಅರಮನೆಯಲ್ಲಿ ಕಿನ್ನಾ ಎಂಬ ಒಬ್ಬ ರಾಕ್ಷಸಿ ವಾಸವಾಗಿದ್ದಳು. ಅವಳಿಗೆ ಮಕ್ಕಳಾಗಲಿ, ಗಂಡ ಅಥವಾ ಇನ್ನಿತರ ಯಾವ ಸಂಬಂಧಿಗಳಾಗಲಿ ಇರಲಿಲ್ಲ. ಅವಳದು ಒಂಟಿ ಬದುಕು. ಆದರೆ ಪರ್ವತದ ತಪ್ಪಲಿನಲ್ಲಿ ಬಹುದೂರದವರೆಗೆ ದಟ್ಟವಾಗಿ ಬೆಳೆದ ಕಾಡಿನಲ್ಲಿ ಅಲೆದಾಡುತ್ತ ಅವಳು ಸುಖವಾಗಿ ಕಾಲ ಕಳೆಯುತ್ತಿದ್ದಳು. ತನ್ನ ಒಬ್ಬಂಟಿತನವನ್ನು ಮರೆಯಲು ಅವಳಿಗಿದ್ದುದು ಇದೊಂದೇ ಮಾರ್ಗ. ರಾಕ್ಷಸಾಕಾರದ ಮರಗಿಡಗಳ ನಡುವೆ ಸುತ್ತಿ ಬಳಸಿ ಓಡಾಡುತ್ತ, ಕಾಡಿನ ನಡುವೆ ಹರಿಯುತ್ತಿದ್ದ ನದಿಯ ದಂಡೆಯಲ್ಲಿ ಬೆಳೆದ ಹೂಗಿಡಗಳನ್ನು ನೋಡಿ ನಲಿಯುತ್ತ, ದೊಡ್ಡ ಆಲದ ಮರದ ನೆರಳಿನಲ್ಲಿ ಮಲಗಿ ತೂಕಡಿಸುವಳು – ಊಟದ ಹೊತ್ತಿಗೆ ಸರಿಯಾಗಿ ಅರಮನೆಗೆ ಹಿಂತಿರುಗುವಳು – ಮತ್ತೆ ಕಾಡಿನಲ್ಲಿ ಅಲೆದಾಟ. ದಿನವಿಡೀ ಅವಳು ಕಾಡಿನ ಉದ್ದಗಲದಲ್ಲಿ ತಿರುಗಾಡುತ್ತಿದ್ದುದರಿಂದ ಕಾಡಿನ ಸಕಲ ಪ್ರಾಣಿ ಪಕ್ಷಿಗಳಿಗೆ ಅವಳೊಡನೆ ಆಪ್ತ ಸ್ನೇಹ ಬೆಳೆದಿತ್ತು. ಅವಳ ಮುಂದೆ ಹಾಡಲು ಆಡಲು ಬರುತ್ತಿದ್ದ ಪಕ್ಷಿಗಳಿಗಂತೂ ಅವಳ ನಿಕಟ ಸಂಬಂಧ ಆಪ್ಯಾಯಮಾನವಾಗಿತ್ತು. ಕೆಲವೊಮ್ಮೆ ಅವಳು ಆನೆಗಳ ಸೊಂಡಿಲಿನ ಮೇಲೆ ಹತ್ತಿ ಸವಾರಿ ಮಾಡುವಳು, ಮತ್ತೆ ಇನ್ನು ಕೆಲವು ಸಲ ಜಿಂಕೆಗಳನ್ನು ಎತ್ತಿಕೊಂಡು ಮುದ್ದಾಡುವಳು, ಪಕ್ಷಿಗಳ ಕೂಗನ್ನು ಅಣಕಿಸಿ ಕೇಕೆ ಹಾಕುವಳು.

ಒಂದು ಮುಂಜಾನೆ ಒಬ್ಬ ಯುವಕ ಕಾಡಿನೊಳಕ್ಕೆ ಪ್ರವೇಶಿಸುತ್ತಿರುವುದು ಅವಳ ಕಣ್ಣಿಗೆ ಬಿತ್ತು. ಅವನು ಇಂದ್ರಚಂದ್ರರಂತೆ ಅತ್ಯಂತ ಸುಂದರವಾಗಿದ್ದನು. ಅವನು ಹೆಗಲಿನ ಮೇಲೆ ನೇತು ಹಾಕಿಕೊಂಡಿದ್ದ ಚರ್ಮದ ಚೀಲದಲ್ಲಿ ಒಂದು ಬಂದೂಕವಿದ್ದುದನ್ನೂ ಸಹ ಅವಳು ಗಮನಿಸಿದಳು. ತನಗೊಬ್ಬ ಗಂಡು ಬೇಕೆಂದು ಬಹುದಿನಗಳಿಂದ ಹಂಬಲಿಸುತ್ತಿದ್ದ ರಾಕ್ಷಸಿಗೆ ಅವನನ್ನು ನೋಡಿ ಅಪರಿಮಿತ ಸಂತೋಷ ಉಕ್ಕಿತು. ಆದರೆ ತನ್ನ ರಾಕ್ಷಸ ಸ್ವರೂಪ ನೋಡಿ ಅವನು ಹೆದರಿ ಓಡಿಹೋಗಬಹುದೆಂದು ಅವಳಿಗೆ ಆತಂಕವಾಯಿತು. ತನಗೆ ಮಾತ್ರ ಗೊತ್ತಿದ್ದ ಒಂದು ಅತ್ಯಂತ ರಹಸ್ಯಮಯ ಮಂತ್ರವನ್ನು ಉಚ್ಚರಿಸಿ ಅತಿ ಸುಂದರ ಯುವತಿಯ ರೂಪ ಧರಿಸಿದಳು. ಈಗ ಅವಳು ನಿರಾತಂಕವಾಗಿ ಯುವಕನನ್ನು ಎದುರಿಸಿ ಮಾತುಕತೆ ಪ್ರಾರಂಭಿಸಿದಳು.

"ಅಣ್ಣ, ಇಲ್ಲಿಗೆ ಯಾಕೆ ಬಂದೆ ? ನಿನಗೇನು ಕೆಲಸ ಈ ಕಾಡಿನಲ್ಲಿ ?"

"ನಾನು ಬೇಟೆಗಾಗಿ ಬಂದಿದ್ದೇನೆ. ಅದ್ಸರಿ, ಇಲ್ಲಿ ನೀನೊಬ್ಬಳೆ ವಾಸವಾಗಿರುವೆಯಾ ?" ಅವನಿಗೆ ಮಹದಾಶ್ಚರ್ಯವಾಗಿತ್ತು.

"ಹೌದು, ನಾನೊಬ್ಬಳೇ ಇಲ್ಲಿ ವಾಸಿಸುತ್ತಿರುವೆ, ಈ ಗಿಡಮರ, ಪ್ರಾಣಿಪಕ್ಷಿಗಳೇ ನನ್ನ ಸ್ನೇಹಿತರು, ಬಂಧು ಬಳಗ."

ಆ ಆಗಂತುಕ ಯುವಕನಿಗೆ ಅವಳ ಮೇಲೆ ಅಪಾರ ಪ್ರೇಮ ಉಂಟಾಗಲು ಹೆಚ್ಚು ಕಾಲ ಹಿಡಿಯಲಿಲ್ಲ. ಅವಳ ಸೌಂದರ್ಯ ಲಾವಣ್ಯಗಳು ಅವನನ್ನು ಸೆರೆ ಹಿಡಿದಿದ್ದವು.

ಇಬ್ಬರೂ ಹೂಗಿಡಗಳು ತುಂಬಿದ ನದಿಯ ದಂಡೆಯ ಮೇಲೆ ಕುಳಿತು ಸರಸ ಸಲ್ಲಾಪದಲ್ಲಿ ತನ್ಮಯರಾದರು. ಆ ಯುವಕನ ಹೆಸರು ಘೂ. ಅವನು ತನ್ನ ಮನೆಯಲ್ಲಿನ ಬಂಧು ಬಳಗದವರ ವಿವರಗಳನ್ನೆಲ್ಲಾ ಅವಳಿಗೆ ಒಪ್ಪಿಸಿದ. ಕಿನ್ನಾ ಅವನು ಅಲ್ಲೆ ತನ್ನೊಡನೆ ಇದ್ದುಬಿಡುವಂತೆ ಬೇಡಿಕೊಂಡಳು. ಘೂ ಸಂತೋಷವಾಗಿ ಒಪ್ಪಿದ.

ಆಮೇಲೆ ಆ ಸುಂದರ ಯುವತಿಯ ಜತೆ ಅಪರಿಮಿತ ಭೋಗ ಸುಖವನ್ನನುಭವಿಸುತ್ತ ಘೂ ಅಲ್ಲೇ ಇದ್ದುಬಿಟ್ಟ. ತನ್ನ ಊರಿನಲ್ಲಿ ತನ್ನ ಏಕಾಕಿ ತಾಯಿ ಕಷ್ಟಕಾರ್ಪಣ್ಯದಿಂದ ಕಾಲವನ್ನು ನೂಕುತ್ತಿರುವ ಸಂಗತಿ ಅವನಿಗೆ ಮರೆತೇಹೋಯಿತು.

ಒಂದು ದಿನ ಕಿನ್ನಾ ಅವನಿಗೆ ಒಂದು ರಹಸ್ಯವನ್ನು ಒಡೆದು ಹೇಳಲು ನಿರ್ಧರಿಸಿದಳು: "ಪ್ರಾಣಪ್ರಿಯ ಗೆಳೆಯಾ ! ನನ್ನ ಬಳಿ ಒಂದು ಮಾಯಾ ಸಂಪುಟ (ಕ್ಯಾಸ್ಕೆಟ್) ಇದೆ. ಅದರಲ್ಲಿ ನಿಂಬೆ ಹಣ್ಣುಗಳಿವೆ. ಅವು ಇನ್ನೂ ಹಸುರಾಗಿದ್ದು ಅದನ್ನು ನನ್ನ ಅಜ್ಜ ಅಜ್ಜಿಯರು ನನಗೆ ಉಡುಗೊರೆಯಾಗಿ ಕೊಟ್ಟಿದ್ದರು. ಅವು ಮಂತ್ರಿಸಿದ ಹಣ್ಣುಗಳು – ಅತ್ಯಂತ ಪ್ರಬಲ ಮಂತ್ರಶಕ್ತಿಯುಳ್ಳವು. ನೀನು ನಮ್ಮ ತೋಟವನ್ನು ನೋಡಿರುವೆಯಾ ?" ಎಂದು ಕೇಳಿದಳು.

"ಇಲ್ಲ – ನಿಮ್ಮ ತೋಟ ಯಾವುದು, ಎಲ್ಲಿದೆ – ನನಗೆ ಒಂದೂ ಗೊತ್ತಿಲ್ಲ."

"ಅದು ಇಲ್ಲಿಂದ ಎರಡು ಮೈಲಿ ದೂರದಲ್ಲಿದೆ. ಆದರೆ ನೀನು ಖಂಡಿತ ಅದರೊಳಕ್ಕೆ ಹೋಗಬಾರದು. ತುಂಬ ಅಪಾಯಕರವಾದ ಸ್ಥಳ ಅದು..." ಎಂದು ಅವನನ್ನು ಎಚ್ಚರಿಸಿ ಬೇಡಿಕೊಂಡಳು.

ಫ್ಲೂ ಮೌನವಾಗಿದ್ದ. ಏನೋ ಆಲೋಚನೆಯಲ್ಲಿ ಮುಳುಗಿದ್ದ.

ಕೆಲವು ದಿನಗಳ ನಂತರ ಒಂದು ದಿನ ಸ್ವಲ್ಪ ಹೊತ್ತು ಕಿನ್ನಾ ಅವನೊಬ್ಬನನ್ನೇ ಬಿಟ್ಟು ಏನೋ ಕೆಲಸಕ್ಕಾಗಿ ಎಲ್ಲೋ ಹೋಗಿದ್ದಳು. ಅವಳ ಗೈರುಹಾಜರಿಯ ಲಾಭ ಪಡೆದು ಫ್ಲೂ ಅವಳು ಹೇಳಿದ್ದ 'ನಿಷಿದ್ಧ', 'ಅಪಾಯದ' ತೋಟಕ್ಕೆ ಹೋದ. ಅಲ್ಲಿ ಮನುಷ್ಯರ ಮೂಳೆಗಳಿಂದ ತುಂಬಿದ ಒಂದು ಅಗಾಧ ಆಳದ ಗುಂಡಿಯನ್ನು ನೋಡಿದ. ತಕ್ಷಣ ಅರಮನೆಗೆ ಓಡಿಬಂದು ರೂಮಿನಲ್ಲಿದ್ದ ಸಂಪುಟದ (ಕ್ಯಾಸ್ಕೆಟ್)ನ್ನು ತೆರೆದು, ನಿಂಬೆ ಹಣ್ಣುಗಳ ಸಮೇತ ಕಾಡಿನಲ್ಲಿ ಮರೆಯಾಗಿ ಪಲಾಯನ ಮಾಡಿದ.

ಕಿನ್ನಾ ಹಿಂತಿರುಗಿ ಬಂದು ಕ್ಯಾಸ್ಕೆಟ್ ತೆರೆದು ತನ್ನ ಮಂತ್ರದ ನಿಂಬೆಹಣ್ಣುಗಳಿಲ್ಲದಿರುವುದನ್ನು ನೋಡಿ ಆಶ್ಚರ್ಯಚಕಿತಳಾದಳು. ತನ್ನ ಗಂಡ ದ್ರೋಹವೆಸಗಿ ಓಡಿಹೋಗಿರಬಹುದೆಂಬುದು ಖಚಿತವಾಯಿತು. ಅವನನ್ನು ಅಟ್ಟಿಸಿಕೊಂಡು ಹೊರಟಳು. ಅವಳು ತನ್ನ ಹುಟ್ಟಿಗೆ ಸಹಜವಾದ ದೈತ್ಯ ಹೆಜ್ಜೆಗಳನ್ನು ಇಡುತ್ತಾ ಕ್ಷಿಪ್ರಗತಿಯಲ್ಲಿ ಓಡಿ ಅವನನ್ನು ಹಿಡಿದುಬಿಡುವುದರಲ್ಲಿದ್ದಳು. ಗಟ್ಟಿಯಾಗಿ ಅವನನ್ನು ಕೂಗಿಯೇ ಕೂಗಿದಳು. 'ನಿಲ್ಲು ನಿಲ್ಲು' ಎಂದು ಕಿರಿಚಿಕೊಂಡಳು. ಆದರೆ ಅವನು ಎರಡು ಪಟ್ಟು ಜೋರಾಗಿ ಓಡಿದ, ಒಂದು ನಿಂಬೆ ಹಣ್ಣನ್ನು ತೆಗೆದು ಹಿಂದಕ್ಕೆಸೆದ. ತಕ್ಷಣ ಭೀಕರ ಬೆಂಕಿ ಎದ್ದು ಅವರ ಸುತ್ತಲೂ ಆವರಿಸಿಕೊಂಡಿತು. ಕಿನ್ನಾಳ ಕೂಗು ಬೆಂಕಿಯ ಮೂಲಕ ಕೇಳಿ ಬರುತ್ತಿತ್ತು. ಕೊನೆಯಲ್ಲಿ ಅವಳು ಹೇಗೋ ಬೆಂಕಿಯನ್ನು ಭೇದಿಸಿಕೊಂಡು ಹೊರಕ್ಕೆ ಬಂದು ಗಂಡನನ್ನು ಹಿಡಿಯಲು ಇನ್ನಷ್ಟು ವೇಗವಾಗಿ ಓಡಿದಳು. ಆಗ ಅವನು ಇನ್ನೊಂದು ನಿಂಬೆಹಣ್ಣನ್ನು ಹಿಂದಕ್ಕೆಸೆದ. ಇಬ್ಬರ ನಡುವೆ ಒಂದು ದೊಡ್ಡ ಸರೋವರವೆದ್ದು ನೀರು ಉಕ್ಕಿ ಹರಿಯಿತು. ಅಷ್ಟು ಹೊತ್ತಿಗೆ ಓಡಿಬರುತ್ತಿದ್ದ ಕಿನ್ನಾಳಿಗೆ ಏದುಸಿರು ಬಂದು ಸೋತು ಕೆಳಕ್ಕೆ ಬಿದ್ದು 'ಗೊಳೋ' ಎಂದು ರೋದಿಸಿದಳು. ಕೆಲವು ಕ್ಷಣಗಳ ನಂತರ ಮೇಲೆದ್ದು ಈಜುತ್ತ ಕೊಳವನ್ನು ದಾಟಿ ಹೊರಗೆ ಬಂದು ಆಯಾಸದಿಂದ ಮತ್ತೆ ಕೆಳಗುರುಳಿದಳು. ಗಂಡನನ್ನು ಶಪಿಸುತ್ತಾ ಬಿದ್ದು ಮರಣವನ್ನಪ್ಪಿದಳು.

ದೇವರ ದಯದಿಂದ ಫ್ಲೂ ಎಂಬ ಆ ತರುಣ ತನ್ನ ಘೋರ ಅಪರಾಧವನ್ನು ನೆನೆದು ಪಶ್ಚಾತ್ತಾಪದಿಂದ ಮರುಗಿದ. ತನಗೆ ಅಷ್ಟೊಂದು ಉಪಕಾರವೆಸಗಿದ ಆ ನತದೃಷ್ಟ ಹೆಣ್ಣಿಗೆ ತಾನು ಯೋಗ್ಯನಲ್ಲವೆಂದು ದುಃಖಿಸಿದ. ಕೊಳದ ಆಚೆ ಬದಿಯಲ್ಲಿ ಬಿದ್ದಿದ್ದ ಅವಳು ಇನ್ನೂ ಜೀವಂತವಾಗಿರುವಳೆಂದು ಭ್ರಮಿಸಿ ಶೈತ್ಯೋಪಚಾರ ಮಾಡಲು ಹೆಣಗಿ ಸೋತ. ಅವಳ ದೇಹದ ಮೇಲೆ ಬಿದ್ದು ಹೊರಳಾಡಿದ, ತಾನೂ ಸಾವನ್ನಪ್ಪಿದ. ಅವರಿಬ್ಬರ ಮೃತದೇಹಗಳು ಬಹುಕಾಲ ಕೊಳದ ತಡಿಯಲ್ಲೇ ಬಿದ್ದಿದ್ದು ಕಾಲಕ್ರಮೇಣ ಅವೆರಡೂ ಪುರಾಣ ಪ್ರಸಿದ್ಧ ಫ್ಲೂವೋ ಮತ್ತು ಫ್ಲೂ ನಾಂಗ್ ಎಂಬ ದೊಡ್ಡ ಪರ್ವತಗಳಾಗಿ ಮೇಲೆದ್ದು ನಿಂತವು.

ಯಾರು ಬೇಕಾದರೂ ಲುವಾಂಗ್ ಪ್ರಬಾಂಗ್‌ನಿಂದ ಅವುಗಳನ್ನು ಈಗಲೂ ನೋಡಬಹುದು.

*(ಕಾಂಬೋಡಿಯಾ ಕಥಾವಳಿಯಿಂದ)*

**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೨, ಶ್ರವಂತಿ ಪ್ಯಾಲೇಸ್, ೩ನೇ ಅಡ್ಡರಸ್ತೆ, ಸಿ. ಆರ್. ಬಡಾವಣೆ, ಜೆ. ಪಿ. ನಗರ
೧ನೇ ಫೇಸ್, ಬೆಂಗಳೂರು – ೫೬೦ ೦೭೮

## ಸಾದರ ಸ್ವೀಕಾರ

**ಅನುಭಾವದ ಬುತ್ತಿ** *ಪೂಜ್ಯ ಮಹಾದೇವಮ್ಮ ತಾಯಿ*
***ಪುಟ : xvi + ೯೨*** ***ಬೆಲೆ : ರೂ. ೬೦***
**ಬಸವ ಧರ್ಮ ಪ್ರಸಾರ ಸಂಸ್ಥೆ,** ಹಿರೇಮಠ ಸಂಸ್ಥಾನ, ಭಾಲ್ಕಿ – ೫೮೫ ೩೨೫, ಬೀದರ್

**ತೇಜಸ್ವಿ ಪರಿಸರ ಕಥಾಪ್ರಸಂಗ**
*ಮೂಲ ಕಥೆ : ಕೆ. ಪಿ. ಪೂರ್ಣಚಂದ್ರ ತೇಜಸ್ವಿ*
*ನಾಟಕ ರೂಪ : ಅ. ನಾ. ರಾವ್ ಜಾದವ್*
***ಪುಟ : ೮೪*** ***ಬೆಲೆ : ರೂ. ೫೦***

**ಬಾಲಂಕೃತ ಚುಕ್ಕಿ ಧೂಮಕೇತು** *ಬಿ. ಎಸ್. ಶೈಲಜಾ*
***ಪುಟ : ೧೧೨*** ***ಬೆಲೆ : ರೂ. ೮೦***
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ನಂ. ೧೧, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್, ಬೆಂಗಳೂರು – ೫೬೦ ೦೦೧

**ಮುಂಬಯಿ ಕನ್ನಡ ಕಥಾ ಸಾಹಿತ್ಯ – ಒಂದು ಅಧ್ಯಯನ**
*ಡಾ॥ ಮಮತಾ ರಾವ್*
***ಪುಟ : xvi + ೩೫೪*** ***ಬೆಲೆ : ರೂ. ೩೦೦***
**ಕನ್ನಡ ಅಧ್ಯಯನ ವಿಭಾಗ,** ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಮುಂಬಯಿ – ೯೮

**ರವೀಂದ್ರನಾಥ ಠಾಕೂರ್ ಅವರ ವಿಸರ್ಜನ ಮತ್ತು ಇತರ ನಾಟಕಗಳು** *ಅನುವಾದ : ಶ್ರೀನಿವಾಸ ವಿ. ಸುತ್ರಾವೆ*
***ಪುಟ : xvi + ೯೦*** ***ಬೆಲೆ : ರೂ. ೭೫***
**ಚಂದ್ರನಾಥ ಪ್ರಕಾಶನ,** 'ರತ್ನತ್ರಯ' ೮, ೧ನೇ ಮುಖ್ಯರಸ್ತೆ, ರಜತಗಿರಿ, ಧಾರವಾಡ – ೫೮೦ ೦೦೪

**ಮೈಯೇ ಸೂರು ಮನವೇ ಮಾತು** (ಸಂಸ್ಕೃತಿ ಸಾಹಿತ್ಯ ಮತ್ತು ಸಂಶೋಧನೆ) *ಬಸವರಾಜ ಕಲ್ಗುಡಿ*
***ಪುಟ : xvi + ೩೫೬ = ೩೭೦*** ***ಬೆಲೆ : ರೂ. ೨೭೫***

**ಸುಮ್ಮನೆ** (ಸತ್ಯಕಾಮರ ಒಡನಾಟ)
*ಸಮನ್ವಯ : ವೀಣಾ ಬನ್ನಂಜೆ*
***ಪುಟ : xxxii + ೪೧೨ = ೪೪೪*** ***ಬೆಲೆ : ರೂ. ೩೫೦***

**ಪುತ್ರವಾತ್ಸಲ್ಯ** *ವಿಜಯನಾಥ ಶೆಣೈ*
***ಪುಟ : ೨೧೨*** ***ಬೆಲೆ : ರೂ. ೧೫೦***

**ಮಲೆನಾಡ ಗಾಂಧಿ – ಎಚ್. ಜಿ. ಗೋವಿಂದ ಗೌಡ ಒಂದು ಆಪ್ತ ಚಿತ್ರ** *ಗಿರೀಶ ಜಕಾಪುರೆ*
***ಪುಟ : ೨೨೪*** ***ಬೆಲೆ : ರೂ. ೧೫೦***
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಅಭಿನವ,** ೧೭/೧೮–೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ೪೦

**ಅಲೆಮಾರಿ ಮುದುಕ ಥೇಲಿಸ್** (ಮಕ್ಕಳ ನಾಟಕ)
*ನಿಂಗು ಸೊಲಗಿ*
***ಪುಟ : vi + ೨೨ = ೨೮*** ***ಬೆಲೆ : ರೂ. ೨೫***
**ಚಿಲಿಪಿಲಿ ಪ್ರಕಾಶನ,** # ೫೬, ೪ನೇ ಅಡ್ಡರಸ್ತೆ, ಶಿವಾನಂದ ನಗರ, ಧಾರವಾಡ – ೫೮೦ ೦೦೧

**ಬಿಟ್ಟೇನೆಂದರೂ ಬಿಡದೀ ಮಾಯೆ...**(ಪೌರಾಣಿಕ ಕಾದಂಬರಿ – ದ್ರೋಣನ ಆತ್ಮ ಚರಿತ್ರೆ)
*ಉದಯಕುಮಾರ ಹಬ್ಬು*
***ಪುಟ : ೨೬೮ + iv*** ***ಬೆಲೆ : ರೂ. ೨೦೦***
**ಜಾಗೃತಿ ಪ್ರಿಂಟರ್ಸ್,** ನಂ. ೫೬/೧–೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧

**ನನ್ನೊಡಲ ಮಿಹಿರ** (ಕವನ ಸಂಕಲನ)
*ಸಂಗೀತ ರವಿರಾಜ್*
***ಪುಟ : xii + ೬೮ = ೮೦*** ***ಬೆಲೆ : ರೂ. ೫೦***
**ರಚನ ಪ್ರಕಾಶನ,** ನಂ. ೭೯೧/ಎಸ್., ೨೫/೭ನೇ ಅಡ್ಡರಸ್ತೆ, ಹೆಬ್ಬಾಳ ೨ನೇ ಹಂತ, ಮೈಸೂರು – ೧೭

**ಯಕ್ಷ ತರು** (ಲೇಖನ ಸಂಚಯ)
*ಪ್ರೊ॥ ಅಮೃತ ಸೋಮೇಶ್ವರ*
***ಪುಟ : xvi + ೧೩೬*** ***ಬೆಲೆ : ರೂ. ೯೦***
**ಯಕ್ಷಗಾನ ಅಧ್ಯಯನ ಕೇಂದ್ರ,** ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ, ದಕ್ಷಿಣ ಕನ್ನಡ – ೫೭೪ ೧೯೯

**ಕನ್ನಡ ಸಾಹಿತ್ಯ ಪರಂಪರೆ** *ಡಾ॥ ಎಸ್. ಪ್ರಸಾದಸ್ವಾಮಿ*
***ಪುಟ : xxii + ೩೬೨ = ೩೮೪*** ***ಬೆಲೆ : ರೂ. ೨೦೦***
**ಕಣ್ವ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ನಂ. ೭೭೭, ನೆಲಮಹಡಿ, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ – ೫೬೦ ೦೪೦




# ಬಡತನದ ರೇಖೆಯ ಬವಣೆ

ಅನಂತ ಕಲ್ಲೋಳ

"ಅಭಿನವ ಭಾರತದಲ್ಲಿ ದ್ವೈತ ಸಿದ್ಧಾಂತ ಒಂದು ಬಲು ರಾದ್ಧಾಂತ ನಡೆಸಿದೆ ಅಂಥಾಂಗಾಯ್ತು" ಎಂದೆನ್ನುತ್ತ ಗೆಳೆಯ ಗುಂಡಣ್ಣ ತನ್ನ ಕೈಲಿದ್ದ ಪತ್ರಿಕೆಯನ್ನು ತಳ್ಳಿದ. ನಾನು ಮುಖ ಕ್ಷೌರ ಮಾಡಿಕೊಳ್ಳುವ ಸಂದರ್ಭದಲ್ಲಿಯೇ ಆತ ಯಾವುದೋ ಸುದ್ದಿಯನ್ನು ಓದಿಕೊಂಡು ಯಾರನ್ನೋ ನುಣ್ಣಗೆ ಬೋಳಿಸುವ ಉಮೇದಿನಲ್ಲಿ ಇದ್ದಾನೆ ಎಂಬುದು ಅರಿವಾಯ್ತು. ನಾನು ನನ್ನ ಕೆನ್ನೆಗೆ, ಗದ್ದಕ್ಕೆ ಗಡ್ಡ ಬೋಳಿಸುವ ರಾಳ ಯಾನೆ ಶೇವಿಂಗ್ ಪೇಸ್ಟ್ ಸವರಿ ಕಿರು ಉಡುಗೋಲಿನಿಂದ ಯಾನೆ ಬ್ರಷ್‌ದಿಂದ ಹದವಾಗಿ ಸಾರಿಸುವ ಮಣಿಹದಲ್ಲಿ ನಿರತನಾಗಿದ್ದರಿಂದ ಪತ್ರಿಕೆಯನ್ನು ಎತ್ತಿಕೊಂಡು ವಿಷಯವೇನೆಂಬುದನ್ನು ನೋಡುವ ಎತ್ತುಗಡೆಗೆ ಹೋಗದೆ ಆತನನ್ನುದ್ದೇಶಿಸಿ, "ಏನು ವಿಶೇಷ ಸಂಗತಿಯನ್ನು ಕಂಡೀ, ಪೇಪರಿನಾಗ ? 'ಅಭಿನವ್ ಭಾರತ್' ಎಂಬ ಸಂಘಟನೆಯ ಕುರಿತೇನು ?" ಎಂದು ಕೇಳಿದೆ. ಮೊನ್ನೆ ಪುಣೇದಾಗ ನರೇಂದ್ರ ದಾಭೋಳ್ಕರ್‌ರನ್ನು ಗುಂಡಿಟ್ಟು ಕೊಂದವರು 'ಅಭಿನವ್ ಭಾರತ್' ಎಂಬ ಸಂಸ್ಥೆಯವರು ಎಂಬ ವದಂತಿ ಹರಡಿತ್ತಲ್ಲ; ಆ ಸಂಘಟನೆಯನ್ನು ಕಟ್ಟಳೆ ಯಿಂದ ಪ್ರತಿಬಂಧಿಸಬೇಕು ಎಂದು ಲೋಕಸಭೆಯಲ್ಲಿ ಹಲ ಸದಸ್ಯರು ಒತ್ತಾಯಿಸಿದ್ದನ್ನು ಬಾನುಲಿಯ ಸುದ್ದಿಯಲ್ಲಿ ಕೇಳಿದ್ದೆ.

"ಉಹ್ಞು, ಹ್ಞೂಂ ಅದರ ಬಾಬತ್ತಲ್ಲ" ಎಂದು ಚುಟುಕಾಗಿ ಉತ್ತರಿಸಿದ ಗುಂಡಣ್ಣ ಗುಟ್ಕಾದ ಹುಡಿಯನ್ನು ಬಾಯಿಗಿಕ್ಕಿಕೊಂಡ.

"ಹಾಂಗಾಂದ್ರ ದ್ವೈತ ಸಿದ್ಧಾಂತದ ರಾದ್ಧಾಂತ ಅಂತ ಏನೋ ಅಂದಿಯಲ್ಲ..." ಮೊಗದ ಮೇಲೆ ನೊರೆ ಪೇರಿಸುತ್ತ ಮತ್ತೆ ಪ್ರಶ್ನೆಯೊಂದನ್ನು ಎಸೆದೆ.

"ಪಿಚಕ್" ಎಂದು ಗುಂಡಣ್ಣ ಗುಟ್ಕಾದ ರಸವನ್ನು ಕೋಣೆಯ ಕಿಟಕಿಯಿಂದ ರಸ್ತೆಗೆ ತೂರಿದ. ಸದ್ಯ ಅಲ್ಲಿ ಯಾರೂ ಆ ವೇಳೆಯಲ್ಲಿ ಹಾಯ್ದಿರಲಿಲ್ಲ; ರಸ್ತೇದ ಮೇಲೆಯೇ ಥಳೀ ಹಾಕಿದಂಗಾಯ್ತು. ಆತನಿಗೆ ಮಾತನಾಡಲು ಬಾಯಿ ಸನ್ನದ್ಧವಾಯ್ತು, ಬಾಯ್ಬಿಟ್ಟ:

"ದ್ವೈತ ಸಿದ್ಧಾಂತ ಅಂತಂದ್ರ ಎ.ಪಿ.ಎಲ್. ಮತ್ತು ಬಿ.ಪಿ.ಎಲ್. ಆ ಸಂಕ್ಷೇಪಾಕ್ಷರಗಳನ್ನು ವಿಸ್ತರಿಸಿ ಹೇಳಬೇಕಂದ್ರ, ಬಿಲೋ ಪಾವರ್ಟಿ ಲೈನ್ ಮತ್ತು ಅಬೌ ಪಾವರ್ಟಿ ಲೈನ್..."

"ಫೈನ್ ಫೈನ್, ಆ ದ್ವಂದ್ವ ಸಿದ್ಧಾಂತಗಳ ಬಗ್ಗೆ ಭಾಳ ಭಾಳ ಚರ್ಚೆ ನಡೆದದಪ್ಪ." ನಾನು ಗೆರೆ ಎಳೆದಂತೆ ನನ್ನ ಗದ್ದದ ಒಂದು ಪಾರ್ಶ್ವದ ಮೇಲೆ ಕತ್ತಿಯ ಅಲಗನ್ನು ಸಾವಧಾನದಿಂದ ಹರಗಿದೆ, ಒಂದು ಲೈನ್‌ದಾಗ.

"ಬಡತನದ ರೇಖೆಯನ್ನು ನಿಖರವಾಗಿ ನಮೂದಿಸಲಿಕ್ಕೆ ನಮ್ಮ ಅರ್ಥಶಾಸ್ತ್ರಜ್ಞರು ಹೆಣಗಾಡಲಿಕ್ಕೆ ಹತ್ತ್ಯಾರಂತ..." ಗುಂಡಣ್ಣ ವಿಷಯದ ಸೂತ್ರೋವಾಚ ಮಾಡಿದ.

"ಛೇ ಛೇ; ಅದು ಭಾಳ ಕಷ್ಟದ್ದು ಅದs ನೋಡು. ಒಂದು ವೇಳ್ಯಾ ಮ್ಯಾಕ್‌ಮೋಹನ್ ಲೈನ್, ಡ್ಯುರಾಂಡ್ ಲೈನ್ ಮೊದಲಾದ ಅಂತರರಾಷ್ಟ್ರೀಯ ಗಡಿಗಳ ತಂಟೆ, ತಕರಾರು, ಸಮರಗಳು ಸಮಾರೋಪಗೊಂಡರೂ ನಮ್ಮಲ್ಲಿಯ ಬಡತನ ರೇಖೆಯ ಸಮಸ್ಯೆಯ ಕಗ್ಗಂಟು ಮಾತ್ರ ಉಳಿದೇ ಇರ್ತದೇನೋ..." ಎಂದು ನಾನು ಪ್ರತಿಕ್ರಿಯಿಸುತ್ತ ಈ ಕಡೆಯ ಕೆನ್ನೆಯ ಮೇಲೆ ರೇಝರ್‌ದ ಲೈನ್ ಗೀಚಿದೆ. ಸ್ವಲ್ಪ ಆತುರದಿಂದ ಗೀಚಿದೆನೇನೋ. ತುಸ ಗಾಯವಾಗಿ ರಕ್ತ ಒಸರಿತು. ಮತ್ತೆ ಬ್ರಷ್‌ದಿಂದ ಆ ಭಾಗದಲ್ಲಿ ಸಾರಣೆ ಮಾಡಿ ರಕ್ತಕ್ರಾಂತಿಯನ್ನು ಶಮನಗೊಳಿಸಬಯಸಿದೆ.

"ಏ ರಾಮಣ್ಣ; ಬಡತನದ ರೇಖೆ, ಬಡತನ ರೇಖೆ ಎಂಬ ಅರಿಸಮಾಸದಿಂದಾಗಿಯೇ ದೋಷ ವಾಗೋದು. ಚೊಕ್ಕ ಕನ್ನಡದ ಬಡತನಕ್ಕ ಸಕ್ಕದದ ಸಂಕೋಲೆ ಯಾಕ ಬಿಗಿದಿ ನಡುವೆ ? ರೇಖೆ, ರೇಷೆ ಎಂಬುವು ಸಂಸ್ಕೃತ ಪದಗಳು; ಗೆರೆ ಅಂತ ಅನ್ನು..." ಬರೆ ಎಳೆದವರಂತೆ ಗುಂಡಣ್ಣ ಬಿಸಿ ತಟ್ಟಿಸಿದ.

"ಖರೇ ಅದs ನಿನ್ನ ಮಾತು. ಗೆರೆ ಅಂತ ಜೋಡಿಸಿದರೆ ಬಡತನದ 'ಗೆರೆ' ಅಂಬೂದು ಮತ್ತಷ್ಟು ಮಸಕು ಆದೀತಲ್ಲ ಅಂತ 'ರೇಖೆ' ಸಂಗಾತಿ ಮಾಡಿಧಾಂಗ ಕಾಣ್ತದೆ. ರೇಖಾ ಎಂದೊಡನೆ ಕಣ್ಗೆ ಕೋರೈಸುತ್ತದಲ್ಲs !" ಎಂದೆನ್ನುತ್ತ ನನ್ನ ಗಡ್ಡವನ್ನು ಕೆರೆಯುವ ಕಾಯಕ ಮುಂದುವರಿಸಿದೆ.

"ನೀನು ಇನ್ನೂ ರೇಖಾ, ದೀಪಿಕಾ ಎಂದು ಸಿನಿಮಾ ನಟಿಯರನ್ನು ನೆನೆಸಿಕೊಳ್ಳುತ್ತ ಕಾಲೇಜು ರೋಡಿನೊಳಗ ಹುಡಿಗೇರ ಮ್ಯಾಲ ಲೈನ್ ಹೊಡೆಯೂದಕ್ಕ ಪಟಾಯಿತ್‌ನಾಗಿದ್ದಿ; ಈಗ ನಾನ ಹೇಳ್ತಿದ್ದುದು ಪಾವರ್ಟಿ ಲೈನ್‌ದ ಬಗ್ಗೆ. ಗಂಡಸರು ಗಡ್ಡ ಬೋಳಿಸಿಕೊಳ್ಳೋ ಹೊತ್ತಿನಾಗ ಮತ್ತು ಹೆಂಗಸರು ಸ್ನಾನಾ ಮಾಡುವ ಕಾಲಕ್ಕ ಭಾಳ ರೋಮ್ಯಾಂಟಿಕ್ ಮೂಡ್‌ನಾಗ ಇರ್ತಾರ ಅಂಬೂದು ಎಲ್ಲರಿಗೂ ತಿಳಿದ ಸಂಗತಿಯೇ..." ಗುಂಡಣ್ಣ ಝಾಡಿಸಿದ.

"ಆಯ್ತಪ್ಪಾ ಮಾರಾಯ; ಗೆರೇನೂ ಬೇಡ, ರೇಖಾನೂ ಬೇಡ, ಪಾವರ್ಟಿ ಲೈನ್‌ದ ರಾದ್ಧಾಂತ ಏನು ?" ನಾನು ನನ್ನ ಕಷ್ಟದ ಕೊನೆಯ ಹಂತಕ್ಕ ಬಂದದ್ದರಿಂದ ಮುಗಿತಾಯದ ಮಂಗಳಾರ್ತಿಗಾಗಿ ಮುಂದಾಗಿದ್ದೆ.

"ನಮ್ಮ ಸರಕಾರಕ್ಕ ಸಮಯಾನುಸಾರ ಸಮ ಯೋಚಿತವಾದ ಅಂಕಿ-ಸಂಖ್ಯೆಗಳನ್ನು ಸರಿಜೋಡಿಸಿ, ಹೊಂದಿಸಿಕೊಡುವ ಸಮಿತಿಗಳು ಬೇಕಾಗ್ತದ. ಹೀಗಾಗಿ ವಿಭಿನ್ನ ಯೋಜನೆಗಳ ಸಂಬಂಧದಲ್ಲಿ ನಿಯೋಜಿಸಲಾಗಿದ್ದ ಸಮಿತಿಗಳು ಪಾವರ್ಟಿ ಲೈನ್‌ಅನ್ನು ಸಂದರ್ಭಕ್ಕ ತಕ್ಕಹಾಂಗ ಎಳೆದಾಡ್ತಾರ. ಗ್ರಾಮೀಣ ಭಾಗದವರಿಗೆ ದಿನಕ್ಕೆ ಇಪ್ಪತ್ತಾರು ರೂಪಾಯಿಗಳ ಕೆಳಗೆ ಆದಾಯವಿದ್ದಲ್ಲಿ ಅವರು ಬಿಲೋ ಪಾವರ್ಟಿ ಲೈನ್, ನಗರವಾಸಿಗಳಿಗೆ ಆ ಲೈನ್‌ದ ಪರಿಮಿತಿ ದಿನಕ್ಕೆ ಮುವ್ವತ್ನಾಲ್ಕು ರೂಪಾಯಿ ಗಳಿಗಿಂತ ಕಡಮೆ ಇದ್ದರೆ ಸಿಗ್ತದಂತೆ."

"ಈ ದ್ವೈತ ಸಿದ್ಧಾಂತ ಸಾಧು ಅದs ಅಲ್ಲs; ಅದಕ್ಕ್ಯಾಕ ನಿನ್ನ ತಕ್ರಾರು ?" ನನ್ನ ಮುಖ ಕ್ಷೌರ ಕರ್ಮ ಮುಗಿದಿತ್ತು. ಮುಖ ತೊಳ್ಕೊಂಡು ಟವೆಲ್ಲಿನಿಂದ ಒರೆಸಿಕೊಳ್ಳುತ್ತಿದ್ದಾಗ ಕೇಳಿದೆ.

"ಆದ್ರ ಪ್ರಚಲಿತ ಪಂಚವಾರ್ಷಿಕ ಯೋಜನೆಯು ಕೊನೆಗಾಣುವ ಕಾಲದಾಗ ಹಳ್ಳಿಗರನೇಕರ ಆದಾಯ ದಿನಕ್ಕೆ ಇಪ್ಪತ್ತಾರು ರೂಪಾಯಿಗಳ ಗಡಿ ದಾಟಿ ಇಪ್ಪತ್ತೇಳು ಆಗಿದೆಯಂತೆ. ಭಾರತದಲ್ಲಿ ಹದಿನಾಲ್ಕು ಕೋಟಿ ಬಡವರು ಒಮ್ಮೆಲೆ ಬಡತನದ ರೇಖೆಯನ್ನು, ಅಲ್ಲಲ್ಲs ಸಾರೀ, ಮತ್ತೂ ಅಲ್ಲಲsss ಡಬಲ್ ಸ್ಸಾರಿ, ಪಾವರ್ಟಿ ಲೈನ್‌ದ ಮೇಲ್ಗಡೆ ನೆಗೆದಿದ್ದಾರೆ. ಇಷ್ಟೊಂದು ದೊಡ್ಡ ಸಾಧನೆ ಇನ್ನಾವ ಪಂಚವಾರ್ಷಿಕ ಯೋಜನೆಯ ಕಾಲಾವಧಿಯಲ್ಲೂ ಆಗಿರಲಿಲ್ಲ ಎಂದು ಕೊಚ್ಚಿಕೊಂಡಿದ್ದಾರಂತೆ ಸರಕಾರೀ ವಕ್ತಾರರು. ಒಂದs ರೂಪಾಯಿಯ ನೆಗೆತದ ಆದಾಯದಿಂದ ಕೋಟಿ ಕೋಟಿ ಬಡವರ ಗರೀಬಿ ಹಟಾವೋ ಯಶಸ್ವೀ ಆಯ್ತಲ್ಲ!" ಗುಂಡಣ್ಣ ಉಪರೋಧಿಕವಾಗಿ ಟಿಪ್ಪಣಿಸಿದ.

"ಅಂಕಿ-ಸಂಖ್ಯೆಗಳ ಮಾಯಾಜಾಲ ಬೀಸಿ ಜನರನ್ನು ಮೋಸಗೊಳಿಸಿ ಬಲಿ ಹಾಕುವುದು ಸದಾಕಾಲಕ್ಕೂ ನಡೆಯುವಂತಹುದೇ! 'ವರದಿ ನಿವೇದನೆಗಾಗಿ (ರಿಪೋರ್ಟ್ ಓರಿಯೆಂಟೆಡ್), ಅಭಿಪ್ರೇತ ಫಲಸಾಧನೆಗಾಗಿ (ರಿಸಲ್ಟ್ ಓರಿಯೆಂಟೆಡ್) ಅಲ್ಲs, ನಮ್ಮ ಕಾಯಕವೆಲ್ಲ' ಎಂಬ ಧೋರಣೆಯೇ ಸಾರ್ವತ್ರಿಕವಾಗಿ ಕಂಡುಬರುತ್ತದೆ. ಹೀಗಾಗಿ ಪಾವರ್ಟಿ ಲೈನ್ ಎಂಬುದು ಹಾಗೂ ಹೀಗೂ, ಬೇಕಾಬಿಟ್ಟಿ ಎಳೆಯುವ ಚಾಳಿ ಚಾಲ್ತಿಯಲ್ಲಿದೆ. ಅದಕ್ಕೆ ಅಧಿಕೃತತೆಯ ಒತ್ತಾಸೆ ಒದಗಿಸಲೆಂದು ವಿವಿಧ ವಿಧಾನಗಳನ್ನು ವಿಶದಪಡಿಸುವ, ಪರಸ್ಪರ ವಿರೋಧಿ ಎಂದೆನಿಸುವ ತೆರನಲ್ಲಿ ಬೇರೆ ಬೇರೆ ಅರ್ಥಶಾಸ್ತ್ರಜ್ಞರು ಬೇರೆ ಬೇರೆ ಬಗೆಯ ವಿಧಾನ ಗಳನ್ನು ನಮೂದಿಸಿದ್ದು ಅನುಕೂಲವಾಗುತ್ತದೆ..." ಎಂದು ನಾನಂದೆ.

"ಸರಿಯಾಗಿ ಹೇಳಿದೆ ನಡಿ; ನಾಷ್ಟಾ ಮಾಡಲಿಕ್ಕೆ ಹೋಗುಣಂತ. ದಾರ್‍ಯಾಗ ಎಷ್ಟು ಬೇಕಾದರೂ ಲೈನ್ ಹೊಡಿ, ಡಿಕ್ಕಿ ಹೊಡಿ, ಕಣ್ಣು ಹೊಡಿ..." ಗುಂಡಣ್ಣ ಎದ್ದ.

ನಾನೂ ಹೊರಬೀಳಲು ಸಿದ್ಧನಾಗಬೇಕಾಯ್ತು. "ನನ್ನ ದೈನಿಕ ಆದಾಯ ತಲಾ ಮುವ್ವತ್ಮೂರು ರೂಪಾಯಿ ಅರವತ್ತೇಳು ಪೈಸಾ ಅದsಪಾss ಗುಂಡಣ್ಣ. ನೀ ಹೇಳಿದಂಥ ಲೈನ್ ನನ್ನಂಥವರಿಗೆ ವೈನಲ್ಲ" ಎಂದು ಗೊಣಗಿದೆ.

"ವಚನೇಷು ಕಿಂ ದರಿದ್ರತಾ ? ಅಂತ ಸುಭಾಷಿತಕಾರ ಹೇಳಿಲ್ಲs...? ಮಾತಿಗೆ ಬಡತನದ ರೇಖೆಯ ಶಾಪವಿಲ್ಲ. ಮಾಡಿ ತೋರಿಸೋದು ಆಗದಿದ್ದರೂ ಆಡಿ ತೋರಿಸಲು ಹರಕತ್ತಿಲ್ಲ. ಅದಕ್ಕs ನಮ್ಮ ದೇಶದಾಗ ನಾನಾ ವಿಧದ ಲೈನ್ ಹೊಡೆಯುವ ರಾಷ್ಟ್ರೀಯ ಚಾಳಿ ಹಬ್ಬೇದ. ಅದು ನಮ್ಮ ಜನ್ಮಸಿದ್ಧ ಹಕ್ಕು. ಏಳಿ, ಎದ್ದೇಳಿ, ಎಳೀತಾ ಇರಿ ಗೆರೆಗಳನ್ನು ಯದ್ವಾ ತದ್ವಾ" ಎಂದು ಹೇಳುತ್ತ ಗುಂಡಣ್ಣ ನನ್ನನ್ನು ಎಳೆದುಕೊಂಡು ನಡೆದ ಕೃಷ್ಣವಿಲಾಸ ಹೊಟೇಲಿಗೆ. ಬಡತನದ ಕುರಿತ ನಮ್ಮ ಚರ್ಚೆ 'ಎಬಡತನ ವಾಯಿತೆ ?' ಎಂದು ಸಂದೇಹ ಸುಳಿಯಿತು; ಆದರೆ ಪರ್ಯಾಯವಿರಲಿಲ್ಲ; ಗುಂಡಣ್ಣ ನನ್ನ ಕೈ ಹಿಡಿದು ಎಳೆಯುತ್ತ ಸಾಗಿದ್ದ. ಕೃಷ್ಣವಿಲಾಸದ ಬದಲು ರಸ್ತೆ ಪಕ್ಕದ ದರ್ಶಿನಿಗೆ ಹೋದರೆ ವೈನ ಆಗಬಹುದಲ್ಲ ಎಂದು ಮನದಲ್ಲಿಯೇ ಲೈನ್ ಹೊಡೆದೆ.

**ಅನಂತ ಕಲ್ಲೋಳ**
'ರಮಾರಮಣ', ನಂ. ೫೦೬, ಕುಲಕರ್ಣಿ ಬೀದಿ
ಬೆಳಗಾವಿ - ೫೯೦ ೦೦೨




## ನಾ ನಿನ್ನ ಕಂಡ ದಿನ...

**ನಾ** ನಿನ್ನ ಕಂಡ ದಿನ
ರವಿ ಇನ್ನಷ್ಟು ಪ್ರಖರನಾದ
ಜಗತ್ತು ಇನ್ನಷ್ಟು ಹಸಿರಾಯಿತು
ನೀನು ನನ್ನ ಹೃದಯದ
ಗುಪ್ತ ಕೋಣೆಗಳೊಳಗೆ
ಬೆಳಗಿದೆ ದೀಪ
ಅಂದಿನಿಂದ ನಾವು ಬೇರೆಯಾಗಿಲ್ಲ

ನಾ ನಿನ್ನ ಕಂಡ ದಿನ
ಕಲಿತೆ
ನಿನ್ನ ಕಣ್ಣ ಭಾಷೆ
ನಿನ್ನ ನಗೆಯ ಶ್ರುತಿ
ನಿನ್ನ ನಿಡುಸುಯಿಲ ಸಂಗೀತ
ನೀನು ಹೊತ್ತಿಸಿದ ಕಿಡಿ ಜ್ವಾಲೆಯಾಯಿತು
ತಣಿಸಿತು ನಿನ್ನ ದನಿ
ಕಾವ್ಯದ ಪಲ್ಲವಿಯಾಗಿ

ನಾ ನಿನ್ನ ಕಂಡ ದಿನ
ನನ್ನಾತ್ಮ ಜನಿಸಿತು ಮತ್ತೆ
ನವೀಕರಿಸಿಕೊಂಡಿತು ವಿಶ್ವ
ಸೃಷ್ಟಿ ಕಂಡಿತು ಸುಧಾರಣೆ

ನಾ ನಿನ್ನ ಕಂಡ ದಿನ
ಹಿಡಿದೆ ನೀನು ನನ್ನ ಕೈಗಳನ್ನು
ನಿನ್ನ ಕೈಗಳಲ್ಲಿ
ಅಂದಿನಿಂದ ನಾವು ಬೇರೆಯಾಗಿಲ್ಲ

ಆಂಗ್ಲ ಮೂಲ : **ಟೆರನ್ ಅಯಂ** ಕನ್ನಡಕ್ಕೆ : **ಬಿಂಡಿಗನವಿಲೆ ಭಗವಾನ್**
೩೬ 'ಬಿ', ೯ನೇ ಮುಖ್ಯರಸ್ತೆ, ಬನಶಂಕರಿ ಮೊದಲ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦



# ಅಮರ ಗಾಯಕ ಮನ್ನಾ ಡೇ

**ಕೆ. ಸಿ. ರಮೇಶ್**

೧೯೫೦ರ ದಶಕದಿಂದ ಚಲನಚಿತ್ರಗಳನ್ನು ನೋಡುತ್ತಿರುವವರು, ರೇಡಿಯೋ ಆಲಿಸುತ್ತಿರುವವರು ಚಿತ್ರಗೀತೆಗಳ ಬಗ್ಗೆ ಒಲವಿರುವ ಯಾರಾದರೂ ಸಹ ಈ ಕೆಲವು ಗೀತೆಗಳನ್ನು ಕೇಳಿರಲೇಬೇಕು :

"ಸುರ್ ... ನಾ ... ಸಜೇ ... ಕ್ಯಾ ಗಾವೂಂ ... ಮೈಂ...", "ಏ ಮಾಲೀಕ್ ತೇರೆ ಬಂದೇ ಹಂ ...", "ತುಂ ಗಗನ್ ಕೀ ಚಂದ್ರಮಾ ಹೋ ...", "ಬಾಜೂ ... ಸಂಘ್ರೋ ಇಶಾರೇ ... ಹಾರನ್ ಪುಕಾರೇ ... ಪಂ ಪಂ ಪಂ...", "ತೂ ಛುಪೀ ಹೈ ಕಹಾಂ ... ಮೈ ತಡಪತಾ ಯಹಾಂ ...", "ರಾತ್ ಗಯೀ ... ಫಿರ್ ದಿನ್ ಆತಾ ಹೈ ...", "ಮುಡ್ ಮುಡ್ ಕೆ ನ ದೇಖ್ ಮುಡ್ ಮುಡ್ ಕೆ ...", "ಪ್ಯಾರ್ ಹುವಾ ಇಕರಾರ್ ಹುವಾ ಹೈ ...", "ಆಜಾ ಸನಂ ಮಧುರ ಚಾಂದನೀ ಮೆ ಹಂ ...", "ಯೇ ರಾತ್ ಭೀಗೀ ಭೀಗೀ ...", "ಮಾಮ ... ಓ ಮಾಮ ... ಓ ಮಾಮ ಮಾಮ ಮಾಮಾ ...", "ಚುನರೀ ಸಂಭಾಲ್ ಗೋರಿ ... ಉಡೀ ಚಲೀ ಜಾಯೆರೇ ...", "ಆವೋ ಟ್ವಿಸ್ಟ್ ಕರೇಂ ... ಜಿಂದಗೀ ಹೈ ಯಹೀ ...", "ನಾ ಚಾಹೂಂ ಸೋನಾ ಚಾಂದಿ ... ನಾ ಚಾಹೂಂ ಹೀರಾ ಮೋತಿ ...", "ಯಾರೀ ಹೈ ಇಮಾನ್ ಮೇರಾ ... ಯಾರ್ ಮೇರೀ ಜಿಂದಗೀ...", ಮಲೆಯಾಳಿ ಭಾಷೆಯ 'ಚೆಮ್ಮೀನ್' ಚಿತ್ರದ "ಮಾನಸ ಮೈನ ... ವರುಂ ...", ಕನ್ನಡ ಚಿತ್ರಗಳ "ಕುಹು ಕುಹೂ... ಎನ್ನುತ ಹಾಡುವ ಕಿನ್ನರ ಕಂಠದ ...", 'ಕಲ್ಪವೃಕ್ಷ' ಚಿತ್ರದ "ಸತ್ಯಮೇವ ಜಯತೇ ..."

– ಅದೆಂತಹ ವೈವಿಧ್ಯಮಯ ಹಾಡುಗಳು! ಎಲ್ಲವೂ ಮನ್ನಾ ಡೇ ಹಾಡಿರುವ ಹಾಡುಗಳೇ! ಎಲ್ಲದರಲ್ಲೂ ಅವರದೇ ಛಾಪು. ಶಾಸ್ತ್ರೀಯ ಆಧಾರಿತ ಹಾಡುಗಳಲ್ಲಂತೂ ಅವರದೇ ಸಂಗೀತಮಯ ಗತ್ತು!

"ತರ್ಹಾ .. ತರ್ಹಾ .. ನಾಚ್ ದಿಖಾನಾ ಯಹಾಂ ಪಡ್ತಾ ಹೈ ...! ಹೀರೋ ಸೆ ಜೋಕರ್ ಬನ್‌ಜಾನಾ ಪಡ್ತಾ ಹೈ!"

– ಇದು 'ಮೇರಾ ನಾಮ್ ಜೋಕರ್' ಚಿತ್ರದ "ಏ ಭಾಯ್, ಜರಾ ದೇಖ್ ಕೆ ಚಲೋ ..." ಹಾಡಿನ ಎರಡು ಸಾಲುಗಳು. ಬಾಲಿವುಡ್‌ನ, ಅಷ್ಟೇಕೆ ಇಡೀ ಚಿತ್ರರಂಗದ ಕತೆಯೇ ಅಷ್ಟು! ರಾಜ್‌ಕಪೂರ್ ಮತ್ತು ಸಂಗೀತ ನಿರ್ದೇಶಕರಾದ ಶಂಕರ್ –ಜೈಕಿಷನ್ ಮನ್ನಾ ಡೇ ಅವರಿಂದ ಈ ಹಾಡು ಹಾಡಿಸಿ ಆತನೊಬ್ಬ ಸ್ಟಾರ್ ಗಾಯಕನಲ್ಲವೆಂಬಂತೆ ಸರಳವಾಗಿಯೇ ಇದ್ದ ಮನ್ನಾ ಡೇ ಅವರಿಗೇ ಸ್ವತಃ ತನ್ನ ಸಂಗೀತ ಪಯಣದಲ್ಲಿ ಹೇಗಿರಬೇಕಿತ್ತು ಅಥವಾ ಹೇಗಿರಬೇಕು ಎಂದು ತಿಳಿಸಿದರೇನೋ ಅನ್ನಿಸುತ್ತದೆ. ಆದರೆ, ಆ ವೇಳೆಗಾಗಲೇ ಮನ್ನಾ ಡೇ ತಮ್ಮ ಸಂಗೀತ ಜೀವನದಲ್ಲಿ ಮೂರು ದಶಕದಷ್ಟು ಕಾಲ ಕಳೆದಿದ್ದರು ಮತ್ತು ಇಡೀ ಭಾರತದ ಸಿನೆಮಾ ಸಂಗೀತ ವಲಯದಲ್ಲಿ ಅವರ ಹೆಸರು ಚಿರಪರಿಚಿತವಾಗಿತ್ತು. ತಾನೊಬ್ಬ ವಿಶಿಷ್ಟ ಹಾಗೂ ಸಮರ್ಥ ಗಾಯಕನೆಂದು ಆದಾಗಲೇ ಅವರು ನಿರೂಪಿಸಿದ್ದರು. ಆ ವೇಳೆಗೆ ಸುಮಾರು ೩ ಸಾವಿರದಷ್ಟು ಹಾಡುಗಳನ್ನು ಹಾಡಿದ್ದರು. ಎಲ್ಲಾ ಪ್ರಸಿದ್ಧ ಗಾಯಕಿಯರ ಜೊತೆ ಹಾಡಿದ್ದರು. ಕೆಲವು ಚಿತ್ರಗಳಿಗೆ ಸಂಗೀತ ಸಂಯೋಜನೆಯನ್ನೂ ಮಾಡಿದ್ದರು. ಕಲ್ಕತ್ತಾದಲ್ಲಿ ಒಳ್ಳೆಯ ಕುಸ್ತಿಪಟುವಾಗಿದ್ದು, ಜೊತೆಗೆ ಸಂಗೀತವನ್ನೂ ಕಲಿಯುತ್ತಿದ್ದ ಯುವಕ ಮನ್ನಾಡೇ ಕಾರಣಾಂತರದಿಂದ ಸಂಗೀತ ಕ್ಷೇತ್ರದಲ್ಲೇ

**ಚಲನಚಿತ್ರ ಸಂಗೀತದಲ್ಲಿ ಎಲ್ಲಾ ರೀತಿಯ ವೈವಿಧ್ಯಮಯ ರಸಾನುಭಾವಗಳಿಗೆ ಧ್ವನಿಯಾಗಿದ್ದವರು ಮನ್ನಾ ಡೇ. ಸಾಮಾನ್ಯ ಗಾಯಕರು ಹಾಡಲಾಗದಂತಹ ಕ್ಲಿಷ್ಟಕರವಾದ ಹಾಗೂ ವಿಶೇಷ ಮಾಧುರ್ಯಪೂರಿತ ಹಾಡುಗಳಿಗೆ ಮನ್ನಾ ಡೇಯವರ ಕಂಠಸಿರಿಯೇ ಅಗತ್ಯವಾಗಿತ್ತು. ಅವರು ಹಾಡಿರುವ ಬಹಳಷ್ಟು ಗೀತೆಗಳು ಯಾವುದೇ ಗಾಯಕರಿಗೆ ಸವಾಲಾಗಿದ್ದು, ಚಿರಸ್ಥಾಯಿಯಾಗಿ ನಿಲ್ಲುವಂತಹವು.**

ಮುಂದುವರಿಯಲು ನಿರ್ಧರಿಸಿದರೆನ್ನಿ. ಆ ವೇಳೆಗೆ ಬೊಂಬಾಯಿಯಲ್ಲಿ ಸಿನೆಮಾ ಸಂಗೀತ ಕ್ಷೇತ್ರದಲ್ಲಿದ್ದು, ಸಂಗೀತ ನಿರ್ದೇಶನ ಮತ್ತು ಗಾಯನ ಕಲಾವಿದರಾಗಿದ್ದ ಚಿಕ್ಕಪ್ಪ ಕೆ. ಸಿ. ಡೇ ಅವರ ಆಶ್ರಯಕ್ಕೆ ಬಂದರು. ಆಗ ಆರಂಭವಾಯಿತು ಇವರ ಚಲನಚಿತ್ರಗೀತೆ ಗಾಯನದ ಜೀವನ ಪಯಣ.

ಇಷ್ಟಾದರೂ ಚಿತ್ರ ಸಂಗೀತ ಇಷ್ಟಪಡುವವರು, ಸಾಮಾನ್ಯ ಕೇಳುಗರು ಮತ್ತು ಚಿತ್ರಗೀತೆಗಳ ಕಾರ್ಯಕ್ರಮ ನಡೆಸುವವರ ಮೊದಲ ಆಯ್ಕೆ ಮತ್ತು 'ಪಾಪ್ಯುಲರ್' ಎಂಬ ಮಾನದಂಡದಲ್ಲಿ ಮನ್ನಾ ಡೇ ಅವರು ಮೊದಲಿಗರಾಗಿರಲಿಲ್ಲ. ಇದೊಂದು ವಾಸ್ತವಾಂಶದಿಂದ ಕೂಡಿದ ಸಾರ್ವತ್ರಿಕ ಅಭಿಪ್ರಾಯ. ಮನ್ನಾ ಡೇ ಅವರ ವಂಶವೃಕ್ಷವನ್ನು, ಅವರ ಗುರುಪರಂಪರೆಯನ್ನು, ಅವರು ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದ್ದನ್ನು ಅಥವಾ ತಮ್ಮ ಸಂಗೀತದ ಬದುಕನ್ನು ಕಟ್ಟಿ ಬೆಳೆಸಿಕೊಳ್ಳಲು ಯಾರ್‍ಯಾರ ಬಳಿ ಶ್ರಮಿಸಿದರು ಎಂಬುದನ್ನು ತಿಳಿಸುವುದು ಈ ಲೇಖನದ ಉದ್ದೇಶ ಅಲ್ಲ. ಪ್ರಾಸಂಗಿಕವಾಗಿ ಆ ಕೆಲವು ಅಂಶಗಳು ಇಣುಕುಹಾಕಬಹುದು. ಎಲ್ಲಾ ವಿವರಗಳೂ ನಮಗೆ ಅಗತ್ಯಕ್ಕಿಂತಲೂ ಹೆಚ್ಚಾಗಿ ಅಂತರ್ಜಾಲದಲ್ಲಿ ದೊರೆಯುತ್ತವೆ.

ಚಿತ್ರರಂಗದಲ್ಲಿ ಪ್ರಸಿದ್ಧಿ ಪಡೆದ ಉನ್ನತ ಮಟ್ಟದ ಗಾಯಕರುಗಳ ಪರಂಪರೆಯನ್ನು ಅವಲೋಕಿಸಹೊರಟರೆ ಹಿಂದಿ ಚಿತ್ರ ಸಂಗೀತವು ಮನ್ನಾ ಡೇ ಅವರಲ್ಲಿ ತನ್ನ ಚಿರಸ್ಥಾಯಿ ಗಟ್ಟಿತನವನ್ನು ಕಂಡುಕೊಂಡಂತಹ ಅದ್ಭುತ ಬೆಳವಣಿಗೆ ತಿಳಿಯುತ್ತದೆ. ಇದುವರೆಗೆ ಚಲನಚಿತ್ರ ಹಿನ್ನೆಲೆ ಗಾಯಕರಲ್ಲಿ ಇವರಷ್ಟು ದೀರ್ಘಕಾಲ ಬಾಳಿದವರಿಲ್ಲ. ಇವರಷ್ಟು ದೀರ್ಘ ಕಾಲ ಹಾಡಿದವರೂ ಇಲ್ಲ.

ಮೂಕೀ ಚಿತ್ರಗಳ ಕಾಲ ಸರಿದು, ಟಾಕಿ ಚಿತ್ರಗಳು ಬರುತ್ತಿದ್ದಂತೆಯೇ ಅದರಲ್ಲಿ ಸಂಗೀತದ ಅಗತ್ಯ ಮತ್ತು ಪ್ರಾಧಾನ್ಯತೆ ಕಂಡುಬಂದವು. ಚಿತ್ರದಲ್ಲಿನ ಕತೆಯ ಜೋಡಣೆ ಮತ್ತು ಬೆಳವಣಿಗೆಗೆ ಸಾಧನವಾಗಿ ಮತ್ತು ಆಯಾ ಸಂದರ್ಭಗಳ ತೀವ್ರತೆಯನ್ನು ಸೂಚಿಸಲು, ಪ್ರಮುಖ ಪಾತ್ರಗಳು ತಮ್ಮ ಎಲ್ಲಾ ತರಹದ ಭಾವನೆಗಳನ್ನು ಪರಸ್ಪರರಿಗೆ ವ್ಯಕ್ತಪಡಿಸಲು ಹಾಗೂ ಅದನ್ನು ಪ್ರೇಕ್ಷಕರಿಗೆ ತಲುಪಿಸಲು ಸಂಗೀತವು ಅವಶ್ಯಕ ಸಾಧನವಾಗಿ ಮೂಡಿಬಂದಿತು. ಅದೂ ಅಲ್ಲದೆ, ಬರೀ ಮಾತಿನ ಏಕತಾನತೆಯನ್ನು ಮುರಿಯಲು ಮತ್ತು ಕಥೆಯನ್ನು ಹೆಚ್ಚು ಪರಿಣಾಮಕಾರಿ ಮತ್ತು ರಂಜನೀಯವಾಗಿಸಲೂ ಸಹ ಸಂಗೀತದ ಅವಶ್ಯಕತೆ ಕಂಡುಬಂದಿತು. ಅನೇಕ ದಶಕಗಳವರೆಗೆ ಭಾರತೀಯ ಸಿನೆಮಾಗಳಲ್ಲಿ ಸಂಗೀತವೇ ಬೇರೆಲ್ಲಾ ಅಂಶಗಳಿಗಿಂತಲೂ ಹೆಚ್ಚು ಪ್ರಧಾನವಾಯಿತು. ಕೆಲವು ಚಿತ್ರಗಳಂತೂ (ಈಗಿನ ಹಾಲಿವುಡ್ ಭಾಷೆಯಲ್ಲಿ ಹೇಳುವುದಾದರೆ "ಫಾಲ್ತು" ಚಿತ್ರಗಳು!) ಕೇವಲ ಸಂಗೀತದಿಂದಲೇ ಗೆದ್ದವು. ಉದಾಹರಣೆಗೆ, 'ದೇಖ್ ಕಬೀರ ರೋಯಾ' ಮತ್ತು 'ಮೇರಿ ಸೂರತ್ ತೇರೀ ಆಂಖೇಂ...' ಮುಂತಾದುವು (ಮನ್ನಾ ಡೇ ಅವರ ಹಾಡುಗಳಿರುವ ಚಿತ್ರ ಮತ್ತು ಗೀತೆಗಳನ್ನು ಇಲ್ಲಿ ಸ್ಮರಿಸೋಣ). ಈಗಂತೂ ಸದ್ದುಗದ್ದಲವೇ ಚಿತ್ರ ಸಂಗೀತವಾಗಿದೆ.

ಮೊದಮೊದಲು ಆಯಾ ಕಲಾವಿದರೇ ತಮ್ಮ ಹಾಡುಗಳನ್ನು ಚಿತ್ರೀಕರಣದ ಸಮಯದಲ್ಲಿ ಅಭಿನಯಿಸುತ್ತಲೇ ಹಾಡುತ್ತಿದ್ದರು. ಅದರ ಚಿತ್ರೀಕರಣದ್ದೇ ಒಂದು ಸಾಹಸಗಾಥೆ! ಕ್ರಮೇಣ, ಹಾಡುಗಳನ್ನು ಪ್ರತ್ಯೇಕವಾಗಿ ಧ್ವನಿಮುದ್ರಿಸಿ, ಚಿತ್ರೀಕರಣದಲ್ಲಿ ಕಲಾವಿದರು ಅದಕ್ಕೆ ತಕ್ಕಂತೆ ಕೇವಲ ತುಟಿ ಚಾಲನೆ ಮಾಡುವ ಪದ್ಧತಿ ಬಂತು. ಪ್ರಾರಂಭದ ದಿನಗಳಲ್ಲಿ ತಮ್ಮ ಪಾತ್ರಗಳನ್ನು ನಟಿಸುತ್ತಲೇ ತಾವೇ ಹಿನ್ನೆಲೆ ಹಾಡುಗಳನ್ನು ಹಾಡುತ್ತಿದ್ದರು. ಅವರಲ್ಲಿ ಅಗ್ರಗಣ್ಯರೆಂದರೆ ಕೆ. ಎಲ್. ಸೈಗಾಲ್, ಪಂಕಜ್ ಮಲ್ಲಿಕ್, ಸುರೇಂದ್ರ, ಶ್ಯಾಮ್ ಮುಂತಾದವರು. ಅಶೋಕ್ ಕುಮಾರ್ ಮುಂತಾದ ನಾಯಕ ನಟರೂ ತಮ್ಮ ಪಾತ್ರದ ಹಾಡುಗಳನ್ನು ಒಮ್ಮೊಮ್ಮೆ ತಾವೇ ಹಾಡುತ್ತಿದ್ದರು. ಹಿನ್ನೆಲೆ ಗಾಯಕ ತಲತ್ ಮೆಹಮೂದ್ ಸಹ ತಾನು ನಟಿಸಿದ ಅನೇಕ ಪಾತ್ರಗಳಿಗೆ ತಾನೇ ಹಿನ್ನೆಲೆ ಗಾಯನ ನೀಡಿದ್ದಾರೆ. ಕಿಶೋರ್ ಕುಮಾರ್ ಬಗ್ಗೆಯಂತೂ ಇತ್ತೀಚಿನವರಿಗೂ ತಿಳಿದಿದೆ.

ಚಿತ್ರಗಳ ಸಂಖ್ಯೆ ಹೆಚ್ಚುತ್ತಿದ್ದಂತೆ, ಅದಕ್ಕೆ ತಕ್ಕಂತೆ ಹೆಚ್ಚು ಮಾಧುರ್ಯಭರಿತ ಗೀತೆಗಳ ಅವಶ್ಯಕತೆ ಉಂಟಾಗುತ್ತಿದ್ದಂತೆಯೇ ಹಿನ್ನೆಲೆ ಗಾಯಕರ ದಂಡೇ ಚಿತ್ರರಂಗಕ್ಕೆ ಬಂದು ಸೇರಿತು. ಆದರೆ, ಕೆಲವೇ ಗಾಯಕರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಚಿತ್ರಕ್ಕೆ, ಪಾತ್ರಕ್ಕೆ, ನಿರ್ದಿಷ್ಟ ಸನ್ನಿವೇಶಕ್ಕೆ ತಮ್ಮ ಅಗತ್ಯತೆಯನ್ನು ಮನಗಾಣಿಸಿದರು. ಕೆಲವು ನಿರ್ದಿಷ್ಟ ಸನ್ನಿವೇಶ ಅಥವಾ ಪಾತ್ರಗಳಿಗೆ ಇಂತಹ ಗಾಯಕರೇ ಬೇಕೆನ್ನುವ ಮಟ್ಟಿಗೆ ಅನೇಕ ಗಾಯಕರುಗಳು "ಫಿಕ್ಸ್" ಆಗಿಹೋದರು. ಅವರಲ್ಲಿ ಪ್ರಮುಖರು ಮಹಮದ್ ರಫಿ, ಮುಖೇಶ್, ಕಿಶೋರ್ ಕುಮಾರ್, ತಲತ್ ಮೆಹಮೂದ್ ಮತ್ತು ಮಹೇಂದ್ರ ಕಪೂರ್. ಹೇಮಂತ್ ಕುಮಾರ್ ಅವರಂತೂ ಸಂಗೀತ ನಿರ್ದೇಶಕರಾಗಿದ್ದುಕೊಂಡು ಹಾಡುಗಾರರಾಗಿಯೂ ಸಾಕಷ್ಟು ಪ್ರಸಿದ್ಧರಾಗಿದ್ದವರು. ಕೆಲವೊಮ್ಮೆ ಇತರ ಸಂಗೀತ ನಿರ್ದೇಶಕರುಗಳಾದ ಸಿ. ರಾಮಚಂದ್ರ, ಎಸ್. ಡಿ. ಬರ್ಮನ್ ಅಂಥವರೂ ಸಹ ಅನೇಕ ಹಾಡುಗಳನ್ನು ತಾವೇ ಹಾಡಿದ್ದಾರೆ. ಮನ್ನಾ ಡೇ ಮಾತ್ರ ಯಾವ ನಿರ್ದಿಷ್ಟ ನಾಯಕನಟನಿಗಾಗಿ "ಫಿಕ್ಸ್" ಆಗಲಿಲ್ಲ!

ಚಲನಚಿತ್ರ ಸಂಗೀತದಲ್ಲಿ ಎಲ್ಲಾ ರೀತಿಯ ವೈವಿಧ್ಯಮಯ ರಸಾನುಭಾವಗಳಿಗೆ ಧ್ವನಿಯಾಗಿದ್ದವರು ಮನ್ನಾ ಡೇ. ಸಾಮಾನ್ಯ ಗಾಯಕರು ಹಾಡಲಾಗದಂತಹ ಕ್ಲಿಷ್ಟಕರವಾದ ಹಾಗೂ ವಿಶೇಷವಾದ ಮಾಧುರ್ಯಪೂರಿತ ಹಾಡುಗಳಿಗೆ ಮನ್ನಾ ಡೇಯವರ ಕಂಠಸಿರಿಯೇ ಅಗತ್ಯವಾಗಿತ್ತು. ಅವರು ಹಾಡಿರುವ ಬಹಳಷ್ಟು ಗೀತೆಗಳು ಯಾವುದೇ ಗಾಯಕರಿಗೆ ಸವಾಲಾಗಿದ್ದು, ಚಿರಸ್ಥಾಯಿಯಾಗಿ ನಿಲ್ಲುವಂತಹವು.

೧೯೫೨ರಲ್ಲೇ ಹಾಡಿರುವ 'ದೋ ಬೀಗಾ ಜ಼ಮೀನ್' ಚಿತ್ರದ "ಧರ್‌ತೀ ಕಹೇ ಪುಕಾರ್ ಕೆ" ಆಗಲೀ, 'ಬಸಂತ್ ಬಹಾರ್' ಚಿತ್ರದ ಗೀತೆಯಾಗಲೀ, 'ಕಾಬೂಲಿವಾಲಾ' ಚಿತ್ರದ "ಏ ಮೇರೆ ಪ್ಯಾರೇ ವತನ್", ರಫಿ ಅವರೊಡನೆ 'ಕಲ್ಪನಾ' ಚಿತ್ರದಲ್ಲಿ ಹಾಡಿರುವ "ತೂ ಹೈ ಮೇರಾ ಪ್ರೇಮ್ ದೇವತಾ..."ದಂತಹ ಅನೇಕ ಹಾಡುಗಳು ... 'ದಿಲ್ ಹೀ ತೋ ಹೈ' ಚಿತ್ರದ "ಲಾಗಾ ಚುನರೀ ಮೆ ದಾಗ್ ...", 'ಮೇರೆ ಹುಜೂರ್' ಚಿತ್ರದ "ಝುನಕ್ ಝುನಕ್ ತೋರೆ ... ಬಾಜೆ ಪಾಯಲಿಯಾ ...", 'ಉಪಕಾರ್' ಚಿತ್ರದ "ಕಸ್ಮೇ ವಾದೇ ಪ್ಯಾರ್ ವಫಾ", 'ಝಂಜೀರ್' ಚಿತ್ರದ "ಯಾರೀ ಹೈ ಇಮಾನ್ ಮೇರಿ...", 'ವಕ್ತ್' ಚಿತ್ರದ "ಏ ಮೆರೆ ಜೊಹ್ರಾ ಜಬೀನ್", 'ಉಜಾಲಾ' ಚಿತ್ರದ "ಅಬ್ ಕಹಾಂ ಜಾಯೇ ಹಂ ..." – ಎಂತಹ ಅಮೋಘ ಗೀತೆಗಳು! ಇವನ್ನು ಬೇರೆ ಯಾರ ಕಂಠದಲ್ಲೂ ಊಹಿಸಲೂ ಅಸಾಧ್ಯ. ಮನ್ನಾ ಡೇ ಅವರ ವಿಶೇಷತೆಯೆಂದರೆ ಅನೇಕ ಜನಪ್ರಿಯ ನಾಯಕರಿಗೆ ಮತ್ತೆ ಮತ್ತೆ ಹಿನ್ನೆಲೆ ಗಾಯನ ನೀಡದೆ ಪ್ರಖ್ಯಾತ ಗಾಯಕರಾದದ್ದು! ಚಲನಚಿತ್ರದಲ್ಲಿ ಜನಪ್ರಿಯ ನಾಯಕರು ಸ್ವತಃ ಆಯ್ಕೆ ಮಾಡಿಕೊಳ್ಳದೆ ಅವರಿಗಾಗಿ ಹಾಡುವುದು ಗಾಯಕರಿಗೆ ಸಾಧ್ಯವಾಗದು. ಹಾಗಾಗಿ ಅನೇಕ ಸಂಗೀತ ನಿರ್ದೇಶಕರು ಇವರನ್ನು ಸಾಂದರ್ಭಿಕವಾಗಿ, ಎಕ್ಸ್‌ಪರ್ಟ್ ಮತ್ತು ಸಿಚ್ಯುಯೇಷನಲ್ ಸಿಂಗರ್ ಆಗಿ ಬಳಸಿಕೊಂಡಿದ್ದಾರೆ. ಇಷ್ಟಾದರೂ ಇವರು ಹಿರಿಯ ನಟರಾದ ಬಲರಾಜ್ ಸಾಹನಿ, ಅಶೋಕ್ ಕುಮಾರ್, ರಾಜ್ ಕಪೂರ್ ಅವರ ಪಾತ್ರಗಳಿಗೆ ಅನೇಕ ಹಾಡುಗಳನ್ನು ಹಾಡಿದ್ದಾರೆ. ವಿಶೇಷವೆಂದರೆ, ರಾಜ್ ಕಪೂರ್ ಅವರಿಗೆ ಇವರ ಕಂಠವು ಮುಕೇಶ್ ಅವರ ಕಂಠಕ್ಕಿಂತಲೂ ಹೆಚ್ಚು ಹೊಂದುತ್ತಿತ್ತು. ಈ ಅಂಶವು ೧೯೫೦ರ ದಶಕದ 'ಪರ್ವರಿಶ್', 'ಚೋರಿ ಚೋರಿ' ಮತ್ತು 'ಶ್ರೀ ೪೨೦' ಚಿತ್ರಗಳಲ್ಲಿ ಸಾಬೀತಾಗಿತ್ತು. ಹಾಗಾಗಿಯೇ ರಾಜ್ ಕಪೂರ್ ಮನ್ನಾ ಡೇರವರ ಗಾಯನವನ್ನು ತಮ್ಮ 'ಬೂಟ್‌ಪಾಲಿಶ್' ಮತ್ತು 'ಬಾಬಿ' ಚಿತ್ರಗಳಲ್ಲಿ ಬಳಸಿಕೊಂಡಿದ್ದಾರೆ. ನಂತರದ ದಿನಗಳಲ್ಲಿ ಮನ್ನಾ ಡೇ ಅವರು ಹಾಡಿದ ಹೆಚ್ಚು ಹಾಡುಗಳು ಸೂಪರ್ ಸ್ಟಾರ್ ರಾಜೇಶ್ ಖನ್ನಾ ಅವರಿಗಾಗಿ!

ಮನ್ನಾ ಡೇ ಅವರು ೯೩ ವರ್ಷಗಳಿಗಿಂತಲೂ ಹೆಚ್ಚು ಕಾಲ ಬಾಳಿದರು ಮತ್ತು



**ಪತ್ನಿ ಸುಲೋಚನಾರೊಂದಿಗೆ ಮನ್ನಾ ಡೇ**

ತಮ್ಮ ೮೫ನೇ ವಯಸ್ಸಿನವರೆಗೂ ಚೆನ್ನಾಗಿಯೇ ಹಾಡುವ ಸಾಮರ್ಥ್ಯವನ್ನು ಕಾಪಾಡಿಕೊಂಡಿದ್ದರು. ಆದರೂ ಕಡೆಯ ೨೦ಕ್ಕೂ ಹೆಚ್ಚು ವರ್ಷಗಳು – ಚಲನಚಿತ್ರ ತಯಾರಿಕೆಯ ಕಾರ್ಖಾನೆ 'ಬಾಲಿವುಡ್'ನಿಂದ ದೂರವೇ ಉಳಿದರು. ಈ ಅವಧಿಯಲ್ಲಿ ಅವರನ್ನು ಬಾಲಿವುಡ್ ಮಂದಿ ಕರೆದು ಹಾಡಿಸಲೂ ಇಲ್ಲ. ಬಾಲಿವುಡ್‌ಗೆ ತನ್ನ ಅಗತ್ಯವಿಲ್ಲವೆಂದು ಸ್ವತಃ ಮನ್ನಾ ಡೇ ಅವರೇ ಹೇಳುತ್ತಿದ್ದರು. ಬಹಳಷ್ಟು ಹಿನ್ನೆಲೆ ಗಾಯಕರು ಚಿತ್ರ ಸಂಗೀತಕ್ಕೇ ಸೀಮಿತವಾದವರು. ಆದರೆ, ಮನ್ನಾ ಡೇ ಇಡೀ ಸಂಗೀತ ಕ್ಷೇತ್ರಕ್ಕೆ ಸೇರಿದವರು. ಅವರು ಶಾಸ್ತ್ರೀಯ ಸಂಗೀತ, ಜಾನಪದ, ಲಲಿತ ಸಂಗೀತ ಕ್ಷೇತ್ರಗಳಲ್ಲೂ ಶ್ರಮಿಸಿದವರು ಮತ್ತು ಚಲನಚಿತ್ರ ಹಿನ್ನೆಲೆ ಗಾಯಕರಾಗಿಲ್ಲದಿದ್ದರೆ, ಪ್ರಸಿದ್ಧ ಶಾಸ್ತ್ರೀಯ ಸಂಗೀತಗಾರರಾಗುವ ಸಾಮರ್ಥ್ಯ ಹೊಂದಿದ್ದವರು.

ಚಲನಚಿತ್ರಗಳಲ್ಲೂ ಕೆಲವು ರೀತಿಯ ಹಾಡುಗಳಿಗಷ್ಟೇ ಅವರು ಸೀಮಿತರಾಗಿರಲಿಲ್ಲ. ಅವರನ್ನು ಪ್ರಸಿದ್ಧಿಗೆ ತಂದು ನಿಲ್ಲಿಸಿದ ಮೊದಲ ಗೀತೆ 'ಮಶಾಲ್' ಚಿತ್ರದ, ಎಸ್. ಡಿ. ಬರ್ಮನ್ ಸಂಗೀತ ನಿರ್ದೇಶನದ "ಊಪರ್ ಗಗನ್ ವಿಶಾಲ್"ನಂತೆಯೇ ಅವರ ಗಾಯನ ಸಾಮರ್ಥ್ಯ ಮತ್ತು ವಿಸ್ತಾರ "ಗಗನ್ ವಿಶಾಲ್" ಆಗಿತ್ತು. ನಂತರ ಅವರಿಗೆ ಖ್ಯಾತಿ ತಂದದ್ದು ಹಿಂದಿ, ಮರಾಠಿ ದ್ವಿಭಾಷಾ ಚಿತ್ರ 'ರಾಮರಾಜ್ಯ'ದ ಹಾಡುಗಳು. ಎಲ್ಲಾ ಗಾಯಕರಿಗೂ ಅನ್ವಯಿಸುವ ಸತ್ಯವೆಂದರೆ "ಸುರ್ ನಾ ಸಜೇ, ಕ್ಯಾ ಗಾವೂಂ ಮೈ" – ಇದನ್ನು ಅದ್ಭುತವಾಗಿ ಹಾಡಿದ ಮನ್ನಾ ಡೇ 'ಸುರ್ ಕೆ ಬಿನಾ ಜೀವನ ಸೂನಾ' ಎಂಬುದನ್ನು ಅರಿತವರಂತೆ ಶಾಸ್ತ್ರೀಯ ಸಂಗೀತದ ಆರಾಧಕ–ಸಾಧಕರಾಗಿದ್ದರು. ಚಲನಚಿತ್ರಗಳಿಗಾಗಿ ಮಹಾನ್ ಕವಿಗಳು ಬರೆದಂತಹ 'ಜೀವನಸತ್ಯ'ದ ಅದೆಷ್ಟೋ ಹಾಡುಗಳನ್ನು ತಮ್ಮ ಅದ್ಭುತ ಕಂಠ ಮತ್ತು ಸಮರ್ಥ ಗಾಯನದಿಂದ ಅಮರವಾಗಿಸಿದವರು ಮನ್ನಾ ಡೇ. ಅವರು ಹಾಡಿನ ರಾಗ ಮತ್ತು ಸಾಹಿತ್ಯದ ಕಡೆ ವಿಶೇಷ ಗಮನ ನೀಡುತ್ತಿದ್ದರು. ಯಾವ ಅಕ್ಷರವನ್ನೂ ನುಂಗದೆ, ತೇಲಿಸದೆ ಸ್ಪಷ್ಟವಾಗಿ ಹಾಡುತ್ತಿದ್ದರು. ವಿ. ಶಾಂತಾರಾಮ್ ಅವರ 'ಝುನಕ್–ಝುನಕ್ ಪಾಯಲ್ ಬಾಜೆ', 'ಸ್ತ್ರೀ', 'ನವರಂಗ್', 'ದೋ ಆಂಖೇ ಬಾರಾ ಹಾತ್' ಚಿತ್ರಗಳಲ್ಲಿನ ಮನ್ನಾ ಡೇ ಅವರ ಹಾಡುಗಳು ಅತ್ಯಂತ ಪರಿಣಾಮಕಾರಿಯಾಗಿವೆ. 'ಸೀಮಾ' ಚಿತ್ರದ "ತೂ ಪ್ಯಾರ್ ಕಾ ಸಾಗರ್ ಹೈ" ಗೀತೆ ಕೇಳಿದ ಯಾರಾದರೂ ಅದನ್ನು ಮರೆಯಲಾದೀತೇ ? ಸಂಗೀತ ಕ್ಷೇತ್ರದಲ್ಲಿ ಅವರೊಬ್ಬ ಕರ್ಮಯೋಗಿ. ಸಾಮಾನ್ಯರಿಗೂ ಶಾಸ್ತ್ರೀಯ ಸಂಗೀತವನ್ನು ಚಿತ್ರಗೀತೆಗಳ ಮೂಲಕ ತಲುಪಿಸಿದ ಮಹಾನ್ ಗಾಯಕ. ಹಿಂದೂಸ್ತಾನಿ/ ಶಾಸ್ತ್ರೀಯ ಸಂಗೀತಕ್ಕೆ ವಿಶಾಲ ಜನಮನ್ನಣೆ ಗಳಿಸಿಕೊಟ್ಟ ಗಾಯಕ ಮನ್ನಾ ಡೇ.

ಮೊದಲ ನೋಟಕ್ಕೆ ಇವರನ್ನು ಮಾತಾಡಿಸುವುದು ಹೇಗಪ್ಪಾ ಎಂದು ಅಳುಕುವಂತಹ ಗಂಭೀರ ವ್ಯಕ್ತಿಯಾಗಿದ್ದರೂ ಒಮ್ಮೆ ಪರಿಚಯವಾದರೆ ಬಹು ಆತ್ಮೀಯರಾಗಿಬಿಡುತ್ತಿದ್ದಂತಹ ಸರಳ ವ್ಯಕ್ತಿಯಾಗಿದ್ದರು. ಏನೇ ಪರಿಸ್ಥಿತಿಯಿರಲಿ, ಯಾವುದೇ ಘಟನೆ ನಡೆಯಲಿ, ಎಲ್ಲೇ ಇರಲಿ, ಸಂಗೀತವೇ ಅವರ ಉಸಿರಾಗಿತ್ತು. ಕಡೆಯ ದಿನಗಳಲ್ಲಿ ಅನಾರೋಗ್ಯದಿಂದ ಆಸ್ಪತ್ರೆಗೆ ಸೇರುವವರೆಗೂ ಅವರ ಸಂಗೀತಾಭ್ಯಾಸ ನಡೆಯುತ್ತಲೇ ಇತ್ತು ! ಎಷ್ಟೋ ಹೀರೋಗಳಿಗೆ ಅವರು ಅನೇಕ ಹಾಡುಗಳನ್ನು ಹಾಡಿದ್ದರೂ ಅವರು 'ಸ್ಟಾರ್ ವಾಯ್ಸ್' ಆಗಲಿಲ್ಲ, ಬದಲಿಗೆ 'ಕ್ಯಾರೆಕ್ಟರ್ ವಾಯ್ಸ್' ಆದರು, ಸಿನೆಮಾ ಸಂಗೀತದ ವಾಯ್ಸ್ ಆದರು.

ಮನ್ನಾ ಡೇ ಅವರ ಕಂಠವನ್ನು ಬಳಸಿಕೊಳ್ಳದ ಸಂಗೀತ ನಿರ್ದೇಶಕರುಗಳೇ ಇಲ್ಲವೆನ್ನಬಹುದು. ಸ್ವತಃ ತಾವೇ ಹಾಡುತ್ತಿದ್ದ ಸಂಗೀತ ನಿರ್ದೇಶಕರಾದ ಕಿಶೋರ್ ಕುಮಾರ್, ಹೇಮಂತ್ ಕುಮಾರ್ ಅವರ ಹೊರತಾಗಿ ೧೯೪೦ರಿಂದ ೧೯೮೦ರ ದಶಕದವರೆಗೂ ಸಕ್ರಿಯರಾಗಿದ್ದ ಸಲೀಲ್ ಚೌಧರಿ, ಎಸ್. ಡಿ. ಬರ್ಮನ್, ರವಿ ಅವರುಗಳಿಗಂತೂ ಮನ್ನಾಡೇ ಅಚ್ಚುಮೆಚ್ಚಿನ ಹಾಡುಗಾರರಾಗಿದ್ದರು. ತುಂಬ ಸರಳ ವ್ಯಕ್ತಿತ್ವದ, ಯಾವುದೇ 'ಅಹಂ' ಇಲ್ಲದವರಾದ್ದರಿಂದ ಎಲ್ಲರಿಗೆ, ಎಲ್ಲಾ ರೀತಿಯ ಹಾಡುಗಳಿಗೆ ಇವರು ಧ್ವನಿಯಾಗುತ್ತಿದ್ದರು. ಆಗ ತಾನೇ ಸಂಗೀತ ನಿರ್ದೇಶಕರಾಗಿದ್ದ ರವಿ ಅವರಿಗಾಗಿ 'ನರ್‌ಸೀ ಭಗತ್' ಸಿನೆಮಾದಲ್ಲಿ ಹೇಮಂತ್ ಕುಮಾರ್, ಸುಧಾ ಮಲ್ಹೋತ್ರ ಅವರ ಜೊತೆಗೆ "ದರ್ಶನ್ ದೋ ಘನಶ್ಯಾಮ್" ಎಂಬ ಹಾಡಿಗೆ ಒಂದೇ ಒಂದು ಚರಣವನ್ನು ಹಾಡಿರುವುದು ಹಾಗೂ ಶಂಕರ್ ಜೈಕಿಷನ್‌ರ ಮೇಲಿನ ಮಮತೆಯಿಂದ ಚೋರಿ ಚೋರಿ ಚಿತ್ರದ "ಪಂಛಿ ಬನೂಂ ಉಡ್ತಿ ಫಿರೂಂ" ಹಾಡಿಗೆ ಒಂದು ಸಾಲು ಕೋರಸ್ಸನ್ನು ಗಮ್ಮತ್ತಾಗಿ ಹಾಡಿರುವುದು ಇವರ ಸರಳತೆಯನ್ನು ಸೂಚಿಸುತ್ತದೆ.

ಸಹ ಗಾಯಕರು ಯಾರೇ ಇರಲಿ ಅವರಿಗೆ ಗೌರವ ನೀಡಿ, ತಲ್ಲೀನತೆಯಿಂದ ತಾವು ಹಾಡುವುದರ ಕಡೆಗೆ ಮಾತ್ರ ಗಮನ ನೀಡುತ್ತಿದ್ದರು ಮನ್ನಾ ಡೇ. ೧೯೫೦ರ



ದಶಕದಲ್ಲಿ ಶಾಸ್ತ್ರೀಯ ಸಂಗೀತ ದಿಗ್ಗಜ ಭೀಮ್‌ಸೇನ್ ಜೋಷಿಯಾಗಲೀ, ೧೯೪೦ರ ದಶಕದಲ್ಲಿ ತನ್ನ ಜೊತೆ ಸ್ಟೂಲ್ ಮೇಲೆ ನಿಂತು ಹಾಡಿದ ಬಾಲಕಿ (ಮುಂದೆ ಪ್ರಖ್ಯಾತಳಾದ ಸಿಂಗಿಂಗ್ ಸ್ಟಾರ್ ಸುರೈಯಾ)ಯಾಗಲೀ, ಮಹಮದ್ ರಫಿ ಸಾಬ್ ಆಗಲೀ, ಇವರಿಗೇನೂ ವ್ಯತ್ಯಾಸ, ಅಳುಕು, ಜಂಭ ಎಂಬುದಿರಲಿಲ್ಲ. ಇವರು ನಾಯಕ ನಟರಿಗೆ (ಹೀರೋಗಳಿಗೆ) ಮಾತ್ರ ಹಾಡಿ ಪ್ರಖ್ಯಾತರಾಗಲಿಲ್ಲ.

ಅನೇಕ ಸಿನೆಮಾಗಳಲ್ಲಿ ಹೀಗೆ ಬಂದು ಹಾಗೆ ಹೋಗಿಬಿಡುವ ಭಿಕ್ಷುಕ, ಸಂದೇಶ ವಾಹಕ ಅಥವಾ ಸಾಧುಗಳ ಪಾತ್ರಗಳಿಗೂ ಹಾಡಿ ಇವರು ಪ್ರಖ್ಯಾತರಾಗಿದ್ದಾರೆ. ಉದಾಹರಣೆಗೆ 'ಪಿ. ಓ. ಬಾಕ್ಸ್ ೯೯೯'ನ "ಜೋಗಿ ಆಯಾ ಲೇಕೇ ಸಂದೇಸಾ", 'ಚಂದಾ ಔರ್ ಬಿಜಲೀ' ಚಿತ್ರದ "ಕಾಲ್ ಕಾ ಪಹಿಯಾ, ಘೂಮೇ ಭಯ್ಯಾ", "ರಾಮಕೃಷ್ಣ ಹರೀ" ಎಂಬ ಭಜನೆ ಮುಂತಾದುವು. ಹಾಸ್ಯನಟನೆಂದೇ ಪ್ರಖ್ಯಾತರಾಗಿದ್ದ ಮೆಹಮೂದ್ ಅವರ ಚಿತ್ರಗಳಲ್ಲಿ ಅವರಿಗಾಗೇ ಹಾಡಿದ್ದು ಇವರ ಹೃದಯವೈಶಾಲ್ಯತೆ ಮತ್ತು ತಮಗೆ "ಸಂಗೀತ ಮಾತ್ರವೇ ಮುಖ್ಯ" ಎಂಬುದನ್ನು ನಂಬಿದ್ದಕ್ಕೆ ಕುರುಹಾಗಿದೆ. ಮನ್ನಾ ಡೇ ಅವರ ಕಂಠದಿಂದ ಹೊರಹೊಮ್ಮಿರುವ ಹಾಡುಗಳು ಎಷ್ಟೊಂದು ವೈವಿಧ್ಯಮಯವಾಗಿವೆ ಎಂದರೆ ಅವನ್ನು ಕೇಳಿಯೇ ಅನುಭವಿಸಬೇಕು.

**ಕರ್ನಾಟಕ–ಬೆಂಗಳೂರಿನೊಡನೆ ವಿಶೇಷ ಬಂಧ**

ಮನ್ನಾ ಡೇ ಅವರಿಗೆ ಬಹಳ ಹಿಂದಿನಿಂದಲೂ ಬೆಂಗಳೂರಿನ ನಂಟು. ಹಿರಿಯರ ಒಪ್ಪಿಗೆಯಿಂದಲೇ ಮಲೆಯಾಳಿ ಕನ್ಯೆ ಸುಲೋಚನಾ ಅವರೊಡನೆ ಪ್ರೇಮವಿವಾಹ ಮಾಡಿಕೊಂಡ ಇವರು ವಿವಾಹಪೂರ್ವದ ದಿನಗಳಿಂದಲೂ ಬೆಂಗಳೂರಿನ ಕಂಟೋನ್ಮೆಂಟ್‌ನಲ್ಲಿ ಸುತ್ತಾಡಿ ಲಾಲ್‌ಬಾಗ್, ಕಬ್ಬನ್ ಪಾರ್ಕ್‌ಗಳಲ್ಲಿ ವಿಹರಿಸಿದವರು. ೬೦ರ ದಶಕದಲ್ಲೇ ಕನ್ನಡದ 'ಕಲಾವತಿ', 'ಕಲ್ಪವೃಕ್ಷ', 'ಮಾರ್ಗದರ್ಶಿ' ಮುಂತಾದ ಚಿತ್ರಗಳಲ್ಲಿ ಹಾಡಿದವರು. ದೀರ್ಘಕಾಲ ಸಂಗೀತ ಜೀವನ ನಡೆಸಿದ ಬೊಂಬಾಯಿಯ ಹೊರತಾಗಿ ಇವರಿಗೆ ಬೆಂಗಳೂರು ಎರಡನೆಯ ಅಚ್ಚುಮೆಚ್ಚಿನ ಮನೆ. ಬೆಂಗಳೂರಿನಲ್ಲೇ ವಾಸವಾಗಿರುವ ತಮ್ಮ ಕಿರಿಯ ಮಗಳು ಮತ್ತು ಅಳಿಯರೊಂದಿಗೆ ತಮ್ಮ ಜೀವನದ ಕಡೆಯ ಅವಧಿಯಲ್ಲಿ ಪತ್ನಿ ಸಮೇತ ನೆಲೆಸಿದ್ದರು (೨೦೦೦ದ ವರ್ಷದಿಂದ). ತಮ್ಮ ಬಗ್ಗೆ ಯಾವ ಪ್ರಚಾರ ಮಾಡಿಕೊಳ್ಳದೆ, ತಾನಾಗಿ ಒದಗಿಬಂದ ಕಾರ್ಯಕ್ರಮಗಳಲ್ಲಿ ಹಾಡುತ್ತಾ ತಮ್ಮ ನೆಚ್ಚಿನ ಹವ್ಯಾಸವಾದ ಸಂಗೀತಾಭ್ಯಾಸ ಮಾಡುತ್ತ ಒಂದು ರೀತಿಯ ಅಜ್ಞಾತವಾಸದಲ್ಲಿ ಕಾಲ ಕಳೆದರು. ದೀರ್ಘಕಾಲದ ಬಾಳಸಂಗಾತಿ ಪತ್ನಿ ಸುಲೋಚನಾ ಒಂದೂವರೆ ವರ್ಷದ ಹಿಂದೆ ತೀರಿಕೊಂಡ ಮೇಲೆ ಅಂತರ್ಮುಖಿಯಾಗಿಬಿಟ್ಟರು. ಅಕ್ಷರಶಃ ಬೆಂಗಳೂರಿನವರೇ ಆಗಿಹೋಗಿದ್ದ ಇವರು ೨೪.೧೦.೨೦೧೩ರಂದು ತಮ್ಮ ಇಹಲೋಕದ ಸಂಗೀತಾಭಿಯಾನದ ಜೀವನ ಮುಗಿಸಿದರು. ಎಲ್ಲಾ ರೀತಿಯಲ್ಲೂ ಉನ್ನತಮಟ್ಟದವರೇ ಆಗಿದ್ದರೂ ಸರಳವಾಗಿಯೇ ಬಾಳಿ, ಕಡೆಗೆ ಬಾಲಿವುಡ್‌ನಿಂದ ದೂರವೇ ಉಳಿದಿದ್ದ ಇವರ ಮರಣಾನಂತರದ ಸಂಸ್ಕಾರಗಳೂ ಸರಳವಾಗಿಯೇ ನಡೆದುಹೋದವು.

**ಕೆ. ಸಿ. ರಮೇಶ್**
'ನೆಲೆ', ನಂ. ೩೩/೧, ೬ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩




# ಶನಿ ಮತ್ತು ಚಂದ್ರರ ಸಮಾಗಮ

ಐಸನ್ ಧೂಮಕೇತು ನಿರಾಶೆಗೊಳಿಸಿದೆ (ನವೆಂಬರ ೧೬ರ ಪ್ರಕಾರ). ಆದರೆ ಇನ್ನೊಂದು ಧೂಮಕೇತು ಲವ್‌ಜಾಯ್ ಆಸೆಯನ್ನು ಹುಟ್ಟಿಸಿದೆ. ಸೆಪ್ಟೆಂಬರ್‌ನಲ್ಲಿ ಆಸ್ಟ್ರೇಲಿಯಾದ ಟೆರಿ ಲವ್‌ಜಾಯ್ ಕಂಡುಹಿಡಿದ ಈ ಧೂಮಕೇತು ಐಸನ್‌ಗಿಂತ ಪ್ರಕಾಶ ಪಡೆದಿದೆ. ಡಿಸೆಂಬರ್ ೨೬ರಂದು ಸೂರ್ಯನನ್ನು ಸುತ್ತಿ ಹಿಂದಿರುಗಲಿದೆ. ಇದು ಸೂರ್ಯನನ್ನು ಸುಮಾರು ಒಂದು ಮಿಲಿಯನ್ ಕಿ. ಮೀ. ದೂರದಿಂದಲೇ ಸಮೀಪಿಸಿ ಹಿಂದಿರುಗಲಿದೆ. ಆದರೂ ಇದರ ಪ್ರಕಾಶ ಈಗಾಗಲೇ ಹೆಚ್ಚಿರುವುದರಿಂದ ಬರಿಗಣ್ಣಿಗೇ ಕಾಣಬಹುದು ಎಂಬ ಆಸೆ ಮೂಡಿದೆ. ಇದು ಉತ್ತರಕ್ಕೆ ಸಾಗುತ್ತಿರುವುದು ಇನ್ನೊಂದು ಅನುಕೂಲ ಎನ್ನಬಹುದು. ಸಪ್ತರ್ಷಿಮಂಡಲ ಮತ್ತು ಸಹದೇವ (ಬೂಟಿಸ್) ಈ ಪುಂಜಗಳ ನಡುವೆ ಡಿಸೆಂಬರ್ ಮೊದಲ ವಾರದಲ್ಲಿ ಇದನ್ನು ಹುಡುಕುವ ಪ್ರಯತ್ನ ಮಾಡಬಹುದು. ಇದಾದರೂ ಬರಿಗಣ್ಣಿಗೆ ಕಾಣುವಂತಾಗುತ್ತದೆಯೇ ಎಂದು ಕಾದು ನೋಡೋಣ.

ಚಂದ್ರ ಒಂದು ತಿಂಗಳಿನ ತನ್ನ ಯಾತ್ರೆಯಲ್ಲಿ ಎಲ್ಲ ಗ್ರಹಗಳಿಗೂ ಭೇಟಿಕೊಟ್ಟು ಬರುವಾಗ ಕೆಲವನ್ನಾದರೂ ಮರೆ ಮಾಡುವುದು ಸಾಧ್ಯವಿದೆ. ರೋಹಿಣಿ, ಚಿತ್ರಾ, ಮಘಾ, ಹೀಗೆ ಕೆಲವು ಪ್ರಕಾಶಮಾನ ನಕ್ಷತ್ರಗಳು ಆಗಿಂದಾಗ್ಗೆ ಮರೆಯಾಗುವ ಸಂದರ್ಭ ಬರುತ್ತದೆ. ಶುಕ್ರಗ್ರಹವನ್ನು ಮರೆಮಾಡಿದ ಸಂದರ್ಭಗಳೂ ಇವೆ. ಇದೀಗ ಶನಿಗ್ರಹಕ್ಕೆ ಈ ಅವಕಾಶ ಸಿಕ್ಕಿದೆ.

ಮುಂದಿನ ವರ್ಷದುದ್ದಕ್ಕೂ ಪ್ರತಿ ತಿಂಗಳೂ ಶನಿಯನ್ನು ಚಂದ್ರ ಮುಚ್ಚಿಹಾಕುವ ಆಚ್ಛಾದನೆಗಳಿವೆ. ಡಿಸೆಂಬರ್ ೧ರಂದು ಮತ್ತು ೨೯ರಂದು ನಡೆಯಲಿರುವ ಆಚ್ಛಾದನೆಗಳಲ್ಲಿ ಎರಡನೆಯದು ಸ್ವಲ್ಪ ನಮಗೆ ನೋಡಲು ಅನುಕೂಲಕರವಾಗಿದೆ. ಆ ಎರಡೂ ದಿನಗಳಂದು ಬೆಳಗಿನ ಜಾವ ರೇಖಾಚಂದ್ರನ ಸನಿಹದಲ್ಲೇ ಕಾಣುವ ಚುಕ್ಕೆಯೇ ಶನಿ. ಬಹಳ ನಿಧಾನವಾಗಿ ಚಲಿಸುವ ಈ ಗ್ರಹವನ್ನು ನಕ್ಷತ್ರವೆಂದೇ ತಿಳಿಯಬಹುದು. ಆದ್ದರಿಂದ ೨೮ ದಿನಗಳ ಅಂತರದಲ್ಲಿ ಚಂದ್ರ ಪುನಃ ಅದೇ ಸ್ಥಾನಕ್ಕೆ ಹಿಂತಿರುಗುತ್ತದೆ. ಚಂದ್ರ ಚಿತ್ರಾ ನಕ್ಷತ್ರದ ಸನಿಹವೇ ೨೭ರಂದು ಕಾಣುವುದು. ಈ ವರ್ಷದುದ್ದಕ್ಕೂ ಪ್ರತಿ ತಿಂಗಳೂ (ಅಂದರೆ ೨೮ ದಿನಗಳ ಅಂತರದಲ್ಲಿ) ಚಂದ್ರ, ಚಿತ್ರಾ ನಕ್ಷತ್ರವನ್ನು ಮರೆಮಾಡುವ ಆಚ್ಛಾದನೆಗಳು ನಡೆದಿದ್ದವು. ಭೂಮಿಯನ್ನು ಸುತ್ತಲು ಚಂದ್ರನಿಗೆ ೨೮ ದಿನಗಳೇ ಸಾಕು ಎಂಬುದನ್ನು ಈ ಎರಡೂ ಉದಾಹರಣೆಗಳು ಸ್ಪಷ್ಟವಾಗಿ ತೋರಿಸಿಕೊಡುತ್ತವೆ. ಹಾಗಾದರೆ ಹುಣ್ಣಿಮೆಯಿಂದ ಹುಣ್ಣಿಮೆಗೆ ೨೯ ಅಥವಾ ೩೦ ದಿನಗಳೇಕೆ? ಈ ಪ್ರಶ್ನೆಗೂ ಉತ್ತರ ಆಕಾಶದಲ್ಲಿಯೇ ಇದೆ. ಚಂದ್ರ, ನಕ್ಷತ್ರಗಳ ಜೊತೆಗೆ ಸೂರ್ಯನನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಉತ್ತರ ಸರಳವಾಗಿ ಸಿಗುತ್ತದೆ.

ಸಂಜೆಯ ಆಕಾಶದಲ್ಲಿ ಎದ್ದುಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಶುಕ್ರ. ನೀಲಿ ಬಣ್ಣದ ಶುಭ್ರ ಆಕಾಶದಲ್ಲಿ ಇದನ್ನು ಹಗಲಿನಲ್ಲೇ ಗುರುತಿಸಬಲ್ಲ ಹವ್ಯಾಸೀ ವೀಕ್ಷಕರಿದ್ದಾರೆ. ಸಂಜೆ ನಾಲ್ಕು ಗಂಟೆಯ ಹೊತ್ತಿಗೆ ಸೂರ್ಯನ ಬಿಸಿಲು ಇರುವಾಗಲೂ ಈ ಗ್ರಹವನ್ನು ಗುರುತಿಸಬಹುದು. ಪ್ರಯತ್ನಿಸಿ. ಸ್ವಲ್ಪ ಪೂರ್ವಸಿದ್ಧತೆ ಅಗತ್ಯ. ರಾತ್ರಿ ಒಂಬತ್ತು ಗಂಟೆಯ ನಂತರ ಗುರುಗ್ರಹ ಪೂರ್ವ ದಿಕ್ಕಿನಲ್ಲಿ ಕಾಣತೊಡಗುತ್ತದೆ. ೧೯ರಂದು ಚಂದ್ರನ ಪಕ್ಕವೇ ಇರುತ್ತದೆ. ಮಂಗಳ ಗ್ರಹ ಮಧ್ಯರಾತ್ರಿಯ ನಂತರ ಉದಯಿಸುತ್ತದೆ. ಬೆಳಗಿನ ಜಾವಕ್ಕೆ ನೆತ್ತಿಗೆ ಬಂದಿರುತ್ತದೆ. ೨೬ರಂದು ಚಂದ್ರ ಇದರ ಪಕ್ಕವೇ ಕಾಣುತ್ತದೆ. ೨೭ರಂದು ಮುಂದೆ ಸರಿದು ಚಿತ್ರಾ ನಕ್ಷತ್ರದ ಪಕ್ಕ ಕಾಣುತ್ತದೆ.



6ರ ಸಂಜೆ ಶುಕ್ರ – ಚಂದ್ರರ ಜೋಡಿ

ಕಳೆದ ತಿಂಗಳು ಬೆಳಗಿನ ಜಾವ ಕಾಣುತ್ತಿದ್ದ ಬುಧ ಈಗ ಸೂರ್ಯನತ್ತ ಸರಿದಿದೆ. ೧ರಂದು ಶನಿ, ಚಂದ್ರಗಳ ಕೆಳಗೇ ಕಾಣುತ್ತದೆ. ಆ ಮುಂದೆ ಕಾಣುವ ಸಾಧ್ಯತೆ ಇಲ್ಲ.

೨೧ರ ರಾತ್ರಿ ೨೨:೪೧ಕ್ಕೆ ಉತ್ತರಾಯಣ. ಅಂದರೆ ಸೂರ್ಯ ದಕ್ಷಿಣದ ಅಂಚನ್ನು ಮುಟ್ಟಿ ಉತ್ತರಕ್ಕೆ ಮರಳುವ ಘಟನೆ. ಅದು ಅತಿ ಚಿಕ್ಕ ಅವಧಿಯ ಹಗಲಿನ ದಿನ ಎಂದು ನಮಗೆ ಪರಿಚಿತ. ಶೃಂಗೇರಿಯ ವಿದ್ಯಾಶಂಕರ ದೇವಾಲಯದಲ್ಲಿ ಉದಯಿಸುವ ಸೂರ್ಯನ ಕಿರಣಗಳು ಮಕರ ಎಂಬ ಚಿಹ್ನೆ ಹೊತ್ತ ಕಂಬದ ಮೇಲೆ ಬೀಳುತ್ತವೆ. ಉತ್ತರಾಯಣ ಮತ್ತು ಮಕರ ಸಂಕ್ರಮಣ ಎರಡೂ ಒಂದೇ ಆಗಿದ್ದ ಕಾಲದ ದೇವಸ್ಥಾನ ಅದು. ಇನ್ನೂ ಮುಖ್ಯವಾದ ಅಂಶವೆಂದರೆ ಆ ಮುಂಜಾವಿಗೆ ಮಾತ್ರ ದಕ್ಷಿಣದ ಬಾಗಿಲಿನಿಂದಲೂ ಬಿಸಿಲು ಒಳಗೆ ಪ್ರವೇಶಿಸುವುದು. ನಿಮ್ಮ ಊರಿನ ದೇವಾಲಯಗಳಲ್ಲಿಯೂ ಹೀಗೆ ಉತ್ತರಾಯಣ ಗುರುತಿಸುವ ಏರ್ಪಾಡು ಇರಬಹುದೇ ಎಂದು ಗಮನಿಸಿ. ಬಹುಶಃ ಇದೇ ಕಾರಣದಿಂದಲೋ ಏನೋ ಎಲ್ಲಾ ದೇವಸ್ಥಾನಗಳಲ್ಲಿ ಡಿಸೆಂಬರ್‌ನಲ್ಲಿ (ಧನುರ್ಮಾಸ ಎಂಬ ಹೆಸರಿನಿಂದ) ಮುಂಜಾವಿನಲ್ಲೇ ಪೂಜೆ ಆರಂಭವಾಗುತ್ತದೆ.

೧೨–೧೩ ಈ ಅವಧಿಯಲ್ಲಿ ಬೆಳಗಿನ ಜಾವ ಉಲ್ಕೆಗಳ ಸಂಖ್ಯೆ ಹೆಚ್ಚಾಗುವುದನ್ನು ಗಮನಿಸಬಹುದು. ಇದಕ್ಕೆ ಜೆಮಿನಿಡ್ಸ್ ಉಲ್ಕಾವೃಷ್ಟಿಯೇ ಕಾರಣ. ಮಿಥುನ ರಾಶಿಯ ದಿಕ್ಕಿನಿಂದ ಹೊರಟಂತೆ ಕಾಣುತ್ತವೆ. ಗಂಟೆಗೆ ೫೦–೧೦೦ ಉಲ್ಕೆಗಳು ಬಿದ್ದ ದಾಖಲೆ ಇದೆ. ಆದರೆ ಈ ಬಾರಿ ಚಂದ್ರನ ಬೆಳಕು ಹೆಚ್ಚಾಗಿರುವುದರಿಂದ ಕ್ಷೀಣ ಉಲ್ಕೆಗಳು ಕಾಣದಂತಾಗಬಹುದು.

**ಡಿಸೆಂಬರ್ ಖಗೋಳ ದಿನಚರಿ :**

೧ ಮುಂಜಾವು ಶನಿ–ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೧ ಬುಧ – ಚಂದ್ರ ಜೋಡಿ
೩ ಅಮಾವಾಸ್ಯೆ ೦೫:೫೨ಕ್ಕೆ
೪ ಚಂದ್ರ – ಭೂಮಿ ನಡುವಿನ ಅಂತರ ಕನಿಷ್ಠ
೬ ಸಂಜೆ ಚಂದ್ರ – ಶುಕ್ರ ಜೋಡಿ*
೯ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೨–೧೩ ಮುಂಜಾವು ಜೆಮಿನಿಡ್ಸ್ ಉಲ್ಕಾವೃಷ್ಟಿ
೧೭ ಹುಣ್ಣಿಮೆ ೧೪:೫೮ಕ್ಕೆ
೧೯ ರಾತ್ರಿ ಗುರು–ಚಂದ್ರ ಜೋಡಿ* ಚಂದ್ರ–ಭೂಮಿ ನಡುವಿನ ಅಂತರ ಗರಿಷ್ಠ
೨೦ ಶುಕ್ರಗ್ರಹದ ಹಿನ್ನಡೆ ಆರಂಭ
೨೧ ಉತ್ತರಾಯಣ ೨೨:೪೧ಕ್ಕೆ
೨೫ ಚಾಂದ್ರಮಾಸದ ಕೊನೆಯ ಪಾದ – (ಚಂದ್ರೋದಯ ನಡುರಾತ್ರಿಗೆ)
ಲವ್ ಜಾಯ್ ಧೂಮಕೇತು ಪುರರವಿಯಲ್ಲಿ
೨೯ ಮುಂಜಾವು ಚಂದ್ರ – ಶನಿ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
ಬುಧಗ್ರಹದ ಯುತಿ

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ|| ಬಿ. ಎಸ್. ಶೈಲಜಾ,** ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧

# ಕೊಡವ ಭಾಷೆ ಕನ್ನಡ ಭಾಷಾಜನ್ಯವೇ?

**ಕ**ನ್ನಡ ಮತ್ತು ಕೊಡವ ದ್ರಾವಿಡ ಭಾಷಾವರ್ಗಕ್ಕೆ ಸೇರಿರುವ ಭಾಷೆಗಳು. ಪೂರ್ವ ದ್ರಾವಿಡ ಭಾಷೆಯಿಂದ ಒಂದು ಕಾಲಘಟ್ಟದಲ್ಲಿ ಬೇರ್ಪಟ್ಟ ಈ ಎರಡೂ ಭಾಷೆಗಳು ಬೇರೆ ಬೇರೆ ಅವಸ್ಥಾ ಭೇದಗಳನ್ನು ದಾಟಿ ಆಧುನಿಕ ಕಾಲಘಟ್ಟಕ್ಕೆ ಬಂದು ನಿಂತಿವೆ. ಕನ್ನಡದಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಎಂಬ ಭಾಷಾ ಮಜಲುಗಳನ್ನು ಹೇಗೆ ಗುರುತಿಸುತ್ತೇವೆಯೋ ಹಾಗೆಯೇ ಕೊಡವ ಭಾಷೆಯಲ್ಲೂ ಈ ರೀತಿಯ ಭಾಷಾ ಹಂತಗಳಿದ್ದು, ಕನ್ನಡ ಭಾಷೆಯಂತೆ ನಿರ್ದಿಷ್ಟವಾದ ಕಾಲಘಟ್ಟದಲ್ಲಿ ಗುರುತಿಸಲು ಬರುವದಿಲ್ಲ. ಕಾರಣ ಕನ್ನಡ ಭಾಷೆಗೆ ಲಿಪಿ ಮತ್ತು ಸಾಹಿತ್ಯ ಆಕರವಾದರೆ ಕೊಡವ ಭಾಷೆ ಕೇವಲ ಆಡುಭಾಷೆಯ ನೆಲೆಯಲ್ಲಷ್ಟೇ ಇದೆ.

ಕೊಡವ ಭಾಷೆಯ ಬಗ್ಗೆ ಅನೇಕ ಭಾಷಾಶಾಸ್ತ್ರಜ್ಞರು ಮತ್ತು ಭಾಷಾವಿಜ್ಞಾನಿಗಳು ನೀಡಿರುವ ವ್ಯಾಖ್ಯಾನಗಳು ಈ ಕೆಳಕಂಡಂತಿವೆ :

"ಕೊಡವ ಭಾಷೆ ಸ್ವತಂತ್ರವಾದ ದ್ರಾವಿಡ ಭಾಷೆಯಲ್ಲವೆಂದೂ ಇದು ಕನ್ನಡದ ಉಪಭಾಷೆ ಎಂದು ೧೮೧೬ರಲ್ಲಿ ಎಲ್ಲಿಸ್ ಹೇಳಿದರೆ; ಕೊಡವ ಭಾಷೆ ತಮಿಳು ಮತ್ತು ಮಲಯಾಳಂ ಭಾಷೆಗೆ ಹತ್ತಿರವಾಗಿದೆ" ಎಂದು ೧೮೫೬ರಲ್ಲಿ ಮೋಗ್ಲಿಂಗ್ ಅಭಿಪ್ರಾಯ ಪಟ್ಟಿದ್ದಾರೆ.

ಆದರೆ ೨೦ನೇ ಶತಮಾನದ ಆರಂಭದಲ್ಲಿ ಭಾಷಾ ವಿಜ್ಞಾನಿಗಳು ಇದೊಂದು ಸ್ವತಂತ್ರವಾದ ದ್ರಾವಿಡ ಭಾಷೆಯೆಂದು ಗುರುತಿಸಿದರು.

"ಕೊಡವ ಭಾಷೆ ಇತರೆ ದ್ರಾವಿಡ ಭಾಷೆಗಳಿಗಿಂತ ವಿಭಿನ್ನವಾದ ಸ್ವರ ವಿಶೇಷತೆಯನ್ನು ಹೊಂದಿದೆ. ಹೆಚ್ಚಿನ ದ್ರಾವಿಡ ಭಾಷೆಗಳು ಐದು ಹ್ರಸ್ವ ಸ್ವರ ಮತ್ತು ಐದು ದೀರ್ಘ ಸ್ವರಗಳನ್ನು ಹೊಂದಿದ್ದರೆ, ಕೊಡವ ಭಾಷೆ ಈ ಐದೈದು ಸ್ವರಗಳೊಂದಿಗೆ ಇನ್ನೆರಡು ಹೆಚ್ಚಿನ ಸ್ವರಗಳನ್ನು ಹೊಂದಿರುತ್ತದೆ. ಅವುಗಳೆಂದರೆ ಅರ್ಧಸಂವೃತ ಅವೃತ್ತ ಮಧ್ಯಸ್ವರ ಮತ್ತು ಅರ್ಧ ವಿವೃತ ಅವೃತ್ತ ಮಧ್ಯಸ್ವರ" ಎಂದು ೧೯೭೬ರಲ್ಲಿ ಬಾಲಕೃಷ್ಣ ಅವರು ತಮ್ಮ ಅಧ್ಯಯನದ ಮೂಲಕ ಗುರುತಿಸಿದ್ದಾರೆ.

ಒಂದು ಭಾಷೆಯ ವಿಶಿಷ್ಟತೆಯನ್ನು ಗುರುತಿಸಬೇಕಾದರೆ ಆ ಭಾಷೆಯ ಧ್ವನಿ, ಅರ್ಥ, ವಾಕ್ಯ, ಪದಕೋಶ ಮತ್ತು ನುಡಿಗಟ್ಟುಗಳೆಲ್ಲವನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡಬೇಕಾಗುತ್ತದೆ. ಕೊಡವ ಭಾಷೆ ಕನ್ನಡ ಭಾಷೆಯಿಂದ ಹುಟ್ಟಿದೆಯೋ ಅಥವಾ ಅದಕ್ಕೆ ಹತ್ತಿರವಾಗಿದೆಯೋ ಹೇಗೆಂಬುದನ್ನು ನಿರ್ಣಯಿಸುವಾಗ ಸಾಮಾನ್ಯ ವ್ಯವಹಾರಕ್ಕೆ ಅಗತ್ಯವಾಗಿ ಬೇಕಾಗುವ ಪದಗಳನ್ನು ಅವುಗಳ ಸಾಮ್ಯ-ವೈಷಮ್ಯಗಳ ಆಧಾರದ ಮೇಲೆ ಗಮನಿಸಬೇಕು.




ಕೊಡವ ಭಾಷೆ ಕನ್ನಡದ ಉಪಭಾಷೆಯಲ್ಲ. ಕನ್ನಡದಷ್ಟೇ ಸ್ವತಂತ್ರವಾದ ದ್ರಾವಿಡ ಭಾಷೆಯೆಂದು ಈ ಮೇಲೆ ಹೇಳಿರುವ ಅಭಿಪ್ರಾಯಗಳಿಂದ ತಿಳಿಯಬಹುದಾಗಿದೆ. ಈ ಭಾಷೆ ಬರೆವಣಿಗೆಗೆ ಕನ್ನಡ ಲಿಪಿಯನ್ನು ಅವಲಂಬಿಸಿದ್ದರೂ ದ್ರಾವಿಡ ಭಾಷೆಗಳ ಅಧ್ಯಯನಕ್ಕೆ ತಮಿಳು, ಮಲಯಾಳ, ಕನ್ನಡ, ತೆಲುಗು ಮತ್ತು ತುಳು ಭಾಷೆಗಳಷ್ಟೇ ಸಹಕಾರಿಯಾಗಿದೆ.

**ಅ) ದೇಹದ ಭಾಗಗಳು**

| | ಕನ್ನಡ | ಕೊಡವ |
|---|---|---|
| ೧. | ತಲೆ, ಮಂಡೆ | ಮಂಡೆ |
| ೨. | ಕಾಲ್, ಕಾಲು | ಕಾಲ್ |
| ೩. | ಕರ್ಣ, ಕಣ್ಣು | ಕಣ್ |
| ೪. | ಮೂಗು | ಮೂಕ್ |
| ೫. | ಕಿವಿ | ಕೆಮಿ |

**ಆ) ಸಂಬಂಧವಾಚಿ ಶಬ್ದಗಳು**

| | | |
|---|---|---|
| ೧. | ಅಪ್ಪ, ಅಯ್ಯ | ಅಪ್ಪ, ಅಯ್ಯ |
| ೨. | ಅಮ್ಮ, ಅವ್ವ | ಅಮ್ಮ, ಅವ್ವ |
| ೩. | ಮಗ | ಮೋಂವ |
| ೪. | ಮಗಳು | ಮೋವ |

**ಇ) ಸಂಖ್ಯಾ ವಾಚಕಗಳು**

| | | |
|---|---|---|
| ೧. | ಒಂದು | ಒಂದ್ |
| ೨. | ಎರಡು | ದಂಡ್, ಈರಂಡ್ |
| ೩. | ಮೂರು | ಮೂಂದ್ |
| ೪. | ನಾಲ್ಕು | ನಾಲ್ |

ಈವರೆಗೂ ಕೊಟ್ಟಿರುವ ಸಾಮಾನ್ಯ ವ್ಯವಹಾರದಲ್ಲಿ ಬಳಸುವ ಪದಗಳನ್ನು ಗಮನಿಸಿದರೆ ಕೆಲವು ಕಡೆ ಸಾಮ್ಯತೆಯಿದ್ದು ಕೆಲವು ಪದಗಳು ಕನ್ನಡಕ್ಕಿಂತ ಬೇರೆಯಾಗಿವೆ ಅಥವಾ ವ್ಯತ್ಯಾಸದಿಂದ ಕೂಡಿವೆ.

ಕೊಡವ ಭಾಷೆ ಕಾಲಸೂಚಕ ಪ್ರತ್ಯಯವನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಆಗುವ ಬದಲಾವಣೆಯನ್ನು ಗಮನಿಸಬೇಕು. ಇದು ಕನ್ನಡ ಭಾಷೆಯಲ್ಲಿರುವ ವ್ಯವಸ್ಥೆಗಿಂತಲೂ ತೀರಾ ಭಿನ್ನವಾಗಿದೆ. ಕನ್ನಡ ವಾಕ್ಯಗಳನ್ನು ಕೊಡವ ಭಾಷೆಯ ವಾಕ್ಯಗಳೊಂದಿಗೆ ಹೋಲಿಸಿ ನೋಡಿದಾಗ ವ್ಯತ್ಯಾಸವನ್ನು ತಿಳಿಯಬಹುದು :

**ಡಾ॥ ಎಂ. ಟಿ. ರತಿ**

೧. ಅವನು ತೋಟಕ್ಕೆ ಹೋದನು — ಅಂವ ತೋಟಕ್ಕ್ ಪೋಚಿ
೨. ಅವಳು ತೋಟಕ್ಕೆ ಹೋದಳು — ಅವ ತೋಟಕ್ಕ್ ಪೋಚಿ
೩. ಅದು ತೋಟಕ್ಕೆ ಹೋಯಿತು — ಅದ್ ತೋಟಕ್ಕ್ ಪೋಚಿ
೪. ಅವರು ತೋಟಕ್ಕೆ ಹೋದರು — ಅಯಿಂಗ ತೋಟಕ್ಕ್ ಪೋಚಿ
೫. ಅವು ತೋಟಕ್ಕೆ ಹೋದವು — ಅವು ತೋಟಕ್ಕ್ ಪೋಚಿ
೬. ನಾನು ತೋಟಕ್ಕೆ ಹೋದೆನು — ನಾನ್ ತೋಟಕ್ಕ್ ಪೋನ
೭. ನೀನು ತೋಟಕ್ಕೆ ಹೋದೆ — ನೀನ್ ತೋಟಕ್ಕ್ ಪೋಯ
೮. ನಾವು ತೋಟಕ್ಕೆ ಹೋದೆವು — ನಂಗ ತೋಟಕ್ಕ್ ಪೋಚಿ
೯. ನೀವು ತೋಟಕ್ಕೆ ಹೋದಿರಿ — ನಿಂಗ ತೋಟಕ್ಕ್ ಪೋಯಿರ

ಕನ್ನಡ ಭಾಷೆಯಲ್ಲಿ ಕಾಲವಾಚಕ ಕ್ರಿಯಾಪದದ ಸಹಾಯದಿಂದ ಪ್ರಥಮ, ಮಧ್ಯಮ ಮತ್ತು ಉತ್ತಮ ಪುರುಷಗಳ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಏಕವಚನ ಮತ್ತು ಬಹುವಚನ ಸರ್ವನಾಮವನ್ನು ನಾವೇ ಊಹಿಸಬಹುದು. ಆದರೆ ಕೊಡವ ಭಾಷೆಯಲ್ಲಿ ಇದು ಸಾಧ್ಯವಿಲ್ಲ. ಏಕೆಂದರೆ ಇಲ್ಲಿ ಉತ್ತಮ ಹಾಗೂ ಮಧ್ಯಮಪುರುಷಗಳ ಏಕವಚನ ಮತ್ತು ಬಹುವಚನ ಕಾಲಪ್ರತ್ಯಯಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ಪುರುಷವಾಚಿಗಳಿಗೆ ಕಾಲವಾಚಕ ಕ್ರಿಯಾಪದ ಒಂದೇ ಆಗಿರುತ್ತದೆ.

**'ಕೊಡು'** ಮತ್ತು **'ತಾ'** ಎಂಬ ಕ್ರಿಯಾಧಾತುಗಳ ಬಳಕೆಯಲ್ಲಿ ಈ ಎರಡೂ ಭಾಷೆಗಳಲ್ಲಿರುವ ವ್ಯತ್ಯಾಸವನ್ನು ಕೆಳಗೆ ಕೊಟ್ಟಿರುವ ವಾಕ್ಯಗಳ ಮೂಲಕ ತಿಳಿಯಬಹುದು :

೧. ನನಗೆ ತಿಂಡಿ ಕೊಡು — ನಾಕ್ ತಿಂಡಿ ತಾ
೨. ನಿನಗೆ ತಿಂಡಿ ಕೊಡಲಿ — ನೀಕ್ ತಿಂಡಿ ತರಡ್
೩. ನಮಗೆ ತಿಂಡಿ ಕೊಡು — ನಂಗಕ್ ತಿಂಡಿ ತಾ
೪. ನಿಮಗೆ ತಿಂಡಿ ಕೊಡಲಿ — ನಿಂಗಕ್ ತಿಂಡಿ ತರಡ್
೫. ಅವನಿಗೆ ತಿಂಡಿ ಕೊಡು — ಅವಂಗ್ ತಿಂಡಿ ಕೊಡ್‌ಕಡ್
೬. ಅವಳಿಗೆ ತಿಂಡಿ ಕೊಡು — ಅವಕ್ ತಿಂಡಿ ಕೊಡ್‌ಕಡ್
೭. ಅವರಿಗೆ ತಿಂಡಿ ಕೊಡು — ಅಯಿಂಗಕ್ ತಿಂಡಿ ಕೊಡ್‌ಕಡ್
೮. ಅವುಗಳಿಗೆ ತಿಂಡಿ ಕೊಡು — ಅಯಿಂಗಕ್ ತಿಂಡಿ ಕೊಡ್‌ಕಡ್

ಕನ್ನಡ ಭಾಷೆಯಲ್ಲಿ ಉತ್ತಮ, ಮಧ್ಯಮ ಮತ್ತು ಪ್ರಥಮ ಪುರುಷವಾಚಿಗಳಿಗೆ **'ಕೊಡು'** ಎಂಬ ಕ್ರಿಯಾಪದ ಬಳಕೆಯಾದರೆ ಕೊಡಗು ಭಾಷೆಯಲ್ಲಿ ಉತ್ತಮ ಮತ್ತು ಮಧ್ಯಮ ಪುರುಷವಾಚಿಗಳಿಗೆ **'ತಾ'** ಧಾತುವಿನಿಂದ ಬಂದ **'ತರು'** ಎಂಬ ಕ್ರಿಯಾಪದ ಬಳಕೆಯಾಗುತ್ತದೆ. ಆದರೆ ಪ್ರಥಮ ಪುರುಷವಾಚಿಗೆ ಏಕವಚನ, ಬಹುವಚನವೆಂಬ ವ್ಯತ್ಯಾಸವಿಲ್ಲದೆ **'ಕೊಡು'** ಕ್ರಿಯಾಪದ ಬಳಕೆಯಾಗುವುದನ್ನು ಕಾಣಬಹುದು.

ಕನ್ನಡ ಮತ್ತು ಕೊಡವ ಭಾಷೆಗಳ ವಚನ ಪ್ರತ್ಯಯಗಳ ಬಳಕೆಯಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ. ಕನ್ನಡ ಭಾಷೆಯಲ್ಲಿ ಮನುಷ್ಯ ಮತ್ತು ಪ್ರಾಣಿವರ್ಗಗಳಿಗೆ ಬೇರೆ ಬೇರೆ ಪ್ರತ್ಯಯಗಳು ಬಳಕೆಯಾಗುತ್ತವೆ.

ಅತ್ತೆ – ಅತ್ತೆಯವರು, ಅತ್ತೆಯಂದಿರು
ಹುಡುಗಿ – ಹುಡುಗಿಯರು
ಕತ್ತೆ – ಕತ್ತೆಗಳು
ನಾಯಿ – ನಾಯಿಗಳು
ತಂಗೆ (ತಂಗಿ) – ತಂಗೆಯ (ತಂಗಿಯರು/ತಂಗಿಯಂದಿರು)
ಮೂಡಿ (ಹುಡುಗಿ) – ಮೂಡಿಯ (ಹುಡುಗಿಯರು)
ಕತ್ತೆ – ಕತ್ತೆಯ (ಕತ್ತೆಗಳು)
ನಾಯಿ – ನಾಯಿಯ (ನಾಯಿಗಳು)

ಕನ್ನಡದಲ್ಲಿ 'ಎ'ಕಾರ ಮತ್ತು 'ಇ'ಕಾರದಿಂದ ಕೊನೆಗೊಳ್ಳುವ ಪದಗಳಿಗೆ ಬಹುವಚನ ಪ್ರತ್ಯಯ ಮನುಷ್ಯ ಮತ್ತು ಪ್ರಾಣಿವರ್ಗಗಳಿಗೆ ಬೇರೆಯಾಗಿರುತ್ತದೆ. ಆದರೆ ಕೊಡವ ಭಾಷೆಯಲ್ಲಿ ಯಾವುದೇ ವರ್ಗಕ್ಕೆ ಸೇರಿದ್ದರೂ ಬಹುವಚನ ಪ್ರತ್ಯಯ ಮಾತ್ರ ಒಂದೇ ಆಗಿರುತ್ತದೆ.

ಕೊಡವ ಮತ್ತು ಕನ್ನಡ ಭಾಷೆಗಳಲ್ಲಿ ಕೆಲವು ಪದಗಳು ಮೇಲ್ನೋಟಕ್ಕೆ ಒಂದೇ ರೀತಿಯಂತಿದ್ದರೂ ಧ್ವನಿ ಉಚ್ಚಾರಣೆಯಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಉದಾಹರಣೆ : ಕಾಲ್, ಕಣ್, ಅಪ್ಪ, ಅವ್ವ ಇತ್ಯಾದಿ.

ರೆ॥ ರಾಬರ್ಟ್ ಕಾಲ್ಡ್‌ವೆಲ್ (Comparitive grammar of the Dravidian languages - 1856) ಅವರು ಕೊಡವ ಭಾಷೆಯ ಬಗ್ಗೆ ಅಧ್ಯಯನ ಮಾಡಿ ಹೇಳಿರುವ ಮಾತುಗಳೇನೆಂದರೆ : "ಕೊಡವ ಭಾಷೆಗೆ ಸ್ವತಂತ್ರವಾದ ಸ್ಥಾನವನ್ನು ಕೊಡಲಾಗಿದ್ದಿಲ್ಲ. ಕನ್ನಡ ಭಾಷಾ ವಿಭಾಗದಲ್ಲಿ ಅದನ್ನು ಸೇರ್ಪಡೆ ಮಾಡಲಾಗಿತ್ತು. ಅದು ಕನ್ನಡದ ಉಪಭಾಷೆಯೆಂದೂ ತುಳುಭಾಷೆಯಿಂದ ಮಾರ್ಪಾಡು ಹೊಂದಿತೆಂದೂ ಗಣಿಸಲಾಯಿತು. ಆದರೆ ಸ್ವತಂತ್ರ ಭಾಷೆಯೆಂದಲ್ಲ. ಕೊಡಗರ ಭಾಷೆಯು ಕನ್ನಡಕ್ಕಿಂತಲೂ ತಮಿಳು–ಮಲಯಾಳ ಭಾಷೆಗಳಿಗೆ ನಿಕಟ ಸಂಬಂಧ ಇದೆಯೆಂಬ ಅಭಿಪ್ರಾಯವನ್ನು ಮೋಗ್ಲಿಂಗ್ ಹೇಳಿದ್ದರು. ಆದರೆ ಕೊಡವ ಭಾಷೆಯು ದ್ರಾವಿಡ ಮೂಲದ ಭಾಷೆಗಳಲ್ಲಿ ಯಾವುದರ ನಿಕಟ ಸಂಬಂಧ ಪಡೆದಿದೆಯೆಂಬುದು ನನಗೆ ಇನ್ನೂ ನಿಚ್ಚಳವಾಗಿಲ್ಲ. ಒಟ್ಟಿನಲ್ಲಿ ಹಳಗನ್ನಡ ಮತ್ತು ತುಳು ಇವುಗಳ ಮಧ್ಯದಲ್ಲಿ ಅದಕ್ಕೆ ಸ್ಥಾನವಿರುವುದೆಂದೆಣಿಸುವುದು ಸುರಕ್ಷಿತವೆಂದು ಕಾಣುತ್ತಿದೆ. ಉಚ್ಚಾರಣೆಯ ವಿಶಿಷ್ಟತೆಗಳಿಂದ ಪರರನ್ನು ಗೊಂದಲಕ್ಕೀಡು ಮಾಡುವ ಗುಣ ತುಳುವಿನಂತೆ ಈ ಭಾಷೆಗೂ ಇದೆ."

ಕಾಲ್ಡ್‌ವೆಲ್ಲರ ಅಭಿಪ್ರಾಯಗಳಲ್ಲಿ ಕೊನೆಯ ಸಾಲನ್ನು ಗಣನೆಗೆ ತೆಗೆದುಕೊಂಡು ಹೇಳುವುದಾದರೆ "ಉಚ್ಚಾರಣೆಯ ವಿಶಿಷ್ಟತೆಗಳಿಂದ ಗೊಂದಲಕ್ಕೀಡುಮಾಡುವ ಗುಣ ಈ ಭಾಷೆಗೂ ಇದೆ."

ಉದಾಹರಣೆ : ಮೈಮ (maima) – ಸೊಸೆ
ಮೈಮ maimë – ಅಳಿಯ

ಮೇಲಿನೆರಡು ಪದಗಳ ಬರವಣಿಗೆಯ ರೂಪ ಒಂದೇ ಆದರೂ ಈ ಎರಡು ಪದಗಳ ಧ್ವನಿವ್ಯತ್ಯಾಸದಿಂದ ಮಾತ್ರ ಅರ್ಥವ್ಯತ್ಯಾಸವನ್ನು ತಿಳಿಯಬಹುದು.

ಎಂತ (entë) – ಏನು
ಎತ್ (ëntï) – ಎತ್ತು
ಕಾಲ್ (kālï) – ಕಾಲು
ದಂಡ್ (dandï) – ಎರಡು

ಕೊಡವ ಭಾಷೆ ಕನ್ನಡದ ಉಪಭಾಷೆಯಲ್ಲ. ಕನ್ನಡದಷ್ಟೇ ಸ್ವತಂತ್ರವಾದ ದ್ರಾವಿಡ ಭಾಷೆಯೆಂದು ಈ ಮೇಲೆ ಹೇಳಿರುವ ಅಭಿಪ್ರಾಯಗಳಿಂದ ತಿಳಿಯ ಬಹುದಾಗಿದೆ. ಈ ಭಾಷೆ ಬರೆವಣಿಗೆಗೆ ಕನ್ನಡ ಲಿಪಿಯನ್ನು ಅವಲಂಬಿಸಿದ್ದರೂ ದ್ರಾವಿಡ ಭಾಷೆಗಳ ಅಧ್ಯಯನಕ್ಕೆ ತಮಿಳು, ಮಲಯಾಳ, ಕನ್ನಡ, ತೆಲುಗು ಮತ್ತು ತುಳು ಭಾಷೆಗಳಷ್ಟೇ ಸಹಕಾರಿಯಾಗಿದೆ.

**ಡಾ॥ ಎಂ. ಟಿ. ರತಿ**
ಅಸೋಸಿಯೇಟ್ ಪ್ರೊಫೆಸರ್, ಕನ್ನಡ ವಿಭಾಗ, ಕ್ರೈಸ್ಟ್ ಯೂನಿವರ್ಸಿಟಿ
ಬೆಂಗಳೂರು – ೫೬೦ ೦೨೯

**The Coorgi-Cox alphabet**

| | | | | | | | |
|---|---|---|---|---|---|---|---|
| A | | Dh | | M | | V | |
| E | | F | | N | | W | |
| I | | G | | P | | Y | |
| O | | Gh | | R | | Z | |
| U | | H | | Rh | | ae | |
| B | | J | | S | | ai | |
| Bh | | K | | Sh | | oi | |
| Ch | | Kh | | T | | | |
| D | | L | | Th | | ¢ | (double vowel) |




ಪ್ರೊ॥ ಶಿವರಾಮಯ್ಯ

# ಅಭಿವೃದ್ಧಿ ಬುಲ್ಡೋಝರ್ ಅಡಿಯಲ್ಲಿ ನಲುಗಿಹೋಗುತ್ತಿರುವ ಜೀವಜಾಲ

'ಅನಿಕೇತನ ಪ್ರಜ್ಞೆ' ಎಂಬ ಅಮೃತ ನುಡಿ ಕೊಟ್ಟ ಕನ್ನಡ ಕವಿ ಕುವೆಂಪು ನಿರ್ವಚಿಸಿರುವಂತೆ, ಕಳೆದ ಶತಮಾನದ ಯುಗ ಮೌಲ್ಯಗಳನ್ನು ಸಂಗ್ರಹಿಸಿ ಹೇಳುವುದಾದರೆ, ಅದು ವೈಚಾರಿಕತೆ ಮತ್ತು ವೈಜ್ಞಾನಿಕ ಮನೋಧರ್ಮಗಳನ್ನು ಬಿತ್ತಿ ಬೆಳೆಯಿತು, ನಿರಂಕುಶಮತಿಗಳಾಗಿ ಎಂದು ವಿಚಾರ ಕ್ರಾಂತಿಯ ದೀವಟಿಗೆ ಬೆಳಗಿತು; ಹಳೆ ಮತದ ಕೊಳೆಯೆಲ್ಲ ಹೊಸಮತಿಯ ಹೊಳೆಯಲ್ಲಿ ಕೊಚ್ಚಿ ಹೋಗಲಿ, ಬರಲಿ ವಿಜ್ಞಾನ ಬುದ್ಧಿ ಎಂದು ಹಾರೈಸಿತು, ಜಾತಿಮತ ವರ್ಣಾಶ್ರಮಗಳ ಸಮೂಲ ನಾಶವೇ ವಿಶ್ವಮಾನವ ಸಂದೇಶವೆಂದು ಸಾರಿ ಹೇಳಿತು; ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿಯ ಕಹಳೆ ಮೊಳಗಿಸಿತು. ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂದು ಸಾಮಾಜಿಕ ಬದ್ಧತೆ ಮೆರೆಯಿತು. ಇದೇ ಶತಮಾನದಲ್ಲಿ ಎರಡು ವಿಶ್ವ ಯುದ್ಧಗಳು ಜರುಗಿ ಸಾಕಷ್ಟು ಜೀವ ಹಾನಿಯಾದರೂ ಸಹ ವಿಶ್ವಸಂಸ್ಥೆಯಂಥ ಮಹಾ ಸಂಘಟನೆಯನ್ನು ಕಟ್ಟಿ, ಮನುಜಮತ ವಿಶ್ವಪಥವೆಂಬ ಲೋಕ ಸಂಹಿತೆಗೆ ನಾಂದಿ ಹಾಡಿ ಜಾಗತಿಕ ನೆಮ್ಮದಿಗೆ ಮುನ್ನುಡಿ ಬರೆಯಿತು.

ಇದೇ ಧಾತು-ಧೋರಣೆಯನ್ನು ಬೆನ್ನಿಗೆ ಕಟ್ಟಿಕೊಂಡೇ ಇಪ್ಪತ್ತೊಂದನೆಯ ಶತಮಾನ ಪಾದಾರ್ಪಣ ಮಾಡಿತಾದರೂ ಇದರ ಕಾಳಜಿ ಹಾಗೂ ಕಾರ್ಯತತ್ಪರತೆ ಏನಿದ್ದರೂ ಅಭಿವೃದ್ಧಿಯತ್ತ. ಭೌತಿಕ ಅಭಿವೃದ್ಧಿಯೇ ನಮ್ಮ ಪ್ರಗತಿ ಎಂದು ತಪ್ಪು ಕಲ್ಪಿಸಿಕೊಂಡಿರುವ ಈ ಯುಗಮಾನವ ಮಾತು ಮಾತಿಗೆ ಅಭಿವೃದ್ಧಿ ಮಂತ್ರ ಪಠಣ ಮಾಡುತ್ತ ಬುಲ್ಡೋಝರ್ ರಥಯಾತ್ರೆ ಕೈಗೊಂಡಿದ್ದಾನೆ. ಆ ಬುಲ್ಡೋಝರ್ ಅಡಿಯಲ್ಲಿ ಸಿಲುಕಿದ ಸಾಮಾನ್ಯ ಜೀವಜಾಲ ತನ್ನ ಬದುಕುವ ಹಕ್ಕನ್ನೇ ಕಳೆದುಕೊಂಡು ನಶಿಸಿಹೋಗುತ್ತಿದೆ. ಇಪ್ಪತ್ತೊಂದನೆಯ ಶತಮಾನದ ಧರ್ಮ ದುರಂತ ಇದು. ಬೆರಳೆಣಿಕೆಯ ಕೆಲವರ ಐಷಾರಾಮಿ ಭೋಗೋಪಭೋಗಕ್ಕಾಗಿ ಬಹುಜನರ ಜೀವ ತಳಮಳಕ್ಕೀಡಾಗುತ್ತಿದೆ. ಪ್ರಪಂಚದ ಭೂಪಟವನ್ನು ಮುಂದೆ ಹರಡಿಕೊಂಡು ಸಿಂಹಾವಲೋಕನ ಕ್ರಮದಲ್ಲಿ ಪರಿವೀಕ್ಷಣೆ ಮಾಡುವುದಾದರೆ ಅಭಿವೃದ್ಧಿಯ ಬುಲ್ಡೋಝರ್ ಇರುವುದೊಂದೇ ಈ ಭೂಮಿಗೆ ಬಗೆದಿರುವ ಗಾಯಗಳ ಭೀಷಣತೆಯ ಅರಿವು ನಮಗಾದೀತು.

ಯೂರೋಪಿನವರ ಖಂಡಾಂತರ ಕೊಳ್ಳೆ ಆರಂಭವಾದದ್ದು ಕೊಲಂಬಸ್ ಮತ್ತು ವಾಸ್ಕೋಡಿಗಾಮರು ಹೊಸ ಹೊಸ ಭೂಪ್ರದೇಶಗಳ ಅನ್ವೇಷಣೆಯೊಂದಿಗೆ. ಈ ಸಾಹಸಿ ಪ್ರವಾಸಿಗರನ್ನು ಹಿಂಬಾಲಿಸಿ ಬಂದ ವಿದೇಶಿ ಸಾಮ್ರಾಜ್ಯಶಾಹಿಗಳು ವ್ಯಾಪಾರಕ್ಕೆಂದು ಬಂದವರು. ಇವರು ಸಾಮ್ರಾಜ್ಯ ಸ್ಥಾಪಿಸಿ, ತಾವು ಹಿಡಿತ ಸ್ಥಾಪಿಸಿಕೊಂಡ ದೇಶಗಳ ನೈಸರ್ಗಿಕ ಸಂಪತ್ತನ್ನು ತಮ್ಮ ಸ್ವದೇಶಗಳಿಗೆ ಸಾಗಿಸುತ್ತಾ ಬಂದರು. ಬಾಯಲ್ಲಿ ಪ್ರಜಾಪ್ರಭುತ್ವ ಸಂಸ್ಥಾಪನೆಯ ಮಂತ್ರ, ಕಾರ್ಯತಃ ಇಲ್ಲಿನ ಅಪಾರ ಸಂಪತ್ತನ್ನು ತಮ್ಮ ದೇಶಗಳಿಗೆ ಸಾಗಿಸುವ ತಂತ್ರ ಇವರದಾಗಿತ್ತು. ಉಷ್ಣವಲಯದ ಭೂ ಖಂಡಗಳಾದ




# ಚಿತ್ತಶುದ್ಧಿ

ದುಃಖಿಸಬೇಕು, ಅಂದುಕೊಂಡಾಗ
ಕತ್ತಲೂ ನನ್ನೊಂದಿಗೆ ಬಿಕ್ಕುತ್ತದೆ.
ಯಾವನೋ ಕರೆದು ಕೊಂಕು ಮಾತಾಡಿಸಿದ
ಖರೆ, ನಾನು ಸಾಕ್ಷಾತ್ ಸತ್ತುಹೋಗಿದ್ದೆ.
ತರಗೆಲೆಯಲ್ಲಿ ತೆವಳುವ ಹಾವು, ಮೂಡಣ ದಿಕ್ಕಿನ ಹಲ್ಲಿ
ಉದರ ಬಸುರ ಕಂಕುಳ ಕೂಸು
ಮೈ ಅದುರಿದ ಹೋರಿಯ ದಪ್ಪ ಚರ್ಮ
ವ್ಯಾಪಾರ ಬುದ್ಧಿಯ ಅಂತರ್ಗತ ಧರ್ಮ
ಕಾರಣಿಕದ ಕಚಗುಳಿ ಇಟ್ಟ ಕರ್ಮ
ಥೇ !
ಸೂಜಿ ಮೊನೆಯ ನೋವ ಸಹನೆ ಅಸಾಧ್ಯ ?
ಯಾವನೋ ಕರೆದು ಕೊಂಕು ಮಾತಾಡಿದ್ದ ಸಿಟ್ಟಿಗೆ
ಗರ್ವದ ಸಂಕಲ್ಪ
ನಳಿಕೆಗಳೆರಡರ ನಡುವೆ ಕೂತ ಗುರಿ
ಕಿರಗುಡುವ ರಥದ ಹೂತ ಚಕ್ರ ?
ಸಾಯುವ ಹಿಂದಿನ ದಿನ
ನನ್ನ ಗೋರಿ ಕತ್ತಲ ಗೂಡು;
ಮಿಣಕ ಮಿಂಚು ತಥ್ಥಾತಿಥ್ಥಿ
ಕಾವಿಗೆ ಕುಳಿತ ಪಾರಿವಾಳದ ಕಾಲ ಕೆಳಗೆ
ರೆಕ್ಕೆಯ ಒಡಲೊಳಗೆ ತತ್ತಿಗಳು
ಎರಡೇ !
ಅಂಗೈ ಮತ್ತು ಲಿಂಗದ ನಡುವೆ ಸತ್ತ ಅಧ್ಯಾತ್ಮ
ಅಧ್ಯಾತ್ಮದ ಒಣ ಧರಣಿ ಚಿತ್ತಶುದ್ಧಿ.

– ಅಮಾಸ

ಮಹದೇವ ಹಡಪದ
ಪ್ರಶಿಕ್ಷಕರು, ರಂಗಪ್ರಯೋಗ ಶಾಲೆ
ಸಾಣೇಹಳ್ಳಿ – ೫೭೭ ೫೧೫

ದಕ್ಷಿಣ ಅಮೆರಿಕಾ, ಆಫ್ರಿಕಾ, ಇಂಡಿಯಾ ಮುಂತಾದ ದೇಶಗಳ ಅಪಾರ ಸಂಪನ್ಮೂಲಗಳನ್ನೂ ಅಮಾಯಕ ಮೂಲ ನಿವಾಸಿ (ನೀಗ್ರೋ)ಗಳನ್ನೂ ಗುಲಾಮರನ್ನಾಗಿ ದುಡಿಸಿಕೊಂಡರು ಮತ್ತು ಇಲ್ಲಿ ದೊರೆಯುವ ಚಿನ್ನ, ವಜ್ರ, ಕಲ್ಲಿದ್ದಲು, ಕಬ್ಬಿಣದ ಅದಿರು, ಬಾಕ್ಸೈಟ್, ಮ್ಯಾಂಗನೀಸ್, ಗ್ರಾನೈಟ್ ಮುಂತಾದ ಲೋಹಗಳ ಗಣಿಗಾರಿಕೆ ನಡೆಸಿದರು. ಆಫ್ರಿಕಾದ, ದಕ್ಷಿಣ ಅಮೆರಿಕಾದ ಬಂಗಾರ, ವಜ್ರ ಮುಂತಾದ ಗಣಿಗಳ ಆಳಕ್ಕಿಳಿದು ಕೆಲಸ ಮಾಡುತ್ತಿದ್ದ ಸಹಸ್ರಾರು ಸ್ಥಳೀಯ ಬುಡಕಟ್ಟು ಜನ ಅಸುನೀಗಿದರು; ರೋಗರುಜಿನಗಳಿಂದ ಮರಣ ಹೊಂದಿದವರೆಷ್ಟೋ. ಕಾಡುಮೃಗಗಳನ್ನು ಹಿಡಿಯುವಂತೆ ನೀಗ್ರೋಗಳನ್ನು ಹಿಡಿದು ಯೂರೋಪ್ ಉತ್ತರ ಅಮೆರಿಕಾಗಳಲ್ಲಿ ಮಾರಾಟ ಮಾಡಿದರು. ಗಣಿಗಾರಿಕೆ ನಡೆಯುವ ಸ್ಥಳಗಳಲ್ಲಿ ವನ್ಯಜೀವಿಗಳು ಬೆದರಿ ಪಲಾಯನ ಮಾಡಿದವು. ಇದು ೩–೪ ಶತಮಾನಗಳ ಹಿಂದಿನ ನಡೆಯಾಯಿತು.

ಆಮೇಲೆ ಇಪ್ಪತ್ತನೆಯ ಶತಮಾನ ಪೂರ್ವಾರ್ಧದಲ್ಲಿಯೇ ಬಹುಪಾಲು ವಸಾಹತು ರಾಷ್ಟ್ರಗಳು ಸ್ವತಂತ್ರವಾದವು. ಆದರೆ ಕತ್ತಿ ಯಾವುದಾದರೇನು ಎಂಬಂತೆ ಈಗ ಸ್ವದೇಶಿ ಆಡಳಿತಗಾರರೇ ಶೋಷಕರಾಗಿ ಮಾರ್ಪಟ್ಟರು. ಅಭಿವೃದ್ಧಿಯ ಹೆಸರಿನಲ್ಲಿ ಇವರು ಕೈಗೊಂಡ ಅನೇಕ ಯೋಜನೆಗಳು ಜನಹಿತಕ್ಕಿಂತ ಸಮಾಜಕ್ಕೆ ಮಾರಕವೇ ಆಗುತ್ತಿವೆ. ಕೃಷಿ ಭೂಮಿ ವಿಸ್ತರಣೆ, ಭಾರಿ ನೀರಾವರಿ ಅಣೆಕಟ್ಟುಗಳು, ವಿದ್ಯುತ್ ಉತ್ಪಾದನಾ ಕೇಂದ್ರಗಳು, ಅಣುಸ್ಥಾವರಗಳು, ಸಂಪರ್ಕ ರಸ್ತೆಗಳು ಇತ್ಯಾದಿ ಕಾರಣಗಳಿಂದ ಅರಣ್ಯ ಪ್ರದೇಶ ಕಡಿಮೆಯಾಗುತ್ತಾ ಬರುತ್ತಿದೆ. ದಕ್ಷಿಣ ಅಮೆರಿಕಾ, ಆಫ್ರಿಕಾ, ಇಂಡಿಯಾ, ಮಲೇಶಿಯಾ, ವಿಯೆಟ್ನಾಮ್, ಇಂಡೋನೇಷಿಯಾ ಮುಂತಾದ ಕಡೆ ಕೃಷಿ ಭೂಮಿ ವಿಸ್ತರಣೆಗಾಗಿ ಜಗತ್ತಿನಾದ್ಯಂತ ನಿರಂತರವಾಗಿ ಕಾಡನ್ನು ಒತ್ತುವರಿ ಮಾಡಲಾಗುತ್ತಿದೆ. ನಾಗರಿಕ ಜಗತ್ತಿನ ಈ ಒತ್ತುವರಿ ಕಾರಣದಿಂದ ವನವಾಸಿ ಜನರು ಮತ್ತು ವನ್ಯಜೀವಿಗಳ ಬದುಕು ಅತಂತ್ರ ಸ್ಥಿತಿಗೆ ದೂಡಲ್ಪಡುತ್ತಿದೆ. ಬಾಕ್ರಾ ನಂಗಲ್, ನರ್ಮದಾ ಮುಂತಾದ ಭಾರಿ ಅಣೆಕಟ್ಟುಗಳ ಹಿನ್ನೀರಿನಲ್ಲಿ ಲಕ್ಷಾಂತರ ಹೆಕ್ಟೇರ್ ಕಾಡು ಮುಳುಗಿಹೋಗಿದೆ. ಅಂತೆಯೇ ಗಣಿಗಾರಿಕೆ ಕಾರಣದಿಂದ ಅನೇಕ ಬುಡಕಟ್ಟು ಜನರನ್ನು ಎತ್ತಂಗಡಿ ಮಾಡಲಾಗುತ್ತಿದೆ. ಪುನರ್ವಸತಿ ಕೇಂದ್ರ ಕೊಂಪೆಗಳಲ್ಲಿ ಅರಣ್ಯ ಜೀವಿಗಳಿಗೆ ಇರುಸುಮುರುಸು. ಇವರ ಜೀವನಶೈಲಿಯೇ ದಿಕ್ಕು ತಪ್ಪುತ್ತಿದೆ. ಈ ಸ್ಥಳೀಯ ಸಮುದಾಯಗಳ ಮೌಲ್ಯಗಳು, ಸಂಸ್ಕೃತಿ, ಧಾರ್ಮಿಕ ಭಾವನೆ, ಗೌರವಿಸುವ ಮತ್ತು ರಕ್ಷಿಸುವ ಯಾವುದೇ ವ್ಯವಸ್ಥೆಯನ್ನು ಇದುವರೆಗೆ ರೂಪಿಸಲಾಗುತ್ತಿಲ್ಲ. ಈ ಕಾರಣದಿಂದಲೇ ನೈಸರ್ಗಿಕ ಸಂಪನ್ಮೂಲಗಳು ನಾಶವಾಗುತ್ತಿವೆ. ಆದಿವಾಸಿಗಳ ಹಕ್ಕುಗಳ ಉಲ್ಲಂಘನೆ ಮತ್ತು ಅವರ ಬದುಕಿನ ಹಕ್ಕನ್ನೇ ಕಸಿದುಕೊಳ್ಳುವುದರ ವಿರುದ್ಧ ಇದುವರೆಗೆ ಯಾವುದೇ ಪ್ರಬಲ ಹೋರಾಟಗಳು ನಡೆದೇ ಇಲ್ಲ. ಕಲ್ಲಿದ್ದಲು, ಕಬ್ಬಿಣದ ಅದಿರು, ಗ್ರಾನೈಟ್, ಮರಳು, ಯುರೇನಿಯಂನಂತಹ ಗಣಿಗಾರಿಕೆಗಳ ವಿಚಾರ ಬಂದಾಗ ಆದಿವಾಸಿ ಬುಡಕಟ್ಟು ಜನರ ಬದುಕನ್ನು ನಿರ್ದಯವಾಗಿ ಹೊಸಕಿಹಾಕಲಾಗುತ್ತಿದೆ. ಅವರ ಭಾವನೆಗಳಿಗೆ ಕಿಂಚಿತ್ತೂ ಸ್ಪಂದಿಸದೆ ಅವರನ್ನು ಸ್ಥಳಾಂತರಿಸಲಾಗುತ್ತಿದೆ. ಮಳೆ ಕಾಡುಗಳಲ್ಲಿ ಯಾವುದೇ ಬಗೆಯ ಗಣಿಗಾರಿಕೆ ನಡೆದರೂ ಅಲ್ಲಿರುವ ಜೀವಿವೈವಿಧ್ಯ ತಾಣಗಳಿಗೆ ಭಂಗ ಬರುತ್ತದೆ. ಇದು ತೀರ ಸರಳ ಪರಿಸರ ಪ್ರಜ್ಞೆ. ಅರಣ್ಯಪ್ರದೇಶ ಕಿರಿದಾದಂತೆ ವನ್ಯಜೀವಿಗಳು ಅಲ್ಲಿಂದ ಹೊರಬಿದ್ದು ಊರುಕೇರಿಗಳ ಮೇಲೆ ನುಗ್ಗುತ್ತವೆ. ಇದರಿಂದ ಎಚ್ಚರಗೊಂಡಂತೆ ವರ್ತಿಸುವ ನಾಗರಿಕ ಸರ್ಕಾರಗಳು ಈಗೀಗ ಆನೆ ಕಾರಿಡಾರ್, ಸಿಂಹಧಾಮ, ಹುಲಿ, ಕರಡಿ, ಚಿರತೆ ಮುಂತಾದ ಪ್ರಾಣಿಗಳ ರಕ್ಷಿತಾರಣ್ಯ ಮುಂತಾದ ಅವೈಜ್ಞಾನಿಕ ನಿಲ್ದಾಣಗಳನ್ನು ರೂಪಿಸುತ್ತಿರುವುದು ವಿಪರ್ಯಾಸವೇ ಸರಿ. ಕಾಡಿನ ಅಂಚಿನಲ್ಲಿರುವ ರೈತ ಸಮುದಾಯಗಳು ಈ ವನ್ಯಮೃಗಗಳ ಉಪಟಳಕ್ಕೆ ಈಡಾಗಬೇಕಾಗಿದೆ.

ಇತ್ತೀಚೆಗೆ ರೈತರ ಬೆಳೆಗಳಿಗೆ ಹಾನಿ ಮಾಡುತ್ತಿರುವ ಆನೆಗಳನ್ನು ವಿದ್ಯುತ್ ತಂತಿ ಬೇಲಿಗೆ ಸಿಲುಕಿಸಿ ಕೊಲ್ಲಲಾಗುತ್ತಿದೆ. ಕೆಲವೊಮ್ಮೆ ಈ ರೈತರ ಪ್ರಾಣಕ್ಕೂ ಕುತ್ತು ತಪ್ಪಿದ್ದಲ್ಲ. ಉದಾಹರಣೆಗೆ ಹಿಂದೆ ಹಾಸನ, ಕೊಡಗು ಜಿಲ್ಲೆಗಳಲ್ಲಿ ಕಾಡಾನೆಗಳು ಮತ್ತು ಮನುಷ್ಯರ ನಡುವೆ ಸಂಬಂಧವಿತ್ತು. ಆದರೆ ಅದೀಗ ಸಂಘರ್ಷದ ಸ್ವರೂಪ ಪಡೆದುಕೊಳ್ಳುತ್ತಿದೆ. ಕಾರಣ, ಪಶ್ಚಿಮಘಟ್ಟ ಪ್ರದೇಶದಲ್ಲಿ ಕೈಗೊಳ್ಳುತ್ತಿರುವ ಅಭಿವೃದ್ಧಿಪರ ಚಟುವಟಿಕೆಗಳು : ಗಣಿಗಾರಿಕೆ, ಜಲವಿದ್ಯುತ್

ಯೋಜನೆಗಳು, ಕೃಷಿಭೂಮಿ ವಿಸ್ತರಣೆ ಇತ್ಯಾದಿ. ಇದರಿಂದ ಆನೆ ದಾರಿ (ಕಾರಿಡಾರ್)ಗೆ ಅಡ್ಡಲಾಗಿ ನಿಂತ ರೈತರು ಬಲಿಪಶುಗಳಾಗುತ್ತಿದ್ದಾರೆ. ಹಾಗಾಗಿ ಪ್ರತಿವರ್ಷ ೧೫೦ರಿಂದ ೨೦೦ ಜನ ಸಾಯುತ್ತಿದ್ದಾರೆ. ಆನೆಗಳಿಗೆ ಅವುಗಳ ಸಾಂಪ್ರದಾಯಿಕ ಆಹಾರ, ತಿರುಗಾಟದ ದಾರಿಗಳನ್ನು ಬಿಟ್ಟುಕೊಡುವುದೊಂದೇ ಸುರಕ್ಷಿತ ಮಾರ್ಗ. ಅದಕ್ಕಾಗಿ ಪಶ್ಚಿಮ ಘಟ್ಟದಲ್ಲಿ ನಡೆವ ಅಭಿವೃದ್ಧಿ ಕಾರ್ಯಗಳನ್ನು ನಿಲ್ಲಿಸಿ ಇಡೀ ಘಟ್ಟ ಪ್ರದೇಶವನ್ನು ಆನೆಗಳು ಮತ್ತು ಇನ್ನಿತರ ಪ್ರಾಣಿಗಳು ಮತ್ತು ಪಾರಂಪರಿಕವಾಗಿ ಬದುಕುತ್ತಾ ಬಂದಿರುವ ಆದಿವಾಸಿ ಗಿರಿಜನರನ್ನು ಅಲ್ಲೇ ಬದುಕಲು ಬಿಡುವುದು ಸರಿಯಾದ ನೀತಿ. ಅಭಿವೃದ್ಧಿ ಯೋಜನೆಗಳಿಗಾಗಿ ಭಾರತದಲ್ಲಿಯೆ ಪ್ರತಿ ನಿಮಿಷಕ್ಕೆ ಒಬ್ಬ ಆದಿವಾಸಿಯನ್ನು ಸ್ಥಳಾಂತರಿಸಲಾಗುತ್ತಿದೆ ಎಂದು ಇತ್ತೀಚಿನ ಆದಿವಾಸಿ ಹೋರಾಟ ಸಮಿತಿ ಹೇಳುತ್ತದೆ.

ಅಭಿವೃದ್ಧಿಪರ ಎಂದು ಬೊಬ್ಬೆ ಹೊಡೆವ ತೈಲ ರಾಜಕಾರಣಕ್ಕೆ ಬಂದರೆ ಕಳೆದ ಶತಮಾನದ ಕೊನೆಯ ದಶಕದಲ್ಲಿಯೇ ಮಧ್ಯಪ್ರಾಚ್ಯ ರಾಷ್ಟ್ರಗಳ ತೈಲ ಉತ್ಪಾದನಾ ಕೇಂದ್ರಗಳ ಸ್ವಾಮ್ಯಕ್ಕಾಗಿ ಅಮೆರಿಕಾ ಹಾಗೂ ಯೂರೋಪಿನ ರಾಷ್ಟ್ರಗಳು ಕೊಲ್ಲಿ ರಾಷ್ಟ್ರಗಳಲ್ಲಿ ಯುದ್ಧ ಹೂಡಿದವು. ಅದರ ಪರಿಣಾಮವಾಗಿ ಕುವೈತ್ ಹಾಗೂ ಇರಾಕ್ ಭೂ ಜಲಪ್ರದೇಶಗಳು ರಣಕ್ಷೇತ್ರಗಳಾದವು. ತೈಲ ನಿಕ್ಷೇಪ ಬಾವಿಗಳಿಗೆ ಹಾಗೂ ಸರಬರಾಜು ಕೊಳವೆಗಳಿಗೆ ಡ್ಯಾಮೇಜ್ ಆದುದರಿಂದ ಲಕ್ಷಾಂತರ ಬ್ಯಾರೆಲ್ ಎಣ್ಣೆ ಕುವೈತ್ ತೀರಪ್ರದೇಶದ ಸಮುದ್ರಕ್ಕೆ ಸೋರಿಹೋಯಿತು. ಆ ಕೆನೆಗಟ್ಟಿದ ಎಣ್ಣೆಯಲ್ಲಿ ಉಸಿರಾಡಲಾರದೆ, ಈಜಲಾರದೆ ಲಕ್ಷಾಂತರ ಸಂಖ್ಯೆಯಲ್ಲಿ ಕಡಲ ಹಕ್ಕಿಗಳು ಹಾಗೂ ಮೀನು ಮುಂತಾದ ಜಲಚರಗಳು ಮರಣಹೊಂದಿದವು.

ಬೃಹತ್ ಕೈಗಾರಿಕೆಗಳು, ದಟ್ಟ ವಾಹನ ಸಾರಿಗೆ ಸಂಪರ್ಕಗಳು, ಏರ್ ಕಂಡೀಷನ್ಡ್ ಯಂತ್ರಗಳು ಉಗುಳುವ ಇಂಗಾಲದ ತ್ಯಾಜ್ಯ ವಸ್ತುಗಳಿಂದ ಭೂಮಿಯ ವಾತಾವರಣದಲ್ಲಿ ತಾಪಮಾನ ಅಧಿಕವಾಗುತ್ತಿದೆ. ಸೂರ್ಯನ ಶಾಖವನ್ನು ನಿಯಂತ್ರಿಸುವ ಓಝೋನ್ ಪದರದಲ್ಲಿ ಬಿರುಕುಗಳಾಗುತ್ತಿವೆ.

ತತ್ಪರಿಣಾಮವಾಗಿ ಉತ್ತರ, ದಕ್ಷಿಣ ಧ್ರುವಮಂಡಲದಲ್ಲಿನ ನೀರ್ಗಲ್ಲುಗಳು ಕರಗಿ ಪ್ರವಾಹಗಳು ಹೆಚ್ಚಾಗುತ್ತಿವೆ. ಸಮುದ್ರಗಳಲ್ಲಿ ಸುನಾಮಿ ಅಬ್ಬರಗಳು ಏರಿಬರುತ್ತಿವೆ. ಇದೆಲ್ಲವೂ ಕೂಡಿ ಜಲಚರ ಹಾಗೂ ಭೂಮಿಯ ಮೇಲಿನ ಜೀವಜಗತ್ತು ತಲ್ಲಣಗೊಳ್ಳುತ್ತಿದೆ.

ಮನುಷ್ಯನ ಲಾಭ–ಲೋಭದ ದುರಾಸೆಗೆ ಇತಿ–ಮಿತಿ ಎಂಬುದಿಲ್ಲ. ಭೂಮಿಯ ಮೇಲ್ಮೈ ಸಂಪನ್ಮೂಲಗಳನ್ನು ದೋಚಿ–ಬಾಚಿದ ಇವನು ಇದೀಗ ಸಾಗರದ ತಳಗಳಿಗೂ ಲಗ್ಗೆ ಇಡುತ್ತಿದ್ದಾನೆ. ಚರ್ಮ, ಮಾಂಸಕ್ಕಾಗಿ ತಿಮಿಂಗಿಲ, ಸೀಲ್‌ಗಳ ಬೇಟೆಯಾಡುತ್ತಿದ್ದಾನೆ. ಸಮುದ್ರ ತಳದ ಅನರ್ಘ್ಯ ವಸ್ತುಗಳಿಗಾಗಿ ತಡಕಾಡುತ್ತ ಅಲ್ಲಿರುವ ಅಪರೂಪದ ಜಲಚರಗಳ ಬದುಕಿಗೆ ಕುತ್ತು ತರುತ್ತಿದ್ದಾನೆ.






ಅಭಿವೃದ್ಧಿಯ ದೆವ್ವ ಬಡಿದುಕೊಂಡ ಜನಪ್ರತಿನಿಧಿಗಳು, ಅಧಿಕಾರಿಗಳು, ಕಾರ್ಪೊರೇಟ್ ಕಂಪನಿ ಮಾಲೀಕರು ಪರಸ್ಪರ ಶಾಮೀಲಾಗಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸುವ ಮೂಲಕ ಬಯಲುನಾಡಿನ ರೈತಸಮುದಾಯಗಳನ್ನು ಎತ್ತಂಗಡಿ ಮಾಡಲಾಗುತ್ತಿದೆ. ಸಾಮಾಜಿಕ ಬದ್ಧತೆಯುಳ್ಳ ಪತ್ರಕರ್ತ ಪಿ. ಸಾಯಿನಾಥ್ ಹೇಳುವಂತೆ ಭಾರತ ದೇಶವೊಂದರಲ್ಲಿಯೇ ವರ್ಷಕ್ಕೆ ಸರಾಸರಿ ೨೦ ಸಾವಿರದಷ್ಟು ರೈತರು ಕೃಷಿಯನ್ನು ತ್ಯಜಿಸಿ ನಗರಗಳತ್ತ ವಲಸೆ ಬರುತ್ತಿದ್ದಾರೆ. ಇತ್ತ ನಗರಗಳು ಜನಸಂಖ್ಯೆಯ ಆಸ್ಫೋಟಕ್ಕೆ ತುತ್ತಾಗಿ ದೊಡ್ಡ ದೊಡ್ಡ ಕೊಳೆ ಕೊಂಪೆಗಳಾಗಿ ಮಾರ್ಪಡುತ್ತಿವೆ. ಈ ವಿಷವರ್ತುಲ ಇಲ್ಲಿಗೇ ನಿಲ್ಲುತ್ತಿಲ್ಲ. ಭಾರಿ ಕಾರ್ಖಾನೆಗಳು, ನಗರ ಕೇಂದ್ರಗಳು ಹೊರ ಚೆಲ್ಲುತ್ತಿರುವ ತ್ಯಾಜ್ಯ ವಸ್ತುಗಳು ಹಾಗೂ ಮಲಿನ ಜಲಕ್ಕೆ ಸೂಕ್ತ ಡ್ರೈನೇಜ್ ರಹದಾರಿ ಗಳಿಲ್ಲದೆ ಹತ್ತಿರದ ನದಿ–ಕಾಲುವೆ, ಕೆರೆ–ಕಟ್ಟೆಗಳಿಗೆ ಹರಿದು ಅವೆಲ್ಲವೂ ಕೊಳಚೆ ಗುಂಡಿಗಳಾಗುತ್ತಿವೆ. ಮಹಾನದಿಗಳೇ ಮಲಿನಗೊಂಡ ಚರಂಡಿಗಳಾಗುತ್ತಿವೆ. ಅವುಗಳಲ್ಲಿನ ಜಲಚರಗಳು ಆಮ್ಲಜನಕ ಸಾಲದೆ ಸಾವಿಗೀಡಾಗುತ್ತಿವೆ. ಜನವಸತಿ ಗಳಿಗೆ ಶುದ್ಧ ಗಾಳಿ, ಶುದ್ಧ ನೀರು, ಸಾವಯವ ಆಹಾರ ದುರ್ಲಭವಾಗಿದೆ.

ಹಿಂದೆ ಸಾಕಷ್ಟು ಕೊಳ್ಳೆ ಹೊಡೆದುದರಿಂದಲೂ ವಿಶಾಲವಾದ ಭೂ ಪ್ರದೇಶವನ್ನು ಹೊಂದಿರುವುದರಿಂದಲೂ ನಿಯಂತ್ರಿತ ಜನಸಂಖ್ಯೆ ಕಾರಣ ದಿಂದಲೂ ಪಾಶ್ಚಾತ್ಯ ರಾಷ್ಟ್ರಗಳು ಉತ್ತಮ ಭೌತಿಕ ಅಭಿವೃದ್ಧಿಯನ್ನು ಸಾಧಿಸಿವೆ. ಆದರೆ ಆನೆ ರಸ ಹೀರಿ ಉಗಿದ ಕಬ್ಬಿನ ಜಲ್ಲೆಯಂತಿರುವ, ಅವರು ಬಿಟ್ಟುಹೋಗಿರುವ ದೇಶಗಳಲ್ಲಿ ಅಭಿವೃದ್ಧಿ ಎಂಬುದು ಕನಸಿನ ಗಂಟಾಗಿದೆ. ಜೊತೆಗೆ, ಸರಳ ಜೀವನ ಹಾಗೂ ಉನ್ನತ ಚಿಂತನೆಯ ಗಾಂಧಿ ಮೌಲ್ಯಗಳನ್ನು ಕೈಬಿಟ್ಟ ಭಾರತದಂತಹ ಪೂರ್ವ ರಾಷ್ಟ್ರಗಳಿಗೆ ಪಾಶ್ಚಾತ್ಯ ಅಭಿವೃದ್ಧಿ ಮಾದರಿಯಾಗಲಾರದು. ಭಾರತ, ಬಾಂಗ್ಲಾ, ಪಾಕಿಸ್ತಾನ, ಚೈನಾ ಮುಂತಾದ ರಾಷ್ಟ್ರಗಳಲ್ಲಿ ಜನಸಂಖ್ಯೆಯೇ ಅಭಿವೃದ್ಧಿ ಪಥದಲ್ಲಿ ಅಡಚಣೆಯಾಗಿದೆ. ಆದ್ದರಿಂದ ಅಭಿವೃದ್ಧಿ ಎಂದರೆ ಏನು ಎಂಬ ವ್ಯಾಖ್ಯೆಯೇ ಬದಲಾಗಬೇಕಾಗಿದೆ. ಮೇಲೆ ಹೇಳಿದಂತೆ, ಜೀವಜಾಲಕ್ಕೆ ಗಂಡಾಂತರಕಾರಿಯಾದ ಅಭಿವೃದ್ಧಿ ಬೇಡವೇ ಬೇಡ. ಸಕಲ ಜೀವರಾಶಿಗೆ ಲೇಸಬಯಸುವುದೇ ಅಭಿವೃದ್ಧಿ ಎಂಬ ಸೂತ್ರ ಅನುಷ್ಠಾನಕ್ಕೆ ಬರಬೇಕಾಗಿದೆ. ಇದುವರೆಗಿನ ಮನುಷ್ಯ ಕೇಂದ್ರಿತ ಅಭಿವೃದ್ಧಿ ಎಂಬ ವ್ಯಾಖ್ಯೆಗೆ ಬದಲಾಗಿ ಇರುವ ಎಂಬತ್ತು ಕೋಟಿ ಜೀವರಾಶಿ ಈ ನೆಲದ ಮೇಲೆ ಕ್ಷೇಮದಿಂದ ಬದುಕುವುದಾದರೆ ಅದೇ ಅಭಿವೃದ್ಧಿ ಎಂಬ ಅರಿವು ಮೂಡಬೇಕು. ಆದರೆ ಆಳುವ ಸರ್ಕಾರಗಳಿಗೆ ಹಣ–ಅಧಿಕಾರ ಬಿಟ್ಟು ಅನ್ಯ ಚಿಂತನೆಯೇ ಇದ್ದಂತಿಲ್ಲ. ಕೇವಲ ಕೆಲವೇ ಶ್ರೀಮಂತ ವರ್ಗಗಳಿಗಾಗಿ ಅಸಂಖ್ಯಾತ ಮನುಷ್ಯರು, ಜೀವಸಂಕುಲಗಳು ಬೆಲೆ ತೆರಬೇಕಾಗಿದೆ. ಆದ್ದರಿಂದ 'ಕೊಂದವರುಳಿವರೇ ಹೋತ' ಎಂದ ಬಸವಣ್ಣನವರ ಮಾರ್ಮಿಕ ನುಡಿ ಇವರಿಗೆ ಆದಷ್ಟು ಬೇಗ ಅರ್ಥವಾದರೆ ಒಳ್ಳೆಯದು. ಆಗ ಅಭಿವೃದ್ಧಿ ಬುಲ್ಡೋಜರ್ ಅಡಿಯಲ್ಲಿ ಸಿಕ್ಕಿ ಜರ್ಜರಿತ ವಾಗುತ್ತಿರುವ ಜೀವಜಾಲದ ಬದುಕುವ ಹಕ್ಕು ಊರ್ಜಿತವಾದೀತು.

ಇನ್ನೊಂದು ಮಾತು. ಮತ–ಮೌಢ್ಯ–ಮೂಢ ಸಂಪ್ರದಾಯಗಳಿಗೆ ಬಲಿ ಯಾಗುತ್ತಿರುವ ಅಮಾಯಕರನ್ನು ನಾಗರಿಕತೆಗೆ ದಾಟಿಸಬೇಕಾಗಿದೆ. ಸಾಮಾಜಿಕ ಅಸಮಾನತೆಯ ವಿರುದ್ಧ ಹೋರಾಟಕ್ಕೆ ಹೊರಟ ನಕ್ಸಲರಿಗೆ ನ್ಯಾಯಬದ್ಧ ಜೀವಿಸುವ ಹಕ್ಕು ಲಭ್ಯವಾಗಬೇಕಾಗಿದೆ. ಅಂತೆಯೇ ಮತೀಯ ಭಯೋತ್ಪಾದನೆ ಮತ್ತು ಉಗ್ರಗಾಮಿಗಳ ಉಪಟಳಕ್ಕೆ ಈಡಾಗುತ್ತಿರುವ ಜನರನ್ನು ಜನತಂತ್ರ ಪ್ರಭುತ್ವ ಗಳು ರಕ್ಷಿಸಬೇಕಾಗಿದೆ. ಇದು ಮಾತ್ರ ಪ್ರಗತಿಶೀಲತೆ ಮತ್ತು ನಿಜವಾದ ಅಭಿವೃದ್ಧಿ.

ಪ್ರೊ॥ ಶಿವರಾಮಯ್ಯ
೧೭, ಹೊಂಗೆ ಸಾಲು ಮನೆ, ಐಸೆಕ್ ರಸ್ತೆ, ನಾಗರಭಾವಿ ಗ್ರಾಮ, ಬೆಂಗಳೂರು–೫೬೦ ೦೭೨




## ಮಕ್ಕಳ ರಂಗಭೂಮಿ : ಪ್ರದರ್ಶನ – ಪ್ರಕ್ರಿಯೆ

*ಡಾ॥ ನಿಂಗು ಸೊಲಗಿ*

**ಪುಟ : xxiv + ೩೦೪ = ೩೨೮** **ಬೆಲೆ : ರೂ. ೨೦೦**

**ಚಿಲಿಪಿಲಿ ಪ್ರಕಾಶನ,** ನಂ. ೫೬, ೪ನೇ ಅಡ್ಡರಸ್ತೆ, ಶಿವಾನಂದ ನಗರ, ಧಾರವಾಡ – ೧

*ಮಕ್ಕಳ ರಂಗಭೂಮಿ ? ಹೌದು, ಮಕ್ಕಳು ಅವಕಾಶ ಸಿಕ್ಕಿದರೆ, ನಾವು ಅವರಿಗೆ ಸರಿಯಾದ ತರಬೇತಿ ನೀಡಿದರೆ ಮುಂದೆ ರಂಗ ಪ್ರಕ್ರಿಯೆಗಳಲ್ಲಿ ಪಾಲ್ಗೊಂಡು ಉತ್ತಮ ರಂಗ ಪ್ರದರ್ಶನ ನೀಡಬಲ್ಲರು. ಮಕ್ಕಳು ಎಳವೆಯಲ್ಲೇ ಆಟ ಪಾಠಗಳೊಂದಿಗೆ ಪಾತ್ರಾಭಿನಯ ಮಾಡಿ ತೋರಿಸುತ್ತಾರೆ. ಅದು ಕೋಲು ಹಿಡಿದು ಸೊಂಟ ಬಗ್ಗಿಸಿ ನಡೆವ ಅಜ್ಜನ ಪಾತ್ರ ಅಥವಾ ಸೆರಗು ಹೊದೆದು ನೀರಿನ ಬಿಂದಿಗೆ ಸೊಂಟಕ್ಕಿಟ್ಟು ನಡೆವ ಅವನ ಅಮ್ಮನ ಪಾತ್ರ ಇರಬಹುದು. ಇದು ಸೃಜನಶೀಲ ಅನುಕರಣೆಯ ಹಂತ. ನಿಮ್ಮನ್ನು ಅವಮಾನಿಸಲು ಮಗು ಹಾಗೆ ಮಾಡುತ್ತಿಲ್ಲ. ಮಕ್ಕಳಲ್ಲಿನ ಇಂಥ ಪ್ರಾಥಮಿಕ ಆಸಕ್ತಿಯೇನೆಂದು ಗಮನಿಸಿ ಮಕ್ಕಳನ್ನು ರಂಗಭೂಮಿ ಚಟುವಟಿಕೆಗಳ ಕಡೆಗೆ ಸೆಳೆಯುವತ್ತ ಸಂಶೋಧನೆ ನಡೆಸಿದ ಬೃಹತ್ ಪ್ರಬಂಧವಿದು. ಇದು ಲೇಖಕರಿಗೆ ಪಿಎಚ್.ಡಿ. ಪದವಿ ಲಭಿಸಿದ ಕೃತಿಯೂ ಹೌದು. ಮಕ್ಕಳ ನಾಟಕಗಳ ಮೂಲಕ ಅಭಿನಯದಲ್ಲಿ ಉತ್ಸಾಹ ತುಂಬಿ ಮಕ್ಕಳ ರಂಗಭೂಮಿಯಲ್ಲಿ ಪ್ರತಿಭೆಯನ್ನು ಜಾಗ್ರತಗೊಳಿಸಿ ಅವರ ಸರ್ವಾಂಗೀಣ ಬೆಳವಣಿಗೆಯನ್ನು ಸಾಧಿಸುವತ್ತ ಬಲವಾದ ಹೆಜ್ಜೆಗಳನ್ನಿಡುವ ಈ ಪುಸ್ತಕ ರಂಗಕರ್ಮಿಗಳಿಗೆ ತುಂಬ ಉಪಯುಕ್ತ. ರಂಗಭೂಮಿಯಂಥ ಮಾಧ್ಯಮಗಳು ನಾಟಕಗಳ ಮೂಲಕ ಮನರಂಜನೆಯನ್ನೂ ಸಾಮಾಜಿಕವಾಗಿ ಒಳ್ಳೆಯ ಬುದ್ಧಿವಾದವನ್ನೂ ಹೇಳುವಂಥವಾಗಬೇಕು. ಅಲ್ಲಿ ಜನವಿದೂರವಾದ ಯಾವುದೇ ಅಂಶ ಇರಕೂಡದು. ಕೆಟ್ಟ ಅಥವಾ ಜನರನ್ನು ಮೋಸಗೊಳಿಸುವ ಯಾವುದೇ ವಿಚಾರವಿದ್ದರೂ ಕೂಡ ಮಕ್ಕಳು ಮಾತ್ರವಲ್ಲದೆ ಹಿರಿಯರು ಕೂಡ ಅತ್ತ ವಾಲುವ ಅಪಾಯವಿರುತ್ತದೆ. ಹೀಗಾಗಿ ಒಂದು ರಂಗಭೂಮಿ ಮಾಧ್ಯಮ ಏನೇನನ್ನು ಜನರಿಗೆ ತಿಳಿಸಬಲ್ಲುದೆಂದೂ ಅದಕ್ಕಾಗಿ ಮಕ್ಕಳನ್ನು ತರಬೇತಿಗೊಳಿಸುವ ವಿಧಾನವೇನು ಎಂದು ಹೇಳಲ್ಪಟ್ಟ ಅಪರೂಪದ ಕೃತಿ.*



## ಕನ್ನಡ ಬಂಡಾಯ ಸಾಹಿತ್ಯ

*ಸಂಪಾದಕರು : ಸರಜೂ ಕಾಟ್ಕರ್*

**ಪುಟ : xxvi + ೩೭೪** **ಬೆಲೆ : ರೂ. ೨೨೫**

**ಸಾಹಿತ್ಯ ಅಕಾಡೆಮಿ,** ರವೀಂದ್ರ ಭವನ, ೩೫ ಫಿರೋಜಶಾಹ ರಸ್ತೆ, ಸ್ವಾತಿ ಮಂದಿರ ಮಾರ್ಗ ನವದೆಹಲಿ–೧೧೦ ೦೦೧

*ಬಂಡಾಯ ಸಾಹಿತ್ಯ ಯಾರಿಗಾಗಿ ಸೃಷ್ಟಿಯಾಗುತ್ತದೆ ? ದಲಿತರ ಸಂಕಟಗಳನ್ನು ಮೇಲ್ವರ್ಗ ಅರ್ಥೈಸಿಕೊಂಡು ಶೋಷಣೆಯನ್ನು ನಿಲ್ಲಿಸಿ ಸಮಾನತೆ ಕಡೆಗೆ ಚಲಿಸಲೆಂದೇ ? ಅಥವಾ ಶೋಷಿತರಾಗಿದ್ದುಕೊಂಡು ಎಲ್ಲವನ್ನೂ ಸಹಿಸುತ್ತ ಹೀನ–ದೀನ ಬಾಳನ್ನು ಬಾಳುವವರು ಎಚ್ಚೆತ್ತುಕೊಳ್ಳಲೆಂದೇ ? ಮೊದಲನೆಯದನ್ನು ನಿರೀಕ್ಷಿಸುವುದು ಸಾಧ್ಯವಿಲ್ಲವಾದರೂ ಎರಡನೆಯದನ್ನು ಖಂಡಿತ ಸಾಧ್ಯವಾಗಿಸಬಹುದು. ಬಂಡಾಯ ಸಾಹಿತ್ಯಗಳಿಂದಾಯ್ದ ಕಾವ್ಯ, ಕಥೆ, ಕಾದಂಬರಿ, ನಾಟಕಗಳು ಇಲ್ಲಿ ಸಂಗ್ರಹಗೊಂಡಿವೆ. ಬಂಡಾಯದ ಕಹಳೆ ಊದಿ ಪ್ರತಿಭಟನೆ ತೋರಿದ್ದರಿಂದ ಹಲವು ಬದಲಾವಣೆಗಳಾದ್ದಂತೂ ನಿಜ. ಎಲ್ಲ ಹಂತಗಳಲ್ಲೂ ಸ್ವಲ್ಪಮಟ್ಟಿಗೆ ಶೋಷಣೆ ಹಿಮ್ಮೆಟ್ಟಿ ಉಸಿರಾಡುವಂತಾಗಿದ್ದು ಸ್ವಾಗತಾರ್ಹ. ಅತ್ಯುತ್ಸಾಹದಿಂದ ಹಲವಾರು ಬದಲಾವಣೆಗಳು ಆಗಿ ಸಮಾನತೆಯ ಕಡೆಗೆ ಹೆಜ್ಜೆ ಹಾಕುವ ಎಲ್ಲ ಪ್ರಯತ್ನ ನಡೆದು ಹೊಸ ಆಂದೋಲನವನ್ನೇ ಹುಟ್ಟುಹಾಕಲಾಗಿತ್ತು. ಅಂದು ಮೂಡಿಬಂದ ಎಲ್ಲ ಬಂಡಾಯ ಸಾಹಿತ್ಯವೂ ದಲಿತಪರ ದನಿಯೆತ್ತಿತ್ತು. ಈ ಹಂತದಲ್ಲಿ ಹೋರಾಟದ ಫಲವಾಗಿ ದಲಿತ ಸಾಹಿತ್ಯಕ್ಕೆ ಮಾನ್ಯತೆ ದೊರೆತು ಪ್ರಶಸ್ತಿ ಪುರಸ್ಕಾರಗಳು ದೊರೆತು ಇದುವರೆಗೆ ಪಟ್ಟ ಶ್ರಮವೆಲ್ಲಾ ಸಾರ್ಥಕವೆಂದು ಭಾವಿಸಲಾಯ್ತು. ಹೀಗೆ ಸುಮಾರು ೩೦–೩೫ ವರ್ಷಗಳಿಂದೀಚೆಗೆ ಸೃಷ್ಟಿಯಾದ ಸಾಹಿತ್ಯ ಯಾವುದೋ ಸಂಕಲನದಲ್ಲಿ ಸೇರಿಕೊಂಡಿದ್ದು ಓದುಗನಿಗೆ ಈ ಕೃತಿಯ ಮೂಲಕ ಒಂದು ಕಡೆ ಲಭಿಸುವಂತಾಗಿದೆ. ಬಂಡಾಯ ಸಾಹಿತ್ಯದ ಮೂಲಕ ಮರ್ದಿತ ಜನರ ದುಃಖ, ಬೇಗುದಿಯೆಲ್ಲ ಮನದಂತರಾಳದಿಂದ ಹೊರಬಂದು ಧುಮ್ಮಿಕ್ಕಿ ಹರಿದಿದೆ. ಬಂಡಾಯ ಧ್ವನಿ ಕಳೆದುಕೊಂಡಿದೆ ಎಂಬ ಇಂದಿನ ವ್ಯಾಖ್ಯಾನಕ್ಕೆ ಮತ್ತೆ ಕಾಯಕಲ್ಪ ನೀಡುವಲ್ಲಿ ಒಂದು ಹೆಜ್ಜೆ ಈ ಸಂಕಲನ. ಅಲ್ಲದೆ ಇವು ದಲಿತರು ಇದುವರೆಗೆ ಬಾಳಿದ ಒಂದು ನಿಕೃಷ್ಟ ಬದುಕನ್ನು ಇಂದಿನ–ಮುಂದಿನ ಜನರಿಗೆ ತಿಳಿಸುವ ಕಾರ್ಯವನ್ನೂ ಮಾಡುತ್ತವೆ.*

## ಕಾಡು ಕಲಿಸುವ ಪಾಠ

*ಟಿ. ಎಸ್. ಗೋಪಾಲ್*

**ಪುಟ : ೧೧೨** **ಬೆಲೆ : ರೂ. ೧೧೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ ೫೧೪೯, ಬೆಂಗಳೂರು – ೫೬೦ ೦೦೧




*ನಾವಿಂದು ಪರಿಸರನಾಶದ ಬಗ್ಗೆ ಸ್ವಲ್ಪವೂ ಚಿಂತಿಸದೆ ನಮ್ಮನ್ನು ನಾವೇ ಆಂತಕಕ್ಕೀಡುಮಾಡಿಕೊಂಡಿದ್ದೇವೆ. ನಮ್ಮ ಹಿಂದಿನ ಹಿರಿಯರು ತಮ್ಮ ಮುಂದಿನ ಪೀಳಿಗೆಯ ಹಿತದೃಷ್ಟಿಯಿಂದ ಬದುಕಿನಲ್ಲಿ ಬಹಳ ತ್ಯಾಗ ಮಾಡಿ ಸುತ್ತಲ ಪರಿಸರವನ್ನು ಸುಸ್ಥಿತಿಯಲ್ಲಿರಿಸಲು ಶ್ರಮಿಸಿದ್ದಾರೆ. ಅರಣ್ಯ ಸಂರಕ್ಷಣೆಯ ಬಗ್ಗೆ ಸರಕಾರಗಳು ಎಷ್ಟೇ ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಂಡರೂ ಅರಣ್ಯಾಧಿಕಾರಿಗಳು ಎಷ್ಟೇ ಶ್ರಮವಹಿಸಿ ಕಾಪಾಡುವಲ್ಲಿ ಆಸಕ್ತಿ ತೋರಿದರೂ ಸಾರ್ವಜನಿಕರ ಬೆಂಬಲವಿಲ್ಲದೆ ಯಾವುದೂ ಪ್ರಯೋಜನವಾಗಿಲ್ಲ. ನಮ್ಮ ಸುತ್ತಮುತ್ತಲೂ ಕಾಡು–ಬೆಟ್ಟ–ನದಿ–ಮೃಗಪಕ್ಷಿಗಳು – ಮುಂತಾಗಿ ಅಸ್ತಿತ್ವದಲ್ಲಿದ್ದರೇನೇ ನಮ್ಮದು ಪರಿಪೂರ್ಣ ಪರಿಸರ. ಅವುಗಳೊಂದಿಗೆ ಮನುಷ್ಯ ಸಂಪೂರ್ಣ ಅನುಸಂಧಾನದ ದಾರಿ ಹಿಡಿದಾಗ ನೆಮ್ಮದಿಯ ಬದುಕು ಆತನದಾಗಬಹುದು. ಈ ಪುಸ್ತಕ ಮಕ್ಕಳಿಗೆ ಸುಂದರ ಪರಿಸರವನ್ನು ಉಳಿಸುವ ನಿಟ್ಟಿನಲ್ಲಿ ಪಾಠವನ್ನು ಹೇಳುವ ಉತ್ತಮ ಕೃತಿಯಾಗಿ ರೂಪುಗೊಂಡಿದೆ. ಅರಣ್ಯ ಸಂರಕ್ಷಣೆ – ವನ್ಯಜೀವಿ ಸಂರಕ್ಷಣೆಯ ಬಗೆಗೆ ಶಿಕ್ಷಣ ನೀಡಲು ಪ್ರಕೃತಿ ಶಿಬಿರಗಳನ್ನು ಏರ್ಪಡಿಸಿ ಸಾರ್ವಜನಿಕರಿಗೆ ಇದರ ಮಹತ್ವ ತಿಳಿಸುವುದು ಇದರ ಉದ್ದೇಶ. ನಿವೃತ್ತ ಅರಣ್ಯಾಧಿಕಾರಿ ಶ್ರೀ ಕೆ. ಚಿಣ್ಣಪ್ಪ ಇದರ ಬಗ್ಗೆ ಹೆಚ್ಚು ಅರಿವು ಮೂಡಿಸುವ ಸಂಪನ್ಮೂಲ ವ್ಯಕ್ತಿ. ಇಂತಹ ಶಿಬಿರಗಳಿಗೆ ವಿದ್ಯಾರ್ಥಿಗಳನ್ನು ಆಯ್ದು ವಿವಿಧ ಅರಣ್ಯ ಪ್ರದೇಶಗಳಿಗೆ ಒಯ್ದು ಪರಿಚಯ ಮಾಡಿಸುವುದಲ್ಲದೆ ಸ್ಲೈಡ್ ಶೋಗಳನ್ನು ತೋರಿಸಿ, ವರ್ಣಿಸಿ ಪರಿಸರಪ್ರೇಮವನ್ನು ಬಿತ್ತುವುದು ಮುಖ್ಯ ಕೆಲಸ. ಇಂಥ ಚಟುವಟಿಕೆಗಳನ್ನು ದಾಖಲಿಸಿ ಬಹು ಆಸಕ್ತಿಯಿಂದ ಬರಹರೂಪಕ್ಕಿಳಿಸಿದ ಶ್ರೀ ಟಿ. ಎಸ್. ಗೋಪಾಲ್ ನಮ್ಮನ್ನು ಪರಿಸರದ ಉಳಿವಿಗಾಗಿ ಏನೇನು ಮಾಡಬಹುದೆಂಬ ಸೂಚನೆಯನ್ನು ಇಲ್ಲಿ ನೀಡಿದ್ದಾರೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು - ೨೨*

# ನಮ್ಮ ನಾಡಿನ ಹೆಮ್ಮೆಯ ವಿಜ್ಞಾನಿ
# 'ಭಾರತ ರತ್ನ' ಸಿ. ಎನ್. ಆರ್. ರಾವ್
## ಅವರಿಗೆ 'ಹೊಸತು' ಬಳಗದ ಅಭಿನಂದನೆ



ನಮ್ಮ 'ಕರ್ನಾಟಕ ರತ್ನ' ಇಂದು 'ಭಾರತ ರತ್ನ'ವಾಗಿ ಬೆಳೆದುನಿಂತಿದೆ. ಪ್ರಶಸ್ತಿ, ಗೌರವಗಳಿಂದ ಪ್ರೊ॥ ಸಿ. ಎನ್. ಆರ್. ರಾವ್ ಅವರ ಘನತೆಯನ್ನು ಅಳೆಯಬೇಕಿಲ್ಲ. ಅವರ ವ್ಯಕ್ತಿತ್ವಕ್ಕೆ ಪೂರಕವಾಗಿ ಇಂಥ ಗೌರವ ಅವರಿಗೆ ಲಭಿಸಿದೆ. 'ನಾನು ಕನ್ನಡ ಮಾಧ್ಯಮದಲ್ಲಿಯೇ ಓದಿದವನು, ಕನ್ನಡದಲ್ಲಿ ಓದಿಸಿದರೆ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಮಕ್ಕಳಿಗೆ ತೊಂದರೆಯಾಗುತ್ತದೆ ಎನ್ನುವುದು ತಪ್ಪು ಕಲ್ಪನೆ, ಬದಲಾಗಿ ಯಾವುದೇ ವಿಷಯದ ಮೇಲೆ ಆಳವಾದ ಜ್ಞಾನ ಹೊಂದಲು ಅದರಿಂದ ನೆರವಾಗುತ್ತದೆ' ಎಂದು ಮಾತೃಭಾಷೆಯ ಮೇಲಿನ ಪ್ರೀತಿ ಮತ್ತು ಮಹತ್ವವನ್ನು ಪ್ರೊ॥ ರಾವ್ ಹೇಳಿದ್ದಾರೆ. ಮಾತೃಭಾಷೆ ಕನ್ನಡದಲ್ಲಿಯೇ ವಿದ್ಯಾಭ್ಯಾಸ ಆರಂಭಿಸಿದ ಇವರಿಗೆ ನಮ್ಮ ದೇಶದ ಹಾಗೂ ಇಂಗ್ಲೆಂಡ್, ಅಮೆರಿಕ, ವಿಶ್ವದ ವಿವಿಧ ದೇಶಗಳ ಪ್ರತಿಷ್ಠಿತ ೬೦ ವಿಶ್ವವಿದ್ಯಾಲಯಗಳು ವಿಜ್ಞಾನಿಯಾಗಿ ಮಾಡಿದ ಸಾಧನೆಗೆ ಗೌರವ ಡಾಕ್ಟರ್ ಪುರಸ್ಕಾರ ಕೊಟ್ಟು ಗೌರವಿಸಿವೆ. ೧೫೦೦ಕ್ಕೂ ಹೆಚ್ಚಿನ ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ, ೪೫ಕ್ಕೂ ಹೆಚ್ಚು ವಿಜ್ಞಾನ ಕುರಿತ ಕೃತಿಗಳನ್ನು ರಚಿಸಿದ್ದಾರೆ. ವಿಶ್ವದ ಹಲವಾರು ದೇಶಗಳ ವಿಶ್ವವಿದ್ಯಾಲಯಗಳಿಗೆ ಇವರು ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಕೇವಲ ಸಂಶೋಧಕ, ವಿಜ್ಞಾನಿ, ಅಧ್ಯಾಪಕರಾಗಿ ಮಾತ್ರ ಕೆಲಸ ಮಾಡದೆ ಹಲವಾರು ವಿಜ್ಞಾನ ಶಿಕ್ಷಣ, ಸಂಶೋಧನ ಸಂಸ್ಥೆಗಳನ್ನು ಹುಟ್ಟುಹಾಕಿದ್ದಾರೆ, ಅದರ ನಿರ್ದೇಶಕರಾಗಿ ಕೆಲಸ ಮಾಡಿ ದೇಶದ ವಿಜ್ಞಾನಕ್ಷೇತ್ರದಲ್ಲಿ ಮಹತ್ತರವಾದ ಕೆಲಸ ಮಾಡಿದ್ದಾರೆ. ಇಸ್ರೋ, ಭಾರತೀಯ ವಿಜ್ಞಾನ ಸಂಸ್ಥೆ. ಜೆ.ಎನ್.ಸಿ.ಎ.ಎಸ್.ಆರ್.ನಂಥ ಹಲವಾರು ಸಂಸ್ಥೆಗಳಲ್ಲಿ ಕೆಲಸ ಮಾಡಿ, ಪ್ರಧಾನ ಮಂತ್ರಿಗಳ ವೈಜ್ಞಾನಿಕ ಸಲಹಾ ಮಂಡಳಿ ಅಧ್ಯಕ್ಷರಾಗಿ ಅವರು ವೈಜ್ಞಾನಿಕ ಕ್ಷೇತ್ರಕ್ಕೆ, ದೇಶಕ್ಕೆ ಸಲ್ಲಿಸಿದ ಸೇವೆ ಅಮೂಲ್ಯವಾದುದು. 'ಘನಸ್ಥಿತಿ ಹಾಗೂ ಪದಾರ್ಥ ರಸಾಯನ ವಿಜ್ಞಾನ' ವಿಭಾಗದಲ್ಲಿ ಜಗತ್ತಿನ ವಿಜ್ಞಾನಲೋಕಕ್ಕೆ ಮುಂಚೂಣಿ ನಾಯಕರು ಪ್ರೊ॥ ರಾವ್ ಎಂದು ಹಲವಾರು ವಿಜ್ಞಾನಿಗಳೇ ಅವರ ಕುರಿತು ಹೇಳಿದ್ದಾರೆ.

'ನನ್ನ ಸಾಧನೆ ಹಿಂದೆ ೨೦೦ ಯುವ ವಿಜ್ಞಾನಿಗಳ ಶ್ರಮವಿದೆ ಪ್ರಶಸ್ತಿಯ ಗೌರವ ಅವರಿಗೂ ಸಲ್ಲಬೇಕು' ಎಂದು ಹೇಳುವ ವಿನಯ ಹೊಂದಿದ ಪ್ರೊ॥ ರಾವ್ ಪ್ರಮುಖವಾಗಿ ಜನಮುಖಿ, ಸಮಾಜಮುಖಿ ವಿಜ್ಞಾನಿ. 'ಹೊಸತು' ಪತ್ರಿಕೆಯ ೨೦೦೧ರ ಜನವರಿ (ವಿಶೇಷ) ಸಂಚಿಕೆಗೆ ಪ್ರೊ॥ ಸಿ. ಎನ್. ಆರ್. ರಾವ್ ಅವರ ಸಂದರ್ಶನವನ್ನು ಚಿಂತಕರಾದ ಡಾ॥ ಜಿ. ರಾಮಕೃಷ್ಣ ಹಾಗೂ ವಿಜ್ಞಾನಿ ಪ್ರೊ॥ ಸೇತುರಾವ್ ಮಾಡಿಕೊಟ್ಟಿದ್ದರು. ಅಂದು ಪ್ರಕಟವಾದ ಪ್ರೊ॥ ರಾವ್ ಸಂದರ್ಶನದಲ್ಲಿ ಅವರ ಚಿಂತನೆ, ಕಾಳಜಿ, ಕಳಕಳಿ ವ್ಯಕ್ತವಾಗಿದೆ. ಆ ಸಂದರ್ಶನದ ಕೆಲವು ಆಯ್ದ ಭಾಗಗಳನ್ನು ಈ ಕೆಳಗೆ ಪುನರ್ ಮುದ್ರಿಸಲಾಗಿದೆ.

– ***ಸಂಪಾದಕ***

**ಹೊಸತು :** ವಿಜ್ಞಾನಿಗಳು 'ದಂತಗೋಪುರ'ದಲ್ಲಿ ಇರುತ್ತಾರೆ ಎಂಬ ದೂರು ಸಾಮಾನ್ಯವಾಗಿ ಕೇಳಿ ಬರುತ್ತಿದೆ. ನಿಮ್ಮ ಅಭಿಪ್ರಾಯವೇನು ?

**ರಾವ್ :** ಸಾಮಾನ್ಯವಾಗಿ ಬುದ್ಧಿಜೀವಿಗಳು, ವಿಜ್ಞಾನಿಗಳು, ಸ್ವತಂತ್ರವಾಗಿ ಯೋಚನೆ ಮಾಡಬಲ್ಲವರು ಇವರೆಲ್ಲಾ ಸ್ವಲ್ಪಮಟ್ಟಿಗೆ ಪ್ರತ್ಯೇಕವಾಗಿದ್ದಾರೆಂದು ಭಾಸವಾಗಬಹುದು. ಹಾಗೆ ನೋಡಿದರೆ, ಹೆಸರಾಂತ ವಿಜ್ಞಾನಿಗಳೂ ಸಹ 'ದಂತಗೋಪುರ'ಗಳಲ್ಲಿರಲಿಲ್ಲ. ಆಲ್ಬರ್ಟ್ ಐನ್‌ಸ್ಟೈನ್ ಅವರು ಸಾಮಾಜಿಕ ಘಟನೆಗಳಿಗೆ ಸ್ಪಂದಿಸುತ್ತಿದ್ದರು. ನ್ಯೂಟನ್ ಕೂಡ 'ದಂತಗೋಪುರ'ದಲ್ಲಿದ್ದನೆಂದು ಹೇಳಲು ಸಾಧ್ಯವಿಲ್ಲ. ವಿಜ್ಞಾನಿಗಳು ಸಾಮಾಜಿಕ ಘಟನೆಗಳ ಬಗ್ಗೆ ಚಿಂತನೆ ಮಾಡಬೇಕು ಎಂಬುದು ನನ್ನ ದೃಢ ನಂಬಿಕೆ.

**ಹೊಸತು :** ಸದ್ಯದಲ್ಲಿ ಕಾಲೇಜುಗಳಲ್ಲಿ ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ಆರಿಸಿಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸುತ್ತಿದೆ. ಈ ಪರಿಸ್ಥಿತಿಯನ್ನು ಬದಲಾಯಿಸುವ ಬಗೆ ಹೇಗೆ ?

**ರಾವ್ :** ಶುದ್ಧ ವಿಜ್ಞಾನದ ಮಟ್ಟವನ್ನು ಹೆಚ್ಚಿಸುವುದರ ಬದಲು ಎಲ್ಲೆಲ್ಲೂ ಐ.ಟಿ. (ಮಾಹಿತಿ ತಂತ್ರಜ್ಞಾನ) ವಿಜೃಂಭಿಸುತ್ತಿದೆ. ಅಮೆರಿಕದಂಥ ದೇಶಗಳು ಸಾಕಷ್ಟು ಅಭಿವೃದ್ಧಿ ಹೊಂದಿದ್ದು ಮಾಹಿತಿ ತಂತ್ರಜ್ಞಾನದ ಕಡೆ ಸಂಪೂರ್ಣ ಆಸ್ಥೆ ನೀಡಬಹುದು. ಆದರೆ, ಭಾರತದಲ್ಲಿ ವಿಜ್ಞಾನ, ತಂತ್ರಜ್ಞಾನ ಮತ್ತು ಕೈಗಾರಿಕೆಗಳೂ ಇನ್ನೂ ಬಲವಾಗಬೇಕು. ಈ ಕ್ಷೇತ್ರಗಳಲ್ಲಿ ನಾವು ಮುಂದುವರಿಯದಿದ್ದರೆ ನಮಗೆ ಭವಿಷ್ಯವೇ ಇಲ್ಲದಂತಾಗುತ್ತದೆ. ಮಾಹಿತಿ ತಂತ್ರಜ್ಞಾನಕ್ಕೆ ಉತ್ತೇಜನ ನೀಡಬೇಕು, ಆದರೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಕಡೆಗಣಿಸಬಾರದು.

ನಮ್ಮ ಶಿಕ್ಷಣದ ಗುಣಮಟ್ಟ ವಿಪರೀತವಾಗಿ ಇಳಿದಿದೆ. ಇದಕ್ಕೆ ಸೌಲಭ್ಯಗಳ ಕೊರತೆಯು ಒಂದು ಮುಖ್ಯ ಕಾರಣವಾಗಿದೆ. ವಿಜ್ಞಾನ ವಿಭಾಗಕ್ಕೆ

ಮೀಸಲಾಗಿರುವ ರಾಷ್ಟ್ರೀಯ ಬಜೆಟ್ ಕನಿಷ್ಠವಾಗಿದೆ. ಬೆಂಗಳೂರಿನಲ್ಲಿರುವ ಪ್ರತಿಷ್ಠೆಯ ಕಾಲೇಜು ಸಹ ಪರದೇಶಗಳಲ್ಲಿರುವ ಸಾಮಾನ್ಯ ಕಾಲೇಜೊಂದರ ಮಟ್ಟದಲ್ಲಿಲ್ಲ. ಭಾರತೀಯ ವಿಜ್ಞಾನ ಮಂದಿರದಲ್ಲಿ ಹಲವು ವರ್ಷಗಳ ಹಿಂದೆ ಮೂಲಭೂತ ಸೌಕರ್ಯಗಳ ಅತೀವ ಕೊರತೆ ಇದ್ದುದು ನನ್ನ ಗಮನಕ್ಕೆ ಬಂತು. ವೈಜ್ಞಾನಿಕ ಉಪಕರಣಗಳಿಗೆ ಧಾರಾಳವಾಗಿ ಧನ ಸಹಾಯ ಒದಗಿಸಬೇಕು. ಈಗಿರುವ ಪರಿಸ್ಥಿತಿಯನ್ನು ಅವಲೋಕಿಸಿದರೆ ಶಿಕ್ಷಣದ ಭವಿಷ್ಯ ಕರಾಳವಾಗಿದೆ. ಶೈಕ್ಷಣಿಕ ವ್ಯವಸ್ಥೆ ಶಿಥಿಲವಾಗಿದೆ. ರಾಜೀವ್ ಗಾಂಧಿ ಪ್ರಧಾನಿಯಾಗಿದ್ದ ಕಾಲದಲ್ಲಿ ವಿಜ್ಞಾನಿಗಳು ಏನಾದರೂ ಸಲಹೆಗಳನ್ನು ನೀಡಿದರೆ ಆಸ್ಥೆಯಿಂದ ಗಮನಿಸುವ ಪರಿಪಾಠವಿತ್ತು. ಈಗಿನ ಸರ್ಕಾರದಲ್ಲಿ ಬುದ್ಧಿಜೀವಿಗಳ ಅಭಿಪ್ರಾಯಗಳಿಗೆ ಬೆಲೆಯೇ ಇಲ್ಲದಂತಾಗಿದೆ. ಮಾಹಿತಿ ತಂತ್ರಜ್ಞಾನಕ್ಕಂತೂ ಚುರುಕಾದ ಮಿದುಳು ಅಗತ್ಯವಿಲ್ಲ. ಸತ್ಪರಂಪರೆಗಳು ನಷ್ಟವಾಗುತ್ತಿವೆ. ದಶಕಗಳಿಂದ ರಾಷ್ಟ್ರದಲ್ಲಿ ವಿಜೃಂಭಿಸುತ್ತಿದ್ದ ಮೌಲ್ಯಗಳಿಗೆ ಇಂದು ಬೆಲೆ ಇಲ್ಲದಂತಾಗಿದೆ. ವಿಜ್ಞಾನಿಗಳ ಸಮುದಾಯ, ಅಂದರೆ ಅಕಾಡೆಮಿಗಳು, ಈ ಸಂದಿಗ್ಧ ಕಾಲದಲ್ಲಿ ಎಚ್ಚೆತ್ತು ದಿಟ್ಟತನದಿಂದ ಅಭಿಪ್ರಾಯಗಳನ್ನು ಮಂಡಿಸ ಬೇಕು. ವೈಯಕ್ತಿಕ ಆಸೆ ಆಕಾಂಕ್ಷೆಗಳು ಪ್ರಗತಿಪರ ಯೋಚನೆಗಳಿಗೆ ಅಡ್ಡಿಯಾಗಬಾರದು.

**ಹೊಸತು :** ಭಾರತ ಸರ್ಕಾರ ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ನಂತರ ಪೇಟೆಂಟ್ ಮಸೂದೆಯನ್ನು ಬದಲಾಯಿಸಿದೆ. ಇದರಿಂದ ನಮ್ಮ ದೇಶಕ್ಕೆ ಯಾವ ಪರಿಣಾಮವಾದೀತು ?

**ರಾವ್ :** ಪೇಟೆಂಟ್ ಮಸೂದೆಯ ಪ್ರಶ್ನೆಗಿಂತ ಉದಾರೀಕರಣ (ಜಾಗತೀಕರಣ)ದ ಬಗ್ಗೆ ವಿಚಾರ ಮಾಡುವುದು ಅಗತ್ಯ. ಪೇಟೆಂಟ್ ಮಾರ್ಪಾಡು ಉದಾರೀಕರಣದ ಒಂದು ಮುಖ. ಉದಾರೀಕರಣದಿಂದ ನಮ್ಮ ಕೈಗಾರಿಕೆಗಳಿಗೆ, ಕೃಷಿಗೆ ಉಂಟಾಗುವ ಸಮಗ್ರ ಪರಿಣಾಮಗಳನ್ನು ವಿಶ್ಲೇಷಿಸುವುದರ ಮೊದಲೇ ತೀರ್ಮಾನವನ್ನು ತೆಗೆದುಕೊಂಡಿರುವುದು ನಿಜಕ್ಕೂ ಆಘಾತವೆನಿಸುತ್ತದೆ. ನಮ್ಮ ಉದ್ಯಮಗಳಿಗೆ ರಕ್ಷಣೆ ನೀಡುವುದರ ಬದಲು ಎಲ್ಲವನ್ನೂ ಆಮದು ಮಾಡಿಕೊಳ್ಳುವ ಪ್ರವೃತ್ತಿ ವಿನಾಶಕ್ಕೆ ದಾರಿಯಾಗುತ್ತದೆ. ನಮ್ಮ ಸಿ–ಡಾಟ್ ಸುಮಾರು ಉತ್ತಮವಾಗಿಯೇ ಇದೆ. ಅದನ್ನು ಸುಧಾರಿಸುವುದರ ಬದಲು ವಿದೇಶೀ ಕಂಪೆನಿಗಳಿಗೆ ಆಹ್ವಾನ ನೀಡುವುದು ಜಾಣತನವಲ್ಲ. ದಿಢೀರೆಂದು ಉದಾರೀಕರಣದ ನೆಪದಲ್ಲಿ ಸಾರಾಸಗಟು ಬದಲಾವಣೆ ನಮ್ಮ ದೇಶದ ಕೈಗಾರಿಕೆಗೆ ಕುತ್ತಾಗುತ್ತದೆ. ನಮ್ಮ ದೇಶದಲ್ಲಿ ಪೇಟೆಂಟ್ ತೆಗೆದುಕೊಳ್ಳುವುದು ಅಷ್ಟೇನೂ ಸುಲಭವಲ್ಲ. ಅಂತರರಾಷ್ಟ್ರೀಯ ಪೇಟೆಂಟ್‌ಅನ್ನು ತೆಗೆದುಕೊಳ್ಳಲು ಸುಮಾರು ೧೦,೦೦೦ ಡಾಲರುಗಳಷ್ಟು ಹಣ ಖರ್ಚಾಗುತ್ತದೆ. ನಮ್ಮ ಸಂಶೋಧನಾಲಯ ಗಳಲ್ಲಿ ಅಷ್ಟು ಹಣ ಲಭ್ಯವಿರುವುದಿಲ್ಲ. ನಮ್ಮ ಔಷಧ ತಯಾರಿಸುವ ಕಂಪೆನಿಗಳು ಅತ್ಯಂತ ಕಡಿಮೆ ಬೆಲೆಯ ಔಷಧಗಳನ್ನು ತಯಾರಿಸುವುದರಿಂದ ಬಡವರಿಗೆ ತೊಂದರೆಯಾಗುವುದಿಲ್ಲ. ಉದಾರೀಕರಣ ಮತ್ತು ವಿದೇಶೀ ಕಂಪೆನಿಗಳು ಕಾಲಿಟ್ಟ ನಂತರ ಸ್ಥಿತಿ ಸಂಪೂರ್ಣವಾಗಿ ಬದಲಾಯಿಸಬಹುದು. ಹೀಗಾಗಿ, ನಮ್ಮ ದೇಶೀಯ ತಂತ್ರಜ್ಞಾನಗಳು ಮೂಲೆಗುಂಪಾಗುತ್ತವೆ. ಭಾರತ ಎದುರಿಸುತ್ತಿರುವ ಈ ವಿಷಮ ಸ್ಥಿತಿಯ ಬಗ್ಗೆ ಕೇಂದ್ರ ಸರ್ಕಾರ ನಿರ್ಲಿಪ್ತವಾಗಿರುವುದು ವಿಷಾದಕರ.



*ಪ್ರೊ॥ ಸಿ. ಎನ್. ಆರ್. ರಾವ್ ಅವರನ್ನು ಸಂದರ್ಶಿಸುತ್ತಿರುವ ಡಾ॥ ಜಿ. ರಾಮಕೃಷ್ಣ ಮತ್ತು ಪ್ರೊ॥ ಸೇತುರಾವ್*

# ಸರ್ದಾರ್ ಪಟೇಲರ ನಕಲಿ ವಾರಸುದಾರರು

ತಮ್ಮದೇ ಆದ ಒಂದು ಪರಂಪರೆಯನ್ನು ಹೊಂದಿಲ್ಲದಿರುವವರ ದೊಡ್ಡ ಸಮಸ್ಯೆ ಅಂದರೆ ಅವರು ಇನ್ನೊಬ್ಬರ ಪರಂಪರೆಯ ವಾರಸುದಾರರಾಗಲು ಯತ್ನಿಸುತ್ತಾರೆ. ಇದೊಂದು ರೀತಿ ಮತ್ತೊಬ್ಬರಿಗೆ ಸೇರಿದ ಆಸ್ತಿಯನ್ನು ಲಪಟಾಯಿಸಿದಂತೆ. ಈಗ ಪ್ರಧಾನಿ ಹುದ್ದೆಯ ಕನಸು ಕಾಣುತ್ತಿರುವ ನರೇಂದ್ರ ಮೋದಿ ಮಾಡುತ್ತಿರುವುದು ಇಂಥ ಲಪಟಾವಣೆ ದಂಧೆ. ಅಹ್ಮದಾಬಾದ್‌ನಲ್ಲಿ ಎರಡೂವರೆ ಸಾವಿರ ಕೋಟಿ ರೂ. ಮೊತ್ತದ ಸರ್ದಾರ್ ಪಟೇಲರ ಪ್ರತಿಮೆಯನ್ನು ನಿರ್ಮಿಸಲು ಹೊರಟಿರುವ ಮೋದಿ ಕಳೆದ ಮಂಗಳವಾರ ಪಟೇಲ್ ಮ್ಯೂಸಿಯಂ ಉದ್ಘಾಟನಾ ಸಮಾರಂಭದಲ್ಲಿ ಪ್ರಧಾನಿಯ ಸಮ್ಮುಖದಲ್ಲೆ, "ಜವಾಹರ ಲಾಲ್ ನೆಹರೂ ಬದಲಿಗೆ ಸರ್ದಾರ್ ಪಟೇಲ್ ಈ ದೇಶದ ಪ್ರಧಾನಿಯಾಗಿದ್ದರೆ ದೇಶದ ಚಿತ್ರಣವೇ ಬದಲಾಗಿ ಇರುತ್ತಿತ್ತು" ಎಂದು ವಿವಾದಾಸ್ಪದ ಹೇಳಿಕೆ ನೀಡಿದ್ದಾರೆ.

**ಪಟೇಲರು ಕಟ್ಟಾ ಹಿಂದು ಆಗಿದ್ದರೂ ಹಿಂದುತ್ವವಾದಿ ಅಲ್ಲ. ಮುಸ್ಲಿಂ ವಿರೋಧಿ ಅಲ್ಲ. ದೇಶ ವಿಭಜನೆ ಕಾಲದಲ್ಲಿ ಹಿಂದುಗಳನ್ನು ಮಾತ್ರವಲ್ಲ ಗೃಹಮಂತ್ರಿಯಾಗಿ ಪಟೇಲರು ಸಾವಿರಾರು ಮುಸಲ್ಮಾನರನ್ನೂ ರಕ್ಷಿಸಿದ್ದರು. ನೆಹರೂ ಪ್ರಧಾನಿಯಾಗಲು ಅನುಕೂಲವಾಗಲೆಂದೊ ಏನೋ ಪಟೇಲರು ರಾಜಿ ಮಾಡಿಕೊಂಡರು. ದೇಶಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಭಾರತ ಒಂದು ಧರ್ಮಕ್ಕೆ ಸೇರಿದವರ ರಾಷ್ಟ್ರವಾಗಿರಬಾರದು; ಇಲ್ಲಿನ ಅಲ್ಪಸಂಖ್ಯಾತ ಸಮುದಾಯಗಳಿಗೂ ಸಮಾನ ಹಕ್ಕುಗಳಿರಬೇಕು ಎಂಬ ನೆಹರೂ ನಿಲುವನ್ನು ಪಟೇಲರು ಒಪ್ಪಿದ್ದರು. ಭಾರತ ಎಂದೆಂದಿಗೂ ಹಿಂದೂರಾಷ್ಟ್ರವಾಗಬಾರದು ಎಂಬುದು ಗಾಂಧಿ, ನೆಹರೂ, ಪಟೇಲರ ಸಮಾನ ತಿಳುವಳಿಕೆಯಾಗಿತ್ತು.**



ಪಟೇಲರ ಮೇಲೆ ನರೇಂದ್ರ ಮೋದಿ ಅಕ್ರಮವಾಗಿ ಹಕ್ಕು ಸಾಧಿಸಲು ಯತ್ನಿಸಿದಾಗ ಅದೇ ವೇದಿಕೆಯಲ್ಲಿದ್ದ ಪ್ರಧಾನಿ ಮನಮೋಹನ್ ಸಿಂಗ್, "ಪಟೇಲ್ ಅಪ್ಪಟ ಜಾತ್ಯತೀತವಾದಿಯಾಗಿದ್ದರು. ಅವರು ಕಾಂಗ್ರೆಸ್ಸಿಗರು. ಅವರ ಪಕ್ಷವನ್ನು ನಾನು ಪ್ರತಿನಿಧಿಸುತ್ತಿರುವುದು ಹೆಮ್ಮೆ ಎನಿಸುತ್ತದೆ" ಎಂದಿದ್ದಾರೆ. ಪ್ರಧಾನಿ ಮಾತಿನಲ್ಲಿ ಅತಿಶಯೋಕ್ತಿ ಯಾದುದೇನೂ ಇಲ್ಲ. ಸರ್ದಾರ್ ವಲ್ಲಭಭಾಯಿ ಪಟೇಲ್ ಕಟ್ಟಾ ಕಾಂಗ್ರೆಸ್ಸಿಗರಾಗಿದ್ದರು. ಮಹಾತ್ಮ ಗಾಂಧೀಜಿಯವರ ಪರಮ ಶಿಷ್ಯರಾಗಿದ್ದರು. "ಆರೆಸ್ಸೆಸ್ ನಿರ್ಮಿಸಿದ ವಿಷಮಯ ವಾತಾವರಣ ಗಾಂಧಿ ಹತ್ಯೆಗೆ ಕಾರಣವಾಯಿತು" ಎಂದು ಸ್ಪಷ್ಟವಾಗಿ ಹೇಳಿದ್ದರು.

ನಿಜ, ದೇಶದ ಮೊದಲ ಪ್ರಧಾನಿ ಜವಾಹರ ಲಾಲ್ ನೆಹರೂ ಮತ್ತು ಸರ್ದಾರ್ ಪಟೇಲ್ ನಡುವೆ ಭಿನ್ನಾಭಿಪ್ರಾಯಗಳಿದ್ದವು. ವಿದೇಶದಲ್ಲಿ ವ್ಯಾಸಂಗ ಮಾಡಿ ಬಂದ, ಮಾರ್ಕ್ಸ್‌ವಾದವನ್ನು ಆಳವಾಗಿ ಅಧ್ಯಯನ ಮಾಡಿದ್ದ ಪಂಡಿತ್ ನೆಹರೂ ಕೊಂಚ ಎಡಪಂಥೀಯ ಒಲವನ್ನು ಹೊಂದಿದ್ದರು. ಆದರೆ ಪಟೇಲರು ನೆಹರೂಗೆ ತದ್ವಿರುದ್ಧವಾಗಿದ್ದರು. ಸಂಪ್ರದಾಯವಾದಿಯಾಗಿದ್ದ ಅವರು ಬಂಡವಾಳಗಾರರ ಮಿತ್ರರಾಗಿದ್ದರು. ಬಲಪಂಥೀಯ ನಿಲುವಿಗೆ ಹತ್ತಿರ ವಾಗಿದ್ದರು. ಬಲಪಂಥೀಯ ಅಂದ ತಕ್ಷಣ ಆರೆಸ್ಸೆಸ್ ಎಂದಲ್ಲ. ಸಂಪ್ರದಾಯವಾದಿಯಾಗಿದ್ದ ಪಟೇಲರು ಸಂಘಪರಿವಾರದ ಕೋಮು ರಾಜಕಾರಣವನ್ನು ಪ್ರಬಲವಾಗಿ ವಿರೋಧಿಸುತ್ತಿದ್ದರು. ಆದರೆ ಪಟೇಲರ ಆರ್ಥಿಕ ಧೋರಣೆ ಖಾಸಗಿ ವಾಣಿಜ್ಯೋದ್ಯಮದ ಪರವಾಗಿತ್ತು.

ಸರ್ದಾರ್ ಪಟೇಲರಲ್ಲಿ ಅಂತರ್ಗತವಾಗಿದ್ದ ಎಡಪಂಥೀಯ ವಿರೋಧಿ ನಿಲುವನ್ನೇ ಬಳಸಿಕೊಂಡ ಆರೆಸ್ಸೆಸ್‌ನ ಅಂದಿನ ಸರಸಂಘ ಚಾಲಕ (೧೯೪೮) ಮಾಧವ ಸದಾಶಿವ ಗೋಳ್ವಾಲ್ಕರ್ ಯುವಕರ ನಡುವೆ ಆಗ ಕಮ್ಯುನಿಸ್ಟರ ಪ್ರಭಾವ ಹೆಚ್ಚುತ್ತಿರುವುದನ್ನು ತಡೆಯಲು ಆರೆಸ್ಸೆಸ್ ನಿಮ್ಮ ಬೆಂಬಲಕ್ಕೆ ನಿಲ್ಲುತ್ತದೆ ಎಂದು ಪಟೇಲರಿಗೆ ತಿಳಿಸಿದ್ದರು. ಆದರೆ ಪಟೇಲ್ ಇವರನ್ನು ನಂಬಿರಲಿಲ್ಲ. ೧೯೪೯ರಲ್ಲಿ ಹೇಳಿಕೆ ಯೊಂದನ್ನು ನೀಡಿದ ಪಟೇಲರು, "ಹಿಂದೂ ರಾಷ್ಟ್ರ ಎಂಬುದು ಹುಚ್ಚರ ಕಲ್ಪನೆ. ಇದು ಭಾರತದ ಆತ್ಮವನ್ನು ಕೊಲ್ಲುತ್ತದೆ" ಎಂದು ಹೇಳಿದ್ದರು. ಗಾಂಧಿ ಹತ್ಯೆಯಾದಾಗ ನಿರ್ದಾಕ್ಷಿಣ್ಯವಾಗಿ ಆರೆಸ್ಸೆಸ್ ಮೇಲೆ ನಿಷೇಧ ಹೇರಿದ್ದರು.

ಆರೆಸ್ಸೆಸ್ ಮೇಲಿನ ನಿಷೇಧವನ್ನು ಹಿಂತೆಗೆದುಕೊಳ್ಳಲು ಗೋಳ್ವಾಲ್ಕರ್ ಗೃಹಮಂತ್ರಿ ಪಟೇಲರಿಗೆ ದುಂಬಾಲು ಬಿದ್ದಿದ್ದರು. ಪರಿಪರಿಯಾಗಿ ಓಲೈಸಿದ್ದರು. ಆದರೆ ಸುಲಭಕ್ಕೆ ಮಣಿಯದ ಪಟೇಲರು ಆರೆಸ್ಸೆಸ್ ತಾನು ರಾಜಕೀಯ ಸಂಘಟನೆ ಅಲ್ಲ. ಮುಂದೆಯೂ ರಾಜಕಾರಣದಲ್ಲಿ ಭಾಗವಹಿಸುವುದಿಲ್ಲ ಎಂದು ಬರೆದು ಕೊಟ್ಟರೆ ಮಾತ್ರ ನಿರ್ಬಂಧ ತೆರವುಗೊಳಿಸುವುದಾಗಿ ಹೇಳಿದರು. ಪಟೇಲರು ಹೇಳಿದಂತೆ ಬರೆದುಕೊಟ್ಟು ಗೋಳ್ವಾಲ್ಕರ್ ಜೈಲಿನಿಂದ ಹೊರಗೆಬಂದರು. ನಿಷೇಧ ತೆರವಾಯಿತು. ಹೀಗೆ ಬರೆದುಕೊಟ್ಟ ಕಾರಣಕ್ಕಾಗಿಯೇ ಆರೆಸ್ಸೆಸ್ ನೇರವಾಗಿ ರಾಜಕೀಯಕ್ಕಿಳಿಯದೆ ತನ್ನದೇ ಆದ ಜನಸಂಘ (ನಂತರ, ೧೯೭೭ರಲ್ಲಿ ಜನತಾ ಪಕ್ಷದೊಂದಿಗೆ ವಿಲೀನಗೊಂಡ) ಎಂಬ ರಾಜಕೀಯ ಪಕ್ಷವನ್ನು ಸ್ಥಾಪಿಸಿ ತೆರೆಮರೆಯಲ್ಲಿ ನಿಂತು ಆಟ ಆಡತೊಡಗಿತು.

ಈಗ ಮೋಹನ್ ಭಾಗವತ್ ಸರಸಂಘ ಚಾಲಕತ್ವದಲ್ಲಿ ಪಟೇಲರಿಗೆ ಬರೆದುಕೊಟ್ಟ ಪತ್ರದ ಬಗ್ಗೆ ಜಾಣ ಮೌನ ತಾಳಿದ ಆರೆಸ್ಸೆಸ್ ನೇರವಾಗಿ ರಾಜಕಾರಣಕ್ಕೆ ಇಳಿದಿದೆ. ನರೇಂದ್ರ ಮೋದಿಯನ್ನು ಪ್ರಧಾನಿ ಸ್ಥಾನದ ಅಭ್ಯರ್ಥಿಯನ್ನಾಗಿ ಮಾಡಬೇಕೆಂದು ಬಿಜೆಪಿ ಮೇಲೆ ಒತ್ತಡ ಹೇರಿದೆ. ಮೋದಿ ವಾಜಪೇಯಿ ಅವರಂತೆ ಅಲ್ಲ. ಮೋದಿ ಕಟ್ಟಾ ಆರೆಸ್ಸೆಸ್ ಸ್ವಯಂ ಸೇವಕ. ಜರ್ಮನಿಯ ಅಡಾಲ್ಫ್ ಹಿಟ್ಲರನಿಗೆ ಹೋಲಿಕೆಯಾಗುವ ವ್ಯಕ್ತಿತ್ವ ಅವರದು. ಅಂತಲೇ ಆತ ಪ್ರಧಾನಿಯಾದರೆ ಅಂಬೇಡ್ಕರ್ ರೂಪಿಸಿದ ಸಂವಿಧಾನಕ್ಕೆ ಚಟ್ಟ ಕಟ್ಟಿ ಮನುವಾದಿ ಫ್ಯಾಸಿಸ್ಟ್ ಹಿಂದುತ್ವವನ್ನು ದೇಶದ ಮೇಲೆ ಹೇರುವುದು ಆರೆಸ್ಸೆಸ್‌ನ ಹುನ್ನಾರವಾಗಿದೆ.

ಪ್ರಧಾನಿ ನೆಹರೂ ಜೊತೆ ಪಟೇಲರಿಗೆ ಭಿನ್ನಾಭಿಪ್ರಾಯ ಇದ್ದರೂ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಸಕಲ ಸಹಕಾರವನ್ನು ನೀಡಿದರು. ಪಟೇಲರು ಪ್ರಧಾನಿಯಾಗಬಯಸಿದ್ದು ನಿಜ. ಸ್ವಾತಂತ್ರ್ಯ ಹೋರಾಟದಲ್ಲಿ ನೆಹರೂಗೆ ಸರಿಸಾಟಿಯಾಗಿ ದುಡಿದ ಪಟೇಲರಿಗೆ ಅಂಥ ಬಯಕೆ ಇದ್ದಿದ್ದರೆ ತಪ್ಪಲ್ಲ. ಆದರೆ






"ಹೊಸದಾಗಿ ಸ್ವಾತಂತ್ರ್ಯ ಪಡೆದ, ವಸಾಹತುಶಾಹಿ ನೊಗ ಕಳಚಿದ ಭಾರತಕ್ಕೆ ಪ್ರಗತಿಪರ ವ್ಯಕ್ತಿತ್ವದ ಕಟ್ಟಾ ಸೆಕ್ಯುಲರ್ ಆದ, ಆಧುನಿಕ ಮನೋಭಾವದ ನೆಹರೂ ಪ್ರಧಾನಿಯಾಗುವುದು ಸೂಕ್ತ" ಎಂಬುದು ಮಹಾತ್ಮಾ ಗಾಂಧೀಜಿ ಅವರ ಆಶಯವಾಗಿತ್ತು. ಈ ಆಶಯಕ್ಕೆ ಸ್ಪಂದಿಸಿ ಪಟೇಲರು ಹಿಂದೆ ಸರಿದರು. ನೆಹರೂ ಪ್ರಧಾನಿಯಾದರು.

ಪಟೇಲರು ಕಟ್ಟಾ ಹಿಂದು ಆಗಿದ್ದರೂ ಹಿಂದುತ್ವವಾದಿ ಅಲ್ಲ. ಮುಸ್ಲಿಂ ವಿರೋಧಿ ಅಲ್ಲ. ದೇಶ ವಿಭಜನೆ ಕಾಲದಲ್ಲಿ ಹಿಂದೂಗಳನ್ನು ಮಾತ್ರವಲ್ಲ, ಗೃಹಮಂತ್ರಿಯಾಗಿ ಪಟೇಲರು ಸಾವಿರಾರು ಮುಸಲ್ಮಾನರನ್ನೂ ರಕ್ಷಿಸಿದ್ದರು. ನೆಹರೂ ಪ್ರಧಾನಿಯಾಗಲು ಅನುಕೂಲವಾಗಲೆಂದೂ ಏನೋ ಪಟೇಲರು ರಾಜಿ ಮಾಡಿಕೊಂಡರು. ದೇಶಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಭಾರತ ಒಂದು ಧರ್ಮಕ್ಕೆ ಸೇರಿದವರ ರಾಷ್ಟ್ರವಾಗಿರಬಾರದು; ಇಲ್ಲಿನ ಅಲ್ಪಸಂಖ್ಯಾತ ಸಮುದಾಯಗಳಿಗೂ ಸಮಾನ ಹಕ್ಕುಗಳಿರಬೇಕು ಎಂಬ ನೆಹರೂ ನಿಲುವನ್ನು ಪಟೇಲರು ಒಪ್ಪಿದ್ದರು. ಭಾರತ ಎಂದೆಂದಿಗೂ ಹಿಂದೂರಾಷ್ಟ್ರವಾಗಬಾರದು ಎಂಬುದು ಗಾಂಧಿ, ನೆಹರೂ, ಪಟೇಲರ ಸಮಾನ ತಿಳುವಳಿಕೆಯಾಗಿತ್ತು.

ಗಾಂಧಿ ಹತ್ಯೆಯ ನಂತರ ನೆಹರೂ ಮತ್ತು ಪಟೇಲರಲ್ಲಿ ಕೆಲ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಅಂಬೇಡ್ಕರ್ ರೂಪಿಸಿದ, ಸಕಲರಿಗೂ ಸಮಾನ ಅವಕಾಶ ನೀಡುವ ಸಂವಿಧಾನದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯವಿರಲಿಲ್ಲ. ನೆಹರೂ, ಪಟೇಲ್, ಅಂಬೇಡ್ಕರ್, ಮೌಲಾನಾ ಆಜ಼ಾದ್, ರಾಜಾಜಿ ಇವರೆಲ್ಲ ಜಾತ್ಯತೀತ ಭಾರತದ ಬಗ್ಗೆ ಸಮಾನ ತಿಳುವಳಿಕೆ ಹೊಂದಿದ್ದರು. ಈ ಬಗ್ಗೆ ರಾಜ ಮೋಹನ್ ಗಾಂಧಿ ತಮ್ಮ ಪುಸ್ತಕವೊಂದರಲ್ಲಿ ವಿವರವಾಗಿ ದಾಖಲಿಸಿದ್ದಾರೆ.

ಇಂಥ ಪಟೇಲರನ್ನು ತನ್ನ ವಿಭಜನಕಾರಿ ರಾಜಕಾರಣಕ್ಕೆ ಬಳಸಿಕೊಳ್ಳಲು ಹಿಂದೆಯೂ ಯತ್ನಿಸಿದ್ದ ಆರೆಸ್ಸೆಸ್ ಈಗ ನರೇಂದ್ರ ಮೋದಿ ಮೂಲಕ ಮತ್ತೆ ಅದೇ ಯತ್ನವನ್ನು ಮುಂದುವರಿಸಿದೆ. 'ಭಾರತದ ಉಕ್ಕಿನ ಮನುಷ್ಯ' ಎಂದು ಹೆಸರಾಗಿದ್ದ ಪಟೇಲರ ಜಗತ್ತಿನ ಅತಿ ಎತ್ತರದ, ಅಂದರೆ ೧೮೨ ಮೀಟರ್ ಎತ್ತರದ, ಉಕ್ಕಿನ ಪ್ರತಿಮೆಯನ್ನು ನಿರ್ಮಿಸಲು ಮೋದಿ ಹೊರಟಿದ್ದಾರೆ. ಹಿಂದೆ ಅಯೋಧ್ಯೆಯಲ್ಲಿ ರಾಮಮಂದಿರದ ನಿರ್ಮಾಣಕ್ಕಾಗಿ ಇಟ್ಟಿಗೆ ಸಂಗ್ರಹಿಸಿದಂತೆ ಈಗ ಉಕ್ಕಿನ ಚೂರುಗಳನ್ನು ಸಂಗ್ರಹಿಸಿ ತಾವು ಪಟೇಲರ ವಾರಸುದಾರರು ಎಂದು ಬಿಂಬಿಸಿಕೊಳ್ಳಲು ಹೊರಟಿದ್ದಾರೆ.

ಆರೆಸ್ಸೆಸ್ ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಲಿಲ್ಲ. ಅದಕ್ಕೆ ಬದಲಾಗಿ ಸ್ವಾತಂತ್ರ್ಯ ಚಳವಳಿಕಾರರನ್ನು ಬ್ರಿಟಿಷರಿಗೆ ಹಿಡಿದುಕೊಟ್ಟ ಕುಖ್ಯಾತಿ ಅದಕ್ಕಿದೆ. ಈ ಸಂಘಟನೆಯಲ್ಲಿ ಹೇಳಿಕೊಳ್ಳುವ, ಹೆಮ್ಮೆಪಡುವ ಒಬ್ಬನೇ ಒಬ್ಬ ರಾಷ್ಟ್ರೀಯ ನಾಯಕನಿಲ್ಲ. ಗೋಳ್ವಾಲ್ಕರ್, ಸಾವರ್ಕರ್, ಹೆಡ್ಗೆವಾರ ಅಂಥವರ ಹೆಸರನ್ನು ಆರೆಸ್ಸೆಸ್ ಎಂದೂ ಹೇಳುವುದಿಲ್ಲ. ಬದಲಾಗಿ ಉದಾರವಾದಿಗಳಾಗಿದ್ದ ವಿವೇಕಾನಂದ, ಭಗತ್‌ಸಿಂಗ್, ಸುಭಾಷ್‌ಚಂದ್ರ ಬೋಸ್‌ರ ಹೆಸರನ್ನು ದುರುಪಯೋಗಪಡಿಸಿಕೊಂಡಿದ್ದು ಸಾಲದೆಂಬಂತೆ ಈಗ ಪಟೇಲರನ್ನು ಹೈಜಾಕ್ ಮಾಡಲು ಹೊರಟಿದೆ.

ಆದರೆ ಭಾರತದ ಜನ ಮೂರ್ಖರಲ್ಲ. ಸಂಘಪರಿವಾರದ ವಿದ್ರೋಹದ ಇತಿಹಾಸ ಅವರಿಗೆ ಗೊತ್ತಿದೆ. ಮೋದಿಯನ್ನು ಮುಂದಿಟ್ಟುಕೊಂಡು, ಪಟೇಲರ ಹೆಸರು ಹೇಳಿ ಭಾರತವನ್ನು ಹಿಂದು ಮನುವಾದಿ ಫ್ಯಾಸಿಸ್ಟ್ ರಾಷ್ಟ್ರವನ್ನಾಗಿ ಮಾಡಲು ಹೊರಟಿರುವ ಇವರ ಹುನ್ನಾರವನ್ನು ಜನತೆ ವಿಫಲಗೊಳಿಸುತ್ತಾರೆ.

**ಸನತ್‌ಕುಮಾರ ಬೆಳಗಲಿ**
ನಂ. ಎಲ್‌ಎಫ್ ೧೭/೬, ಬಿಡಿಎ ಫ್ಲಾಟ್ಸ್
ಬಿಟಿಎಂ ಲೇಔಟ್, ಬೆಂಗಳೂರು – ೫೬೦ ೦೭೬



ಸಿಎಡಿ ೬೦ ಬಿಲಿಯ ಡಾಲರ್‌ಗೆ ತಂದರೆ, ಆಗ ತನ್ನ ನೀತಿಯಲ್ಲಿ ಒಂದಿಷ್ಟು ಸಡಿಲತೆ ಸಾಧ್ಯ ಅನ್ನುತ್ತಿದ್ದ ರಘುರಾಂ ರಾಜನ್ ಈಗ ಇದು ೫೦ಕ್ಕೂ ಇಳಿಯಬಹುದು ಎನ್ನುತ್ತಿದ್ದಂತೆಯೇ, ತನ್ನ ಮುಂದಿನ ನೀತಿಗಳನ್ನು ನಿರ್ಧರಿಸುವಾಗ, ಯಾವುದೇ ಒಂದು ಅಂಶವನ್ನು ಮಾತ್ರ ಪರಿಗಣಿಸಲಾಗುವುದಿಲ್ಲ ಎಂದಿದ್ದಾರೆ. ಈ ಬೆಳವಣಿಗೆಯ ನಂತರ ಅವರೇನಾದರೂ ಬಡ್ಡಿಯ ದರವನ್ನು ಇಳಿಸಿಯಾರೆ ಅಂದುಕೊಂಡವರಿಗೆ ಮತ್ತೆ ನಿರಾಸೆ ಆಗಬಹುದು.

# ಹೂಡಿಕೆ ಮಾಡದಿರುವುದು ಬೆಲೆ ಏರಿಸುವುದು ಉದ್ದೇಶಪೂರ್ವಕವೆ ?



"ಗಾಳಿ ಬಂದ ಕಡೆ ತೂರಿಕೊಳ್ಳಿ" – ರಿಸರ್ವ್ ಬ್ಯಾಂಕ್ ಗವರ್ನರ್ ರಘುರಾಂ ರಾಜನ್ ಹಣಕಾಸು ಲೋಕಕ್ಕೆ ಅವರ ಹಿತವಾದ! 'ಹೊಡೆತಕ್ಕೆ ಸಿಕ್ಕಿಕೊಳ್ಳಬೇಡಿ' ಸಾಧಾರಣ ಜನತೆಯೂ ಹಾಗೆ ತಾನೆ ಮಾಡುವುದು? ಸಾಧ್ಯವಿದ್ದರೆ? ಇದೇನು ಸಂದರ್ಭ? ಆಸ್ತಿಪಾಸ್ತಿಗಳ ರೂಪದ ಸ್ಥಿರಾಸ್ತಿಗಳ ಬೆಲೆ ಏರಿಕೆ ಅದರ ಜತೆ ಜತೆಗೇ ಸುಲಭ ದರದಲ್ಲಿ ಕೇಳಿದಷ್ಟು ಸಾಲವೂ ದೊರೆಯುವದಾದರೆ, ಅದು ಬಹು ಅಪಾಯಕಾರೀ ಪರಿಸ್ಥಿತಿ ಇದರ ಸೂಚನೆ ಸಿಗುತ್ತಿದ್ದಂತೆಯೇ ಹಣಕಾಸು ಮಾರುಕಟ್ಟೆಯ ನಿಯಂತ್ರಕರು ಎಚ್ಚರವಹಿಸಬೇಕು ಎನ್ನುತ್ತಾರೆ ಶ್ರೀ ರಘುರಾಂ ರಾಜನ್. '೨೦೦೭ ಮತ್ತು ೨೦೦೮ರಲ್ಲಿ ಜಾಗತಿಕವಾಗಿ ಬಂಡವಾಳ ಜಗತ್ತಿನಲ್ಲಿ ಉಂಟಾದ ಬಿಕ್ಕಟ್ಟಿನಿಂದ ಕಲಿತ ಪಾಠಗಳಲ್ಲಿ ಇದೂ ಒಂದು. ಹಣಕಾಸು ಲಭ್ಯತೆಗೆ ಪ್ರವೇಶ ಸುಲಭವಾಗಬೇಕಾದರೆ, ಅಂಥ ಸಂದರ್ಭದಲ್ಲಿ ಸಾಮಾನ್ಯವಾಗಿ ನಡೆಸುವ ಊಹಾಪೋಹಗಳಲ್ಲಿ ಒಂದಿಷ್ಟು ಅತಿಯಾದ ನಿರೀಕ್ಷಣೆಗೆ ಬಲಿಯಾಗದೆ ಹತೋಟಿಯಿದ್ದರೆ ಒಳ್ಳೆಯದು. ಪಾನಮತ್ತತೆಯ ಅನಪೇಕ್ಷಣೀಯ ಪರಿಣಾಮ ತಪ್ಪಿಸಿಕೊಳ್ಳಲು, ಮಾದಕತೆಯ ಅನುಭವದ ಪ್ರಾರಂಭದಲ್ಲೇ ಇನ್ನೂ ಮುಂದುವರಿಯದಿರುವ ಪ್ರಯತ್ನವನ್ನೂ ಆಗಲೆ ಆರಂಭಿಸಬೇಕಲ್ಲವೆ?' ಎನ್ನುತ್ತಾರೆ. ಅವರು ಊಹಾಪೋಹದ ನೀರ್ಗುಳ್ಳೆಗಳನ್ನು ಕುರಿತು ೧೯೩೦ರ ಹಣದುಬ್ಬರದ ಸಂದರ್ಭವನ್ನು ನೆನಪಿಸಿಕೊಂಡಾಗ, ಹಣಕಾಸು ನೀತಿಯಮೇಲೆ ಅದರ ಪರಿಣಾಮವನ್ನು ಗಮನಿಸಿದಾಗ, ಅನಿಯಂತ್ರಿತ ಸಾಲದ ಲಭ್ಯತೆ ಆರ್ಥಿಕತೆಯನ್ನು ಆಗಾಗ್ಗೆ ಉದ್ಭವಿಸುವ ಶಾಕ್‌ಗಳಿಗೆ ಸಂವೇದನಾಶೀಲವಾಗಿ ಪ್ರತಿಕ್ರಿಯಿಸುವಂತೆ ಮಾಡಿಬಿಡುತ್ತದೆ. ಹಠಾತ್ತಾಗಿ ಏಳುಬೀಳುಗಳು ಆಗುವುದು ಆಗಲೆ. ಇವು ಅಪೇಕ್ಷಣೀಯವಲ್ಲ. ಸ್ಥಿರಾಸ್ತಿಯ ಬೆಲೆಗಳಲ್ಲಿ ವಿಪರೀತ ಏರಿಕೆ, ಅದರಿಂದ ದೊರೆಯುವುದೆಂದು ಊಹಿಸುವ ಲಾಭಾಂಶದ ಹೆಚ್ಚಳದ ಲಾಲಸೆ ಅಂದಿನ ಮಾರುಕಟ್ಟೆಯ ಪತನಕ್ಕೆ ಮಾರ್ಗವಾದುವು. ಅದೇ ಕಾರಣ ಗಣನೀಯ ಸಂಖ್ಯೆಯಲ್ಲಿ ಸಾಲದ ಲಭ್ಯತೆಗೆ ಪ್ರವೇಶ ನೀಡಿಕೊಂಡಿದ್ದ ಬ್ಯಾಂಕುಗಳೂ ಸೋತವು.

**ಕೆ. ಎಸ್. ಪಾರ್ಥಸಾರಥಿ**

ಇದನ್ನು ಗಮನಿಸಿದಾಗ ಜವಾಬ್ದಾರಿಯುತವಾದ ರೀತಿಯಲ್ಲಿ ಅಪಾಯಗಳನ್ನು ನಿರ್ವಹಿಸುವಿಕೆಗೆ ಈ ತಿಳಿವು ಹೇಗೆ ಸಹಾಯಕಾರಿ? ಬಿರುಗಾಳಿ ಬಂದಾಗ ಗಾಳಿಯ ದಿಕ್ಕಿನಲ್ಲಿ ಬಗ್ಗಿ ತಪ್ಪಿಸಿಕೊಂಡರೆ ಅಪಾಯ ತಪ್ಪುತ್ತದೆ. ಆರ್ಥಿಕತೆಯೊಳಗೆ ಷೇರುಪೇಟೆ ಮುಂತಾದ ಸೂಚನೆಗಳಲ್ಲಿ ಬಿಸಿ ಏರುವ ಸೂಚನೆ ಕಂಡುಬರುತ್ತಿದ್ದಂತೆಯೇ, ಹಣಕಾಸು ನೀತಿಯನ್ನು ಬಿಗಿಗೊಳಿಸಿಕೊಳ್ಳಬೇಕು ಅಂತ ಅರ್ಥ. ಮೂಲಭೂತ ಬೆಳವಣಿಗೆ ಮುಂತಾದ ಸೂಚ್ಯಂಕಗಳು ಕ್ಷೇಮಕರವಾಗಿದ್ದಾಗಲೂ ಅದೇ ಕಾರಣ ಸಾಲ ಮತ್ತು ಸ್ಥಿರಾಸ್ತಿಗಳ ಬೆಲೆ ಏರುತ್ತಿವೆ ಅಂತಾದರೂ, ಹಣಕಾಸು ನೀತಿಯ ವಿಷಯದಲ್ಲಿ ತೀರ ಸಡಿಲವಲ್ಲದ ನೀತಿಗೆ ಶರಣು ಹೋಗುವುದು ವಿವೇಕ. ಸಾಲದ ಬೆಲೆಯಲ್ಲಿನ ಹಾಗೂ ಸ್ಥಿರಾಸ್ತಿಗಳ ಬೆಲೆಯಲ್ಲಿ ವಿಪರೀತ ಏರಿಕೆ ಆಗುತ್ತಿದೆಯೇ ಎಂದು ನೀತಿ ನಿರೀಕ್ಷಕ ಅಧಿಕಾರಿಗಳು ಗಮನಿಸುತ್ತಲೇ ಇರಬೇಕು.

'ಅಭಿವೃದ್ಧಿಶೀಲ ಮತ್ತು ಅಭಿವೃದ್ಧಿಹೊಂದಿದ ರಾಷ್ಟ್ರಗಳ ಮಾರುಕಟ್ಟೆಗಳೆರಡರ ರಾಷ್ಟ್ರಗಳಿಗೂ ಪದೇ ಪದೇ ಈ ಕುರಿತು ಎಚ್ಚರಿಕೆ ನೀಡಿ, ಅವರ ಬಜೆಟ್ ಸೂಚಕ ಸಂಖ್ಯೆಗಳನ್ನು ಸಡಿಲಗೊಳಿಸದೆ ಭದ್ರಗೊಳಿಸಬೇಕೆಂದು ಸಲಹೆ ನೀಡಲಾಗಿದೆ. ಆದರೆ ಅವು ಸಾಕಷ್ಟು ಸಮರ್ಥವಾಗಿ ಈ ಕೆಲಸ ಮಾಡುತ್ತಿಲ್ಲ. ಬಜೆಟ್ ಕೊರತೆಗಳನ್ನು ಹೆಚ್ಚಿಸಿಕೊಳ್ಳುತ್ತಲೆ ಇವೆ' ಅಂತ ಹೇಳುವ ಗವರ್ನರ್, ಅದನ್ನು ರಾಜಕೀಯ ಆಡಳಿತದ ವೈಫಲ್ಯ ಎಂದು ನೇರವಾಗಿ ಹೇಳುವುದಿಲ್ಲ. ಇದು ರಘುರಾಂ ರಾಜನ್ ಅವರು ಮೊನ್ನೆ ಇಟಲಿಯ ಬ್ಯಾಂಕಿಂಗ್ ಕ್ಷೇತ್ರ ಏರ್ಪಡಿಸಿದ್ದ ಸಭೆಯಲ್ಲಿ ಮಾಡಿದ

ಭಾಷಣದ ಭಾಗ. ರಘುರಾಂ ರಾಜನ್ ಅವರು ಬಂಡವಾಳ ವ್ಯವಸ್ಥೆಯ ಒಬ್ಬ ಉತ್ತಮ ಅರ್ಥಶಾಸ್ತ್ರಿ. ಅವರನ್ನು ಗೌರವಿಸಬೇಕು. ಹಿಂದಿನ ಗವರ್ನರ್ ಸುಬ್ಬರಾಯರನ್ನು ಕಟುವಾಗಿ ಟೀಕಿಸಿದವರು ಈಗ ಏನು ಹೇಳುವರೋ ?

ಸಮಾಜವಾದಿ ಅಥವಾ ಉದಾರವಾದಿಯಾಗಿ ಚಿಂತನೆ ಮಾಡುವವರಿಗೂ ಇಲ್ಲಿ ರಾಜನ್ ಅವರು ನೀಡಿರುವ ಮದ್ಯಪಾನದ ಸಾಮ್ಯ ಬಹಳ ಬೋಧನೀಯ. ಕುಡಿತದ ಅಮಲು ಏರುತ್ತಿರುವ ಅನುಭವ ಬರುತ್ತಿದ್ದಂತೆಯೇ ಬಟ್ಟಲನ್ನು ದೂರಸರಿಸುವುದು ಅನ್ನುವುದು ಪಾನ ಮಾಡುತ್ತಿರುವವನಿಂದಲೇ ಬಹಳಮಟ್ಟಿಗೆ ಸಾಧ್ಯವಾಗುವುದಿಲ್ಲ. ಮದ್ಯಪಾನವೇ ಅವಿವೇಕವಾಗಿರುವಾಗ, ಪಾನ ಮಾಡುತ್ತಿರುವವನಿಗೇ ಬಟ್ಟಲನ್ನು ದೂರಸರಿಸುವ ವಿವೇಕದ ಪ್ರವೇಶ ಸಾಧ್ಯವಿಲ್ಲ. ಅದು ನಿಯಂತ್ರಕರ ಕೆಲಸ. ಷೇರುಪೇಟೆಯ ಖದೀಮ ಕುಡುಕರು ತಮ್ಮದೇ ಹಣ ಹೂಡುವುದು ಅಪರೂಪ. ಅಲ್ಲಿಯ ಸೂಚ್ಯಂಕಗಳ ಏರುಪೇರು ನೋಟವೇ ಮಾದಕ ವಸ್ತು. ಹೀಗಾಗಿ ಅವನು ಅತಿಯಾಗಿ ಪಣತೊಟ್ಟ, ತನ್ನನ್ನು ನಂಬಿದವರನ್ನು ಬಾವಿಗೆ ತಳ್ಳುತ್ತಾನೆ. ಹಣಕಾಸು ಮಾರುಕಟ್ಟೆ ಕುಸಿಯುತ್ತದೆ. ಇದರ ಪರಿಣಾಮ ಇದಕ್ಕೆ ನೇರವಾಗಿ ಸಂಬಂಧಪಡದ ಜನತೆಯ ಮೇಲೆ ಆಗುತ್ತದೆ.




**ಚಿನ್ನ ಕುರಿತ ಒಂದು ಟಿಪ್ಪಣಿ**

ಚಿನ್ನದ ವಾಣಿಜ್ಯ ವ್ಯವಹಾರದಲ್ಲಿ ಕಣ್ಣಿಗೆ ಗೋಚರಿಸುವಷ್ಟೇ ಗೋಚರಿಸದ ವ್ಯವಹಾರವೂ ಅಡಗಿದೆ. ಚಿನ್ನದ ಆಮದನ್ನು ಕಡಿಮೆ ಮಾಡಲು ಕಸ್ಟಮ್ ತೆರಿಗೆಯ ಹೆಚ್ಚಳ, ಚಿನ್ನದ ನಾಣ್ಯ ಸ್ವರೂಪದ ಆಮದು ಮುಂತಾದುವನ್ನು ನಿಷೇಧಿಸಿ ಕ್ರಮಗಳನ್ನು ಕೈಗೊಂಡರೂ ಈ ವರ್ಷಾಂತ್ಯದ ವೇಳೆಗೆ ಚಿನ್ನಕ್ಕೆ ಬೇಡಿಕೆ ೯೦೦ ಟನ್‌ಗಳಷ್ಟು ಆಗಬಹುದು. ಕಳೆದ ವರ್ಷ ಇದು ೮೬೦ ಟನ್‌ಗಳಷ್ಟಿತ್ತು. ಚೀನದಲ್ಲಿ ಇದೇ ಸಮಯ ಬೇಡಿಕೆ ೧೦೦೦ ಟನ್‌ಗಳಷ್ಟಾಗಬಹುದು.

ಪೂರೈಕೆಯಲ್ಲಿ ತೊಡಕುಗಳನ್ನು ಸೃಷ್ಟಿಸಿರುವುದು; ಹಣದುಬ್ಬರ ವಿಪರೀತವಾಗಿರುವುದು; ಇವು ಚಿನ್ನದ ಬೇಡಿಕೆಯಲ್ಲಿ ಕುಸಿತಕ್ಕೆ ಕಾರಣಗಳು. ಚಿನ್ನಾಭರಣಗಳಿಗೆ ಬೇಡಿಕೆ ಶೇ. ೨೩ರಷ್ಟು ಮತ್ತು ಚಿನ್ನದಲ್ಲಿ ಹೂಡಿಕೆಯಲ್ಲಿ ಶೇ. ೪೮ರಷ್ಟು ಕೊರತೆ ಉಂಟಾಗಿದೆ. ಕಳೆದ ಸೆಪ್ಟೆಂಬರ್ ಅಂತ್ಯದ ಮೂರು ತಿಂಗಳಲ್ಲಿ. ಹಳೆಯ ಚಿನ್ನವನ್ನು ಪುನಃ ಪರಿಷ್ಕರಿಸಿ ಬಳಸುವ ಲೆಕ್ಕದಲ್ಲಿ ಈ ಮೂರು ತಿಂಗಳಲ್ಲಿ ಕಳೆದ ವರ್ಷ ಇದೇ ಸಮಯ ೩೪ ಟನ್ ಇದ್ದಿದ್ದು ಈಗ ೬೧.೩ ಟನ್‌ಗಳಾಗಿವೆ. ಇದೇ ಸಮಯದಲ್ಲಿ ಕಳೆದ ವರ್ಷ ೧೪೪.೦೨ ಟನ್ ಆಮದುಮಾಡಿಕೊಂಡಿದ್ದರೆ ಈ ಸಾರಿ ಇದು ಕೇವಲ ೮೦ ಟನ್‌ಗಳು. ಚಾಲ್ತಿ ಲೆಕ್ಕದಲ್ಲಿ – ಸಿಎಡಿ – ಕರೆಂಟ್ ಅಕೌಂಟ್ ಡೆಫಿಸಿಟ್ – ವಿಪರೀತ ಹೆಚ್ಚುತ್ತಲ್ಲ ? ಆಮದು ನೀತಿ ಪರಿಷ್ಕರಣದ ಮೂಲಕ ಚಿನ್ನದ ಆಮದನ್ನು ಕಳೆದ ವರ್ಷಕ್ಕಿಂತ ಕಡಿಮೆ ಮಾಡಿ, ಸ್ವಲ್ಪ ಸಿಎಡಿ ಸಂಖ್ಯೆ ಉತ್ತಮಪಡಿಸಿಕೊಳ್ಳುವುದು ಸಾಧ್ಯವಾಗಿದೆ. ಡಾಲರಿನ ಕೊರತೆ ವಿಪರೀತವಾದಾಗ, ಅಷ್ಟೊಂದು ಚಿನ್ನಕ್ಕೆ ಡಾಲರಿನಲ್ಲೆ ಹಣ ನೀಡುವುದು ಕಷ್ಟವಾಗಿತ್ತು. ಅಂತರರಾಷ್ಟ್ರೀಯ ಗೋಲ್ಡ್ ಕೌನ್ಸಿಲ್ – ವ್ಯಾಪಾರಿ ಸಂಸ್ಥೆ – ನ ಭಾರತೀಯ ವಿಭಾಗದ ಮುಖ್ಯ ಕಾರ್ಯನಿರ್ವಹಣೆಯ ನಿರ್ದೇಶಕ ಪಿ. ಆರ್. ಸೋಮಸುಂದರಂ ಈ ಎಲ್ಲ ಅಂಕಿ – ಅಂಶಗಳನ್ನು ಮುಂದಿಡುತ್ತಾ ಹೇಳುವ ಮಾತು "ಇದೇ ರೀತಿ ಸರ್ಕಾರದ ನೀತಿ ಸುಲಭವಾಗಿ ಚಿನ್ನದ ಆಮದು ಮಾಡಲು ತಡೆಯೊಡ್ಡಿದರೆ, ಬೇಡಿಕೆಗಿಂತ ಪೂರೈಕೆ ಕಡಿಮೆಯಾಗುತ್ತದೆ. ಆಗ ಕೊರತೆಯ ಪ್ರಮಾಣದ ಚಿನ್ನವನ್ನು ಸರ್ಕಾರೇತರ ಮಾರ್ಗಗಳಿಂದ ಪೂರೈಸಬೇಕಾಗುತ್ತದೆ. ಇದು ಈಗಾಗಲೆ ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಿದೆ." ಚಿನ್ನದ ಆಮದನ್ನು ನಿಯಂತ್ರಣದಿಂದ ಮುಕ್ತ ಮಾಡದಿದ್ದರೆ ಕಳ್ಳಹಾದಿಯಲ್ಲಿ ತರುತ್ತೇವೆ ಅಂತ ಹೇಳಿದಂತಲ್ಲವೆ ಇದು ? ಅದು ಅವರ ಇಂಗಿತವಲ್ಲದಿದ್ದರೆ ಕೊರತೆಯನ್ನು ರಿಸೈಕಲ್ ಚಿನ್ನದಿಂದ ತುಂಬಿಕೊಳ್ಳುತ್ತೇವೆ ಅಂತ ಹೇಳಬಹುದಿತ್ತಲ್ಲ ? ಯಾರನ್ನು ಯಾರು ನಿಯಂತ್ರಿಸುತ್ತಿದ್ದಾರೆ ? ಬಾಲ ಯಾವುದು ? ದೇಹ ಯಾವುದು ? ದೇಶದ ಹೊರಗೆ ಬಚ್ಚಿಟ್ಟಿದ್ದ ಕಪ್ಪು ಹಣ ಈಗ ಈ ಚಿನ್ನದ ಮೂಲಕ ಬಹಿರಂಗವಾಗಿ, ಗೋಪ್ಯವಾಗಿ ಬರುತ್ತಿದೆ ಎಂದು ಇದರಿಂದಲೇ ಸ್ಪಷ್ಟ, ಈಗ ಪರಿಸ್ಥಿತಿಯ ಇನ್ನೊಂದು ಮಗ್ಗುಲನ್ನು ಗಮನಿಸೋಣ. ರಿಸರ್ವ್ ಬ್ಯಾಂಕ್ ಗವರ್ನರ್ ಮತ್ತು ಚಿದಂಬರಂ ಪ್ರತಿದಿನ ಪತ್ರಿಕೆಯಲ್ಲಿ ತಲೆಬರಹದಲ್ಲಿ ಬರುತ್ತಿದ್ದಾರೆ. ರಘುರಾಂ ರಾಜನ್ ಅವರು ಇಟಲಿಯಲ್ಲಿ 'ಆರ್ಥಿಕ ಸಂಕಷ್ಟ ಬಿಕ್ಕಟ್ಟಿನ ಸಮಯದಲ್ಲಿ ಬಿರುಗಾಳಿಗೆ ತಲೆ ಒಡ್ಡಬಾರದೆಂದರು.' ಪೆಪ್ಸಿಕೋಲಾ ಅಧ್ಯಕ್ಷೆ ಶ್ರೀಮತಿ ಇಂದ್ರಾ ನೂಯಿ ನುಡಿದ ಹಿತೋಪದೇಶ : **'ಈ ಬಿಕ್ಕಟ್ಟು ಸಾಕಷ್ಟು ಕಾಲ ಸ್ಥಿರವಾದುದು ಎಂದು ಒಪ್ಪಿಕೊಳ್ಳಿ**. ಇದು ಆಕ್ರಮಣಕಾರಿ ಪ್ರವೃತ್ತಿಗೆ ಸಮಯವಲ್ಲ. ತಾಳ್ಮೆ ಇರಬೇಕು; ಎಚ್ಚರಿಕೆಯಿಂದ ವರ್ತಿಸಬೇಕು. ದೀರ್ಘಕಾಲೀನವಾಗಿ ಚಿಂತಿಸಿ, ತಾತ್ಕಾಲಿಕವಾಗಿ ಅಲ್ಲ. ಅಲ್ಲೋಲ ಕಲ್ಲೋಲ ಸಮಯದಲ್ಲಿ ನಾಯಕತ್ವ ಕೆಚ್ಚೆದೆಯಿಂದ ಮತ್ತು ಆತ್ಮವಿಶ್ವಾಸದಿಂದ ವರ್ತಿಸಬೇಕು. ಈ ಬದಲಾದ ಸ್ಥಿತಿಗೆ ತಕ್ಕಂತೆ ತಮ್ಮ ನೀತಿಗಳನ್ನು, ವ್ಯವಹಾರವನ್ನು ಅಳವಡಿಸಿಕೊಳ್ಳಬೇಕು. ಅದೇ ಸಮಯ ಏನೇ ಆದರೂ ಕಂಪನಿಯ ಮೂಲ ಮೌಲ್ಯಗಳನ್ನು ಕೈ ಬಿಡಬೇಡಿ' ಈಕೆ ಉದ್ಯಮ ಲೋಕದ ಒಬ್ಬ ಅಸಾಧಾರಣ ನಾಯಕಿ ಎಂದು ಹೆಸರು ಗಳಿಸಿದ್ದಾರೆ.

ಸಿಎಡಿ ೬೦ ಬಿಲಿಯ ಡಾಲರ್‌ಗೆ ತಂದರೆ, ಆಗ ತನ್ನ ನೀತಿಯಲ್ಲಿ ಒಂದಿಷ್ಟು ಸಡಿಲತೆ ಸಾಧ್ಯ ಅನ್ನುತ್ತಿದ್ದ ರಘುರಾಂ ರಾಜನ್ ಈಗ ಇದು ೫೦ಕ್ಕೂ ಇಳಿಯಬಹುದು ಎನ್ನುತ್ತಿದ್ದಂತೆಯೇ, ತನ್ನ ಮುಂದಿನ ನೀತಿಗಳನ್ನು ನಿರ್ಧರಿಸುವಾಗ, ಯಾವುದೇ ಒಂದು ಅಂಶವನ್ನು ಮಾತ್ರ ಪರಿಗಣಿಸಲಾಗುವುದಿಲ್ಲ ಎಂದಿದ್ದಾರೆ. ಈ ಬೆಳವಣಿಗೆಯ ನಂತರ ಅವರೇನಾದರೂ ಬಡ್ಡಿಯ ದರವನ್ನು ಇಳಿಸಿಯಾರೆ ಅಂದುಕೊಂಡವರಿಗೆ ಮತ್ತೆ ನಿರಾಸೆ ಆಗಬಹುದು. ಮುಂದುವರಿದು ಇಡೀ ಹಣಕಾಸುಲೋಕದ ಹತ್ತಾರು ನೀತಿ ಮತ್ತು ಕಾರ್ಯಕ್ರಮಗಳ ಪಟ್ಟಿಯನ್ನೇ ನೀಡಿ, ಅಲ್ಲೆಲ್ಲಾ ಸಾಕಷ್ಟು ಪರಿಷ್ಕರಣೆ ಆಗಬೇಕು ಎಂದಿದ್ದಾರೆ. ಇವು ಬಹುತೇಕ ವಿತ್ತ ಮಂತ್ರಿಯ, ಬ್ಯಾಂಕುಗಳ ಕೆಲಸ, ರಿಸರ್ವ್ ಬ್ಯಾಂಕಿನದಲ್ಲ ಎನ್ನುವುದು ಗಮನಾರ್ಹ. ಒಂದು ಮುಖ್ಯವಾದ ನೀತಿ ಸಲಹೆ ಅಂದರೆ ಉಳಿತಾಯಕ್ಕೆ ಹಲವು ಪ್ರೋತ್ಸಾಹಗಳನ್ನು ನೀಡುವುದೂ ಸೇರಿದೆ. ಇವೆಲ್ಲವುಗಳ ಪರಿಣಾಮವಾಗಿ ಹಣದುಬ್ಬರ ಇಳಿದು ಅಭಿವೃದ್ಧಿಗೆ ನೆರವಾಗಬೇಕೆ ವಿನಾ ಕೇವಲ ಬಡ್ಡಿದರವನ್ನು ಇಳಿಸುವುದರಿಂದ ಅಲ್ಲ ಎನ್ನುವಂತಿದೆ, ಇವರ ಧೋರಣೆ. ಚಿದಂಬರಂಗೆ ಈ ಸವಾಲು ಅಸಮಾಧಾನವೇ ಅಂತ ಅನ್ನಿಸುತ್ತೆ. ಅವರು ಹೇಳುತ್ತಾರೆ. 'ರಿಸರ್ವ್ ಬ್ಯಾಂಕ್ ಗವರ್ನರ್‌ರವರ ಬಡ್ಡಿದರದ ಆರ್ಥಿಕ ನೀತಿಯಿಂದ ಅಂದರೆ ಕಡಿಮೆ



ಡಾಲರಿಗೆ ವಿಪರೀತ ಬೇಡಿಕೆ ಬಂದಿರುವುದು ಕೇವಲ ತೈಲ ಇಂಧನ ಕಂಪನಿಗಳಿಂದ ಮಾತ್ರವಲ್ಲ. ವಿದೇಶೀ ಹೂಡಿಕೆದಾರರು ಷೇರುಪೇಟೆಯಿಂದ ಹಿಂತೆಗೆಯುವ ಹಣವೂ ಇದಕ್ಕೆ ಕಾರಣವಿದ್ದಂತಿಲ್ಲ. ಅಲ್ಲಿ ಒಳಹರಿವೂ ಇದೆ. ಉದ್ಯಮ ಕ್ಷೇತ್ರ ಕೈಗಾರಿಕಾ ವಿಕಾಸಕ್ಕೆ ಅಗತ್ಯ ಆಮದಿಗೆ ನೀಡಲು ಎಂದು ಹೇಳಿಕೊಳ್ಳುತ್ತಿದೆ. ಅಂದರೆ ಅದೆಲ್ಲ ಹೂಡಿಕೆಯಾಗುತ್ತಿದೆಯೆ ? ನಮ್ಮದೇ ಕಂಪನಿಗಳು ಪರದೇಶದಲ್ಲಿ ಹೂಡಿಕೆಗಾಗಿ ಡಾಲರ್ ಕೊಳ್ಳುತ್ತಿದ್ದರೆ ಅದಕ್ಕೆ ಇದು ಸರಿಯಾದ ಸಮಯವೇ ? ಚಿನ್ನದಂತೆ ಡಾಲರಿನಲ್ಲಿ ತಮ್ಮ ಸಂಪತ್ತನ್ನು ಶೇಖರಿಸುತ್ತಿದ್ದರೆ ಅದು ಬನಿಯಾ ಬುದ್ಧಿಯಾಗುತ್ತದೆ. ಉದ್ಯಮಶೀಲತೆ ಅಲ್ಲ. ಇಲ್ಲೆಲ್ಲಾ ಅಡಗಿರುವ ದುಷ್ಟ ಶಕ್ತಿಗಳ ವಿರುದ್ಧ ಕಾರ್ಯಾಚರಣೆ ಏಕೆ ನಡೆಯುತ್ತಿಲ್ಲ ಅನ್ನುವುದು ಸೋಜಿಗ.

ಮಾಡುವುದಿಲ್ಲ ಅನ್ನುವುದರಿಂದ ಏನೂ ಪ್ರಯೋಜನವಿಲ್ಲ' ಅನ್ನುವುದು. ಹಣದುಬ್ಬರಕ್ಕೆ ಕಾರಣ ಮುಖ್ಯವಾಗಿ ಆಹಾರಕ್ಷೇತ್ರದಲ್ಲಿ ಬೇಡಿಕೆ ಹೆಚ್ಚಿದೆ, ಪೂರೈಕೆ ಕಡಿಮೆಯಾಗಿದೆ. ಆದರೆ ಈತ ಇದಕ್ಕೆ ಮುಂಚೆ ಪರೋಕ್ಷವಾಗಿ ಇದಕ್ಕೆ ಕಾರಣವಾಗಿ ರಿಸರ್ವ್ ಬ್ಯಾಂಕನ್ನು ತರಾಟೆಗೆ ತೆಗೆದುಕೊಂಡಿದ್ದರಲ್ಲವೇ ?

ಈ ಚರ್ಚೆಗಳಿಂದ ಸಾಧಾರಣ ಜನಕ್ಕೆ ಏನು ಪ್ರಯೋಜನ ? ಕತ್ತಲೆಯಲ್ಲಿ ಸಿಳ್ಳೆ ಹಾಕಿದಂತೆ ಇದೆ ಈ ಚರ್ಚೆ. ಸಿಎಡಿ ಹೆಚ್ಚಳ ಕಾರಣ ಅಂದರು; ಅದೂ ಸರಿಯಾಗುತ್ತದೆ. ರೂಪಾಯಿ ಬೆಲೆ ಏರಿತು, ವಿದೇಶೀ ಬಂಡವಾಳ ಹೂಡಿಕೆ ಬರುತ್ತಿಲ್ಲ ಅಂದರು. ಆದರೆ ರೂಪಾಯಿ ಬೆಲೆ ೬೧–೬೨ಕ್ಕೆ ಬಂದಿದ್ದು ಅದೇ ಸರಿಯಾದ ಬೆಲೆ ಅನ್ನುತ್ತಾರೆ ಈಗ. ವಿದೇಶೀ ಬಂಡವಾಳ ಹೂಡಿಕೆಯಾಗಿ ಪ್ರತಿ ತಿಂಗಳೂ ೨–೩ ಬಿಲಿಯ ಡಾಲರ್ ಹರಿದು ಬರುತ್ತಿದೆ. ಆಗಲೇ ಚಿನ್ನದ ಆಮದನ್ನು ಹಗುರಗೊಳಿಸುವ ಸೊಲ್ಲು ಎದ್ದಿದೆ. ಈ ಸಾರಿ ಮಳೆಯಾಗಿದ್ದು, ಆಹಾರಧಾನ್ಯದ ಬೆಳೆ ಹಾಗೂ ಕೃಷಿಕ್ಷೇತ್ರದಲ್ಲಿ ಹೆಚ್ಚಳ ಶೇ. ೩–೪ ಆಗಬಹುದು ಎಂದು ಸಮಾಧಾನಕರ ಅಂದಾಜಾಗಿದೆ. ಕೈಗಾರಿಕೆಯಲ್ಲಿ ಮಾತ್ರ ಸ್ಥಳೀಯ ಬಂಡವಾಳ ಹೂಡಿಕೆಯೇ ಆಗುತ್ತಿಲ್ಲ; ಅದರ ಬೆಳವಣಿಗೆ ಶೇ. ೦.೬ ಅನ್ನುವಷ್ಟು ಹೀನಾಯವಾಗಿದೆ. ಆದರೂ ಸರ್ಕಾರದ ಆರ್ಥಿಕ ಉದಾರನೀತಿ ಅಂದರೆ ಸಡಿಲಗೊಳಿಸುವುದೆಲ್ಲ ಇವರಿಗಾಗಿಯೇ. ಕಳೆದ ಮೂರು ವರ್ಷಗಳಲ್ಲೂ ಈ ಸಮಯದಲ್ಲಿ, ಮಾರ್ಚ್‌ವರೆಗೆ ಯೋಜನಾ ವೆಚ್ಚವನ್ನೂ ಸಾರ್ವಜನಿಕ ಕ್ಷೇತ್ರದ ವೆಚ್ಚವನ್ನೂ ಕಡಿತಗೊಳಿಸುವ ಮೂಲಕ ಬಜೆಟ್ ಕೊರತೆ ನೀಗಿಸಲು ಹರಸಾಹಸ ಮಾಡಿ, ವಿಫಲವಾಗುತ್ತಿದೆ ಸರ್ಕಾರ. ಅವರು ಬಯಸುವ ಜಿಡಿಪಿ ಮಾತ್ರ ದಕ್ಷಿಣಕ್ಕೆ ತಿರುಗಿದೆ. ಈಗಿರುವ ತೆರಿಗೆಯ ದರದಿಂದ ಸಾಕಷ್ಟು ಆದಾಯ ಸರ್ಕಾರಕ್ಕೆ ಬರದೆ, ಈ ಕ್ಷೇತ್ರದಿಂದ ಬಜೆಟ್ಟಿಗೆ ಏನೂ ಸಹಾಯವಿಲ್ಲ. ಸರ್ಕಾರದ ವತಿಯಿಂದಲೂ ಖಾಸಗೀ ವತಿಯಿಂದಲೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಹೂಡಿಕೆ ಆಗುತ್ತಿಲ್ಲ. ಆದರೆ ರಿಲೈಯನ್ಸ್ ಕಂಪನಿಗೆ ಪೆಟ್ರೋಲ್ ಲೆಕ್ಕದಲ್ಲಿ ಹೆಚ್ಚುದರ ನೀಡುವ ಹುಂಬತನವನ್ನು ಮಾಡಿದೆ ಸರ್ಕಾರ. **ಸಾರ್ವತ್ರಿಕ ಚುನಾವಣೆ ಹತ್ತಿರವಾಗುತ್ತಿದ್ದಂತೆ ಸರ್ಕಾರ ದಿಕ್ಕು ತಪ್ಪಿರುವಂತೆ ಗೋಚರಿಸುತ್ತಿದೆ. ಹೂಡಿಕೆಗೆ ಹಣವಿಲ್ಲ ಅನ್ನುವುದು ಸುಳ್ಳು. ಹಿರಿಯ ಉದ್ಯಮಗಳು ನಗದು ರಾಶಿಯನ್ನು ಬಡ್ಡಿಗೆ ಠೇವಣಿ ಇಟ್ಟಿರುವುದು ಇದನ್ನೇ ಹೇಳುತ್ತದೆ. ಆದರೆ ಉದ್ಯಮಪತಿಗಳು ಸಾಹಸವನ್ನೇನೂ ಪ್ರಕಟಿಸುತ್ತಿಲ್ಲ. ಅದೊಂದು ರೀತಿಯ ಹೂಡಿಕೆ ಮಾಡದ ಮುಷ್ಕರವಿದ್ದಂತೆ ಕಾಣುತ್ತಿದೆ. ಬೆಲೆ ಏರಿಕೆಗೆ ಅದರಲ್ಲೂ ಅಗತ್ಯವಸ್ತುಗಳ ಆಹಾರಧಾನ್ಯ ಮುಂತಾದವುಗಳ ಬೆಲೆ ಏರಿಕೆಗೆ ಬೆಳೆ ಕಡಿಮೆ, ಪೂರೈಕೆ ಇಲ್ಲ ಅನ್ನುವುದನ್ನು ಒಪ್ಪಲಾಗುವುದಿಲ್ಲ. ಪೆಟ್ರೋಲ್ ಮತ್ತು ಡೀಸೆಲ್ ದರ ಏರಿಕೆ ಸ್ವಲ್ಪಮಟ್ಟಿಗೆ ಕಾರಣ. ಹಾಗಾಗಿ ಚುನಾವಣಾ ಸಂದರ್ಭದಲ್ಲಿ, ಯುಪಿಎ ಸರ್ಕಾರವನ್ನು ಉರುಳಿಸ ಬಯಸುವ ಮಾರುಕಟ್ಟೆಯ ಶಕ್ತಿಗಳು ಈ ಆಟವನ್ನು ಕೃತ್ರಿಮವಾಗಿ ಸೃಷ್ಟಿಸಿಲ್ಲವೆ ? ಕಾರ್ಮಿಕರು ನ್ಯಾಯಯುತವಾದ ಬೇಡಿಕೆಗಳಿಗಾಗಿ ಮುಷ್ಕರ ಹೂಡಿದರೆ ಅವರ ವಿರುದ್ಧ ಎಸ್ಮಾ ಕಾಯಿದೆ ಪ್ರಯೋಗಿಸಲು ಹಿಂದೆಗೆಯದ ಸರ್ಕಾರ, ಕಾಳುಸಂತೆಯ ವಿರುದ್ಧ ಏಕೆ ಅದನ್ನು ಪ್ರಯೋಗಿಸುತ್ತಿಲ್ಲ ?** ಸಾರ್ವಜನಿಕ ಬ್ಯಾಂಕುಗಳಿಗೆ ಅಪಾರ ಸಾಲದ ಬಾಕಿ ಉಳಿಸಿಕೊಂಡು, ಕೆಟ್ಟ ಆಸ್ತಿಗಳನ್ನು ಆಧಾರ ನೀಡುವ ಉದ್ಯಮಿಗಳ ವಿರುದ್ಧ ಏಕೆ ನಯವಾಗಿ ನಡೆದುಕೊಳ್ಳುತ್ತಾರೆ ? ತೆರಿಗೆ ನೀಡದವರ ವಿರುದ್ಧ ಆದಾಯ ತೆರಿಗೆ ಇಲಾಖೆ ಹಾಗೂ ಎನ್‌ಫೋರ್ಸ್‌ಮೆಂಟ್ ನಿರ್ದೇಶನಾಲಯ ಕೆಲವು ದಿನ ಮಾತ್ರ ಕಾರ್ಯಾಚರಣೆ ನಡೆಸಿತು. **ಉದ್ಯಮಿಗಳು ಅಬ್ಬರಿಸಿದರು. ಸರ್ಕಾರ ಸುಮ್ಮನಾಯಿತು.** ಬಜೆಟ್ ಕೊರತೆಯಿಂದ ಹಣದುಬ್ಬರವಾಗಿರುವುದು ಕಾರಣ ಎನ್ನುವುದನ್ನು ಒಪ್ಪಲಾಗುವುದಿಲ್ಲ. ಅಮೆರಿಕದ ಟ್ರೆಝರಿ ಏನು ಮಾಡುತ್ತದೆ ಎನ್ನುವುದರ ಮೇಲೆ ನಮ್ಮದೆಲ್ಲ ಅವಲಂಬಿತ ಅನ್ನುವುದು ಹೀನಾಯವಾದ. ಇದೂ ನಿಜವಲ್ಲ. ಬಡ್ಡಿ ದರ ಹೆಚ್ಚಿದ್ದರೂ ಹೂಡಿಕೆಗಾಗಿಯೇ ವಿಶೇಷ ಅನುಕೂಲಗಳನ್ನು ನೀಡಲಾಗಿದೆ. ವಾಸ್ತವದಲ್ಲಿ ಅನ್ಯಾಯವಾಗಿರುವುದು ಉಳಿತಾಯ ಮಾಡಿರುವವರಿಗೆ. ಹಣದುಬ್ಬರದ ಲೆಕ್ಕ ತೆಗೆದುಕೊಂಡರೆ ಅವರಿಗೆ ಸಿಗುವ ಬಡ್ಡಿ ಋಣಾತ್ಮಕ ಹೇಗೋ ಯಾವುದೋ ಮಾಂತ್ರಿಕಮಾರ್ಗದಲ್ಲಿ ಪರಿಹಾರ ಕಾಯುತ್ತಾ, ನಿಷ್ಕ್ರಿಯವಾಗಿ ಹತಾಶವಾಗಿ ಕುಳಿತಂತೆ ಇದೆ ಸರ್ಕಾರ. ಪ್ರತಿ ದಿನ ಬ್ಯಾಂಕರುಗಳು, ರಿಸರ್ವ್‌ಬ್ಯಾಂಕ್, ವಿತ್ತಮಂತ್ರಿ ಚಿಂತನೆಯ ದಾರಿತಪ್ಪಿಸುವ ಹೇಳಿಕೆಗಳನ್ನು ಮಾತ್ರ ನೀಡುತ್ತಿದ್ದಾರೆ. ಕೋಣನೆರಡುಂ ಹೋರೆ ಗಿಡಕ್ಕೆ ಮಿತ್ತು ! ಈ ಚುನಾವಣೆಯ ಹಗರಣ ಬೇಗ ಮುಗಿಯಬಾರದೆ ?



ಈ ಸಂಜೆ ಹೀಗೇ ಉಳಿದುಬಿಟ್ಟಿದ್ದರೆ
ಎಷ್ಟು ಸುಖವಾಗಿರುತ್ತಿತ್ತು !
ಮರಿಯೆಡೆಗೆ ಹಕ್ಕಿ, ತೀರದೆಡೆಗೆ ಅಲೆ
ಪ್ರೀತಿಯೆಡೆಗೆ ಜೀವ
ನಗುವಿನೆಡೆಗೆ ಬೆಚ್ಚಗಿನ ಸಂವೇದನೆ
ಬೆಳಕಿನೆಡೆಗೆ ಶುಭ್ರ ಕತ್ತಲು...
ಈ ಪ್ರಶಾಂತ ಪಯಣದ
ಅತೀತತೆಯನ್ನು ಮೀರುವಂಥದ್ದೇನಿದೆ
ಇಲ್ಲಿ ?
ಇದು ಹೀಗೇ ಉಳಿದುಬಿಟ್ಟಿದ್ದರೆ
ಆಸೆ, ನೋವು, ಅಕ್ಷರಗಳ
ಗುರುತು ಮರೆಯುತ್ತಿತ್ತು !

**ಚಿನ್ಮಯ್ ಎಂ.**
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ – ೫೭೪ ೧೯೯

ಕ್ರೋನಿ ಕ್ಯಾಪಿಟಲಿಸಂ ಅನ್ನುವ ಪದಕ್ಕೆ ಬೇಕಾದಷ್ಟು ವಿವರಣೆಗಳನ್ನು ನೀಡಬಹುದು. ಒಂದೆರಡು ವಿಷಯಗಳನ್ನು ಗಮನಿಸಬಹುದು. ತನ್ನದೇ ಹಣದ ಪಾತ್ರ ಕನಿಷ್ಠ, ಬೇರೆಯವರ ಅದರಲ್ಲೂ ಸಾರ್ವಜನಿಕ ಹಣ ಗರಿಷ್ಠ, ಆದರೂ ಲಾಭವೆಲ್ಲ ಆ ಉದ್ಯಮಿಯದು. ಬೇರೆಯವರ ಹಣವನ್ನು ಸಂಗ್ರಹಿಸುವುದು ಕೇವಲ ನ್ಯಾಯಯುತ ಲಾಭದಿಂದಲ್ಲ. ಅದು ಯಾತಕ್ಕೂ ಸಾಲದು. ಬೆಲೆ ಏರಿಕೆ ಸಾರ್ವಜನಿಕರನ್ನು ಅವರಿಗರಿವಿಲ್ಲದೆಯೇ ಸುಲಿದು ಅಥವಾ ಬಹಿರಂಗ ಹಿಂಸೆಯಿಲ್ಲದೆ ಆದರೂ ಹಿಂಡಿ ಹಿಪ್ಪೆಯಾಗಿಸಿ ಸಂಗ್ರಹಿಸುವ ಹಣ. ಇದೇ ಉದ್ಯಮ ಲೋಕಕ್ಕೆ ಮುಖ್ಯ. ರಾಜಕೀಯ ಪಕ್ಷಗಳಿಗೆ ನೀಡುವ ಅಪಾರ ಕಳ್ಳ ಹಣಕ್ಕೂ ಇದೇ ಮಾರ್ಗ. ಪ್ರತಿಫಲಾಪೇಕ್ಷೆ ಇಲ್ಲದ ಯಾವುದೇ ದೇಣಿಗೆಯೂ ವಾಣಿಜ್ಯಲೋಕದಿಂದ ಬರುವುದಿಲ್ಲ. ಪ್ರತಿಫಲಾಪೇಕ್ಷೆಯ ಸ್ವರೂಪ ಕೇವಲ ಲೈಸೆನ್ಸುಗಳು, ತೆರಿಗೆ ವಿನಾಯ್ತಿ, ಸಾಲ ಮುಂತಾದುವು ಮಾತ್ರ ಅಲ್ಲದೆ, ರಾಷ್ಟ್ರದ ಪ್ರಧಾನಿ, ಅರ್ಥಸಚಿವ ಮುಂತಾದವರು ಯಾರಿರಬೇಕು ಅಂತ ನಿರ್ಧರಿಸುವವರೆಗೆ ಅವುಗಳ ಪಾತ್ರವಿದೆ. ಬಂಡವಾಳದ ಶುದ್ಧ ಅರ್ಥಶಾಸ್ತ್ರದಲ್ಲಿ

ಇವು ಯಾವುದಕ್ಕೂ ಅವಕಾಶವಿಲ್ಲ. ಆ ಶುದ್ಧಶಾಸ್ತ್ರ ಸಂಪೂರ್ಣ ಪ್ರಜಾಪ್ರಭುತ್ವ, ಮುಕ್ತ ಮಾರುಕಟ್ಟೆ ಮುಂತಾದುವನ್ನು ಬಯಸುತ್ತದೆ. ವಾಸ್ತವದಲ್ಲಿ ಇವು ಯಾವುವೂ ಇಲ್ಲದಿರುವುದೇ ಅದನ್ನು ಕ್ರೋನಿ ಎಂದೆನಿಸುವುದು. ಕ್ರೋನಿ ಎನ್ನುವ ಇಂಗ್ಲಿಷ್ ಪದಕ್ಕೆ ಮೊದಲು 'ಅಂತರಂಗದ ಗೆಳೆಯ' ಎನ್ನುವ ಅರ್ಥವಿದ್ದು, ಕ್ರಮೇಣ ಸ್ವಜನ 'ಪಕ್ಷಪಾತ'ವಾಗಿ ಈಗ ಅದನ್ನು 'ನಕಲಿ' ಎನ್ನಬಹುದು. ಸಾಧಾರಣ ಜನರ ಆದಾಯದ ಮೊತ್ತವೂ ಹೆಚ್ಚುತ್ತಿಲ್ಲ, ಇರುವ ಆದಾಯದ ವಾಸ್ತವ ಮೌಲ್ಯ ಬೆಲೆ ಏರಿಕೆಯಿಂದಾಗಿ ವಿಪರೀತ ಕಡಿಮೆಯಾಗಿದೆ. ಇದು ಗ್ರಾಹಕರನ್ನು ಹೆಚ್ಚು ಹೆಚ್ಚಾಗಿ ಮಾರುಕಟ್ಟೆಯಿಂದ ವಿಮುಖರನ್ನಾಗಿಸುತ್ತಿದೆ. ಬೇಡಿಕೆ ಇಲ್ಲವಾಗಿದೆ. ಬಡ್ಡಿದರ ಹೆಚ್ಚು ಎನ್ನುವ ನೆಪಹೂಡಿ, ಹೊಸ ಹೂಡಿಕೆಯಾಗದೆ ಹೊಸ ಉದ್ಯಮ, ಉತ್ಪಾದನೆ, ಉದ್ಯೋಗ ಸೃಷ್ಟಿಯಾಗದೆ ಪೂರೈಕೆಯೂ ಹಿನ್ನಡೆ. ಈ ಅಡಕತ್ತರಿಯಲ್ಲಿ ಸಿಕ್ಕ ಅರ್ಥವ್ಯವಸ್ಥೆ ನಿರ್ಜೀವದ ಸ್ಥಿತಿ ತಲುಪಿದೆ. ಈ ಸರ್ಕಾರಗಳಿಗೆ, ಸನ್ನಿವೇಶ ಬಯಸುವ ಪರ್ಯಾಯ ಚಿಂತನೆ ಹೊಳೆಯುತ್ತಿಲ್ಲ. ವಾಸ್ತವವನ್ನು ಜನತೆಯಿಂದ ಬಚ್ಚಿಡುವ ವ್ಯರ್ಥಪ್ರಯತ್ನ ಮಾತ್ರ ಮುಂದುವರಿದಿದೆ. ಈ ಪರಿಸ್ಥಿತಿಯಲ್ಲಿ ಸರ್ಕಾರ ಮಾತ್ರ ಲಾಭನಷ್ಟದ ಪರಿವೆಯಿಲ್ಲದೆ ಅರ್ಥವ್ಯವಸ್ಥೆಗೆ ತ್ರಾಣ ನೀಡಬಲ್ಲ ಹೂಡಿಕೆ ಮಾಡಿ ಮಧ್ಯಪ್ರವೇಶ ಮಾಡಬಲ್ಲುದು. ಹಾಗೆ ಮಾಡುವುದೇನೂ ಕಮ್ಯೂನಿಸಂ ಅಲ್ಲ.



ಒಟ್ಟಿನಲ್ಲಿ ಕಳೆದ ದಶಕದಲ್ಲಿ ಖಾಸಗಿ ಕ್ಷೇತ್ರ ಶೀಘ್ರ ಲಾಭತರುವ, ಭ್ರಷ್ಟತೆ, ಲಂಚಕ್ಕೆ ಅವಕಾಶ ನೀಡುವ ರಿಯಲ್ ಎಸ್ಟೇಟ್ ವ್ಯವಹಾರದಲ್ಲಿ ಮಾತ್ರ ತನ್ನ ಚಟುವಟಿಕೆಯನ್ನು ಕೇಂದ್ರೀಕರಿಸಿದೆ. ಅದು ಸಾಧ್ಯವಾಗಿದ್ದು, ಸುಲಭಸಾಲದ ಸಾಧ್ಯತೆಯಿಂದ. ಈಗ ಅಲ್ಲಿ ಕಟ್ಟಿದ ಮನೆಗಳನ್ನು, ನಿವೇಶನಗಳನ್ನು ಕೊಳ್ಳುವವರಿಲ್ಲದೆ ಬೆಲೆ ದುಬಾರಿಯಾಗಿ ಸಾಲ ನೀಡಿದ ಬ್ಯಾಂಕುಗಳಿಗೆ ಹಣ ವಸೂಲಿ ಆಗದೆ ಅದು ಬ್ಯಾಂಕುಗಳಿಗೂ ಬಿಕ್ಕಟ್ಟು. ವಾಸ್ತವ ಆರ್ಥಿಕತೆಯಲ್ಲಿ ಮೂಲಭೂತ ಸೌಕರ್ಯಗಳಲ್ಲಿ ಹೂಡಿಕೆ ಸಾಕಷ್ಟು ಆಗಲಿಲ್ಲ. ಅಂತರರಾಷ್ಟ್ರೀಯವಾಗಿ ಆರ್ಥಿಕ ಕುಸಿತ ನಮ್ಮ ಐಟಿ ಕ್ಷೇತ್ರಕ್ಕೂ ಪೆಟ್ಟಾಯಿತು. ತೈಲ ಬೆಲೆ ಆಮದಿನ ಕ್ರಯ ಹೆಚ್ಚುತ್ತಲೇ ಹೋಯಿತು. ಸೊರಗಿದ ಉದ್ಯಮಕ್ಷೇತ್ರದಿಂದ ಬರುವ ತೆರಿಗೆಯೂ ಕಮ್ಮಿ, ಬರಬೇಕಾದದ್ದೂ ಬರಲಿಲ್ಲ. ಜನರಂಜನೆಗೆ ಚುನಾವಣೆಯ ಒತ್ತಡಕ್ಕಾಗಿ ಸಾಮಾಜಿಕ ಕ್ಷೇತ್ರದಲ್ಲಿ ವೆಚ್ಚ ಹೆಚ್ಚಿಸಿ, ಯೋಜನಾ ವೆಚ್ಚವನ್ನು ಕಡಿತ ಮಾಡಿದರೂ ಅಲ್ಲೂ ಆರ್ಥಿಕ ಅಭಿವೃದ್ಧಿ ಸೊರಗಿತು; ಜನರ ಮನರಂಜನೆ ಏನೂ ಆಗಲಿಲ್ಲ. ಒಟ್ಟಾರೆ ಇವೆಲ್ಲ ಕೆಲವು ಮುಖ್ಯವಾದ ಆರ್ಥಿಕ ನೀತಿಯ ವೈಫಲ್ಯಗಳು. ಈ ಸರ್ಕಾರಕ್ಕೆ ಹೊಸ ಚಿಂತನೆ ಸಾಧ್ಯವಿಲ್ಲ. ಭಾಜಪ ಮತ್ತು ಕಾಂಗ್ರೆಸ್ ಎರಡೂ ಅರ್ಥನೀತಿಯಲ್ಲಿ ಅವಳಿಜವಳಿಗಳು. ಇವರಿಬ್ಬರಿಗೂ ಇದುವರೆಗೂ ನಡೆಸಿದ ವಾಸ್ತವ ಬೆಳವಣಿಗೆಯ ವಿರೋಧೀ ನೀತಿಗಳಿಗಾಗಿ ಒಂದು ದಶಕವಾದರೂ ಮತ್ತೆ ಅಧಿಕಾರದಿಂದ ಇವರನ್ನು ಹೊರಗಿಡುವುದು ಇಂದಿನ ತುರ್ತು. ಇದು ಮೊದಲು ಆಗಲಿ ನಂತರ ಏನು ಮಾಡಬೇಕೆಂದು ತೀರ್ಮಾನಿಸಲು ಜನತೆ ಸಮರ್ಥರಿದ್ದಾರೆ. ಚಿದಂಬರಂ – ಮೋದಿ – ಮನನೋಹನ್ ಸಿಂಗ್ – ಛಿಕಿ ಮಧ್ಯಸ್ತಿಕೆ ಇದಕ್ಕೆ ಬೇಕಿಲ್ಲ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ
ಬೆಂಗಳೂರು – ೫೬೦ ೧೫೭

ಕಾವ್ಯಲೋಕ

# ಸುರಿದು ಬಿಡು ಮಳೆಯೇ...



ಹೊತ್ತಲ್ಲದ ಹೊತ್ತಲ್ಲಿ
ಹೇಗೋ ಬಂದು
ಸುರಿದುಬಿಡು ಮಳೆಯೇ
ಒಂದಿಷ್ಟು ಯೋಚನೆಗೂ
ಅವಕಾಶ ಕೊಡದಂತೆ

ಈವರೆಗೆ ಕಟ್ಟಿಟ್ಟದ್ದು
ಹೇಳದೇ ಉಳಿದದ್ದು
ಎಲ್ಲವೂ ಈಗ ತಯಾರಾಗಿ
ನಿಂತಿವೆ
ನಿನ್ನೊಂದಿಗೆ ಹೊರಡಲು

ನಾನೂ ಸಿದ್ಧಳಿದ್ದೇನೆ
ಕಳುಹಿಸಿಕೊಡಲು
ನಿನ್ನ ಅಭ್ಯಂತರವಿಲ್ಲ ತಾನೇ ?

ಬಿಡು. ಎಂದಿಗೂ ಅನಾಥವಾಗಲಾರವು
ನನ್ನೆದೆಯ ಲಹರಿಗಳು
ಸೇರಬೇಕಾದ ಕಡೆಗೇ
ಸೇರಿಸುತ್ತೀಯ...
ಭರವಸೆಯಿದೆ.

ನಿರ್ಲಿಪ್ತತೆಯಿಂದ ನಿರ್ಮಲವಾಗಿ
ಸುರಿವ ನಿನ್ನ ಮೇಲೆ
ನನಗೆ ಹುಚ್ಚು ಪ್ರೀತಿ
ಮತ್ತು ಹೆಚ್ಚು ನಂಬುಗೆ

**ಸ್ಮಿತಾ ಅಮೃತರಾಜ್, ಸಂಪಾಜೆ**
'ಹಸಿರು', ಅಂಚೆ ಬಾಲಂಬಿ, ಚೆಂಬು ಗ್ರಾಮ,
ಮಡಿಕೇರಿ ತಾಲೂಕು
ಕೊಡಗು – ೫೭೪ ೨೩೪



# ಮಿಥ್ಯೆಗಳ ಮಡುವಿನಲ್ಲಿ 'ಹಾಸನಾಂಬೆ' ದೇವಸ್ಥಾನ

ಜಿ. ಟಿ. ನಾರಾಯಣಸ್ವಾಮಿ

ವೇದಗಳ ಆರಂಭದ ಕಾಲದಲ್ಲಿ ಸಾಮಾಜಿಕ ಆಡಳಿತವನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಅವೇ ಜ್ಞಾನಶಾಖೆ, ರಕ್ಷಣಾಶಾಖೆ, ಉತ್ಪಾದನಾಶಾಖೆ ಹಾಗೂ ಸೇವಾಶಾಖೆ. ಇವುಗಳನ್ನು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಕರೆಯಲಾಯ್ತು. ಯಾರಿಗೆ ಯಾವ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುವ ಶಕ್ತಿ, ಸಾಮರ್ಥ್ಯವಿತ್ತೋ ಅವರು ಆ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಬಹುದಿತ್ತು. ಹಾಗಾಗಿಯೇ ಲಿಂಗಭೇದವಿಲ್ಲದೆ ಗಾರ್ಗಿ, ಮೈತ್ರೇಯಿ ಮುಂತಾದವರು ಚರ್ಚೆಯಲ್ಲಿ ತೊಡಗಿಸಿಕೊಳ್ಳುತ್ತಿದ್ದುದು, ದಲಿತ ಮಹಿಳೆಯರು ವೇದಕ್ಕೆ ಮಂತ್ರಗಳನ್ನು ಕೊಟ್ಟಿರುವುದು ಇತಿಹಾಸ.

ಹೀಗೆ ಯಾವುದೇ ಭೇದಭಾವವಿಲ್ಲದೆ ಚಲನಶೀಲವಾದ, ಕ್ರಿಯಾಶೀಲವಾಗಿದ್ದ ಭಾರತದ ಅವನತಿ ಪ್ರಾರಂಭವಾದದ್ದು ಜ್ಞಾನಶಾಖೆಯಲ್ಲಿ ಕೆಲಸ ಮಾಡುತ್ತಿದ್ದವರು ತಂದ ಒಂದು ನಿಬಂಧನೆಯಿಂದಾಗಿ. ಅದೆಂದರೆ ಜ್ಞಾನಶಾಖೆಯಲ್ಲಿ ಹುಟ್ಟಿದವರಿಗಷ್ಟೆ ಅಲ್ಲಿ ಪ್ರವೇಶ ಎಂಬ ನಿಯಮ. ತಮ್ಮ ರಕ್ಷಣೆಯನ್ನು ಬಿಗಿಗೊಳಿಸಿಕೊಳ್ಳಲು ಕ್ಷತ್ರಿಯರಿಗೆ ಹಾಗೂ ವೈಶ್ಯರಿಗೆ ಯಜ್ಞೋಪವೀತದ ಹಕ್ಕನ್ನು ಕೆಲವು ನಿಬಂಧನೆಗೊಳಪಡಿಸಿಕೊಡಲಾಯ್ತು. ಬಹುಸಂಖ್ಯಾತ ಶೂದ್ರರಿಗೆ ಹಾಗೂ ಸ್ತ್ರೀಯರಿಗೆ ಅದನ್ನು ನಿರಾಕರಿಸಲಾಯ್ತು.

ಕಾಲ ಸರಿದಂತೆ ಬ್ರಾಹ್ಮಣ ಕ್ಷತ್ರಿಯ ಸಂಘರ್ಷ ಪ್ರಾರಂಭವಾಗಿ ಉಪನಿಷತ್ತುಗಳ ರಚನೆಯಾಯ್ತು. ಉಪನಿಷತ್ತುಗಳನ್ನು ರಚಿಸಿದವರು ಕ್ಷತ್ರಿಯರು. ಬ್ರಾಹ್ಮಣರಲ್ಲ. ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಪುರಾಣಗಳನ್ನು ಹೆಣೆಯಲಾಯ್ತು. ಕಟ್ಟುಕಥೆಗಳನ್ನು ಕಟ್ಟಿ ಹರಿಕಥೆಗಳ ಮೂಲಕ ಇಡೀ ಸಮಾಜವನ್ನು ಮೌಢ್ಯದ ಕೂಪಕ್ಕೆ ತಳ್ಳಲಾಯ್ತು. ಮನುಸ್ಮೃತಿ, ಗೌತಮಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮುಂತಾದುವನ್ನು ರಚಿಸಿಕೊಂಡು ತಮ್ಮ ರಕ್ಷಣೆಯನ್ನು ಬ್ರಾಹ್ಮಣರು ಭದ್ರಪಡಿಸಿಕೊಂಡರು. ಅವರು ಹೆಣೆದ ಕಟ್ಟುಕಥೆಗಳಲ್ಲಿ ಹಾಸನದ 'ಹಾಸನಾಂಬೆ' ದೇವಸ್ಥಾನವೂ ಒಂದು.

ಇಡೀ ವರ್ಷದಲ್ಲಿ ಅದರ ಬಾಗಿಲು ತೆರೆಯುವುದು ಒಂದೇ ಬಾರಿಗೆ. ಅದೂ ಇಂತಿಷ್ಟು ದಿನಗಳು ಮಾತ್ರ. ಅದರ ಆಕರ್ಷಣೆಗೆ ಹುಟ್ಟುಹಾಕಿರುವ ಅಂಶಗಳೆಂದರೆ ಬಾಗಿಲು ಹಾಕುವಾಗ ಹಚ್ಚಿಟ್ಟ ದೀಪ, ಇಟ್ಟ ಹೂಗಳು ಹಾಗೂ ನೈವೇದ್ಯಗಳು ಮುಂದಿನ ವರ್ಷ ಬಾಗಿಲು ತೆರೆಯುವಾಗ ಯಥಾಸ್ಥಿತಿಯಲ್ಲಿ ಇರುತ್ತವೆ ಎಂಬುದು. ಇದಕ್ಕಾಗಿ ಇತ್ತೀಚೆಗಂತೂ ಮುಗ್ಧ ಭಕ್ತರ ಹಿಂಡು ವಿಚಾರಶೂನ್ಯವಾಗಿ

**ಗರ್ಭಗುಡಿಯಲ್ಲಿ ಹಾಸನಾಂಬೆ ಇರುವುದು ವಿಗ್ರಹರೂಪದಲ್ಲಿ ಅಲ್ಲ, ಹುತ್ತದ ರೂಪದಲ್ಲಿ. ಪ್ರತಿವರ್ಷ ದೇವಸ್ಥಾನ ಮುಚ್ಚುವಾಗ ದೇವಿಯ ಮುಂದೆ ಇರಿಸಿದ ನೈವೇದ್ಯ ಕೆಡದೆ, ಹೂವುಗಳು ಬಾಡದೆ, ಹಚ್ಚಿದ ದೀಪ ಆರದೆ ಮುಂದಿನ ವರ್ಷ ಬಾಗಿಲು ತೆರೆಯುವವರೆಗೂ ಹಾಗೆ ಇರುತ್ತವೆ ಎಂಬುದು ನಂಬಿಕೆ. ಪ್ರತಿವರ್ಷ ಬಾಗಿಲು ತೆಗೆಯುವಾಗ ಭಕ್ತರನ್ನು ಒಳಬಿಡದೆ ಅದು ಹಾಗೇ ಇತ್ತು ಎಂದು ಹೇಳುವವರು ಸತ್ಯವನ್ನೇ ಹೇಳುತ್ತಾರೆ ಎಂದು ನಂಬುವುದು ಹೇಗೆ ?**

**ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡುವುದಲ್ಲವೆ ?**



*ಗರ್ಭಗುಡಿಯಲ್ಲಿರುವ ಹಾಸನಾಂಬೆ*



*ಕಳ್ಳಪ್ಪನ ಗುಡಿ*

ಮುಗಿಬೀಳುತ್ತಿದೆ. ಅದನ್ನು ಪುರೋಹಿತಶಾಹಿ ಮನಸ್ಸುಗಳು ಬಂಡವಾಳ ಮಾಡಿಕೊಂಡು ವಿವಿಧ ಮುಖಗಳಲ್ಲಿ ಹಣ ಸಂಗ್ರಹಣೆಗೆ ತೊಡಗಿವೆ. ಈ ಬಾರಿ ಅಂದರೆ ೨೦೧೩ನೇ ಸಾಲಿನಲ್ಲಿ ಒಂದು ಕೋಟಿಗೂ ಮೀರಿ ಹಣ ಸಂಗ್ರಹವಾಗಿ ದೇವಸ್ಥಾನವನ್ನು 'ಎ' ದರ್ಜೆಗೆ ಏರಿಸಬೇಕೆನ್ನುವ ಪ್ರಸ್ತಾವವನ್ನು ಜಿಲ್ಲಾಡಳಿತ ಸರ್ಕಾರಕ್ಕೆ ಸಲ್ಲಿಸುವ ಸೂಚನೆಯನ್ನೂ ನೀಡಿದೆ.

ಭಾರತದ ಸಂವಿಧಾನದಲ್ಲಿ 'ಮೂಲಭೂತ ಕರ್ತವ್ಯಗಳು' ಎಂಬುದನ್ನು ಅಳವಡಿಸಲಾಗಿದೆ. ೧೯೭೬ರಲ್ಲಿ ತಂದ ೪೨ನೇ ತಿದ್ದುಪಡಿಯಲ್ಲಿ ಅದನ್ನು ಸೇರಿಸಲಾಗಿದೆ. ಅನುಚ್ಛೇದ ೫೧ ಎ (ಎಚ್)ರಲ್ಲಿ 'ಪ್ರತಿಯೊಬ್ಬ ನಾಗರಿಕನಿಗೂ ವೈಜ್ಞಾನಿಕ ಮನೋಭಾವನೆ, ಮಾನವೀಯತೆ, ಜಿಜ್ಞಾಸೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವುದು ಮೂಲಭೂತ ಕರ್ತವ್ಯವಾಗಿರತಕ್ಕದ್ದು' ಎಂದು ಹೇಳಿದೆ.

ದೇಶದ ಮೊದಲ ಪ್ರಧಾನಿಯಾಗಿದ್ದ ಜವಹರಲಾಲ್ ನೆಹರೂ, "ಮುಂದುವರಿದ ರಾಷ್ಟ್ರಗಳೊಂದಿಗೆ ಸ್ಪರ್ಧಿಸಲು ವೈಜ್ಞಾನಿಕ ಮನೋಧರ್ಮವನ್ನು ಬೆಳೆಸುವುದು ಹಾಗೂ ಉದ್ದೀಪನಗೊಳಿಸುವುದು ಭಾರತಕ್ಕೆ ಅನಿವಾರ್ಯ" ಎಂದಿದ್ದಾರೆ. ಭಾರತದಲ್ಲಿ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಹಾಗೂ ಅರುಣಾಚಲ ಪ್ರದೇಶದಿಂದ ಗುಜರಾತ್‌ವರೆಗೆ ಬಹು ವಿಚಿತ್ರವಾದ ನಂಬಿಕೆಗಳು ಮೌಢ್ಯದ ನೆಲೆಯಲ್ಲಿ ಕ್ರಿಯಾಶೀಲವಾಗಿವೆ. ಅಂತಹ ಒಂದು ನಂಬಿಕೆ ಹಾಸನ ನಗರದ 'ಹಾಸನಾಂಬೆ'ಯದೂ ಆಗಿದೆ.

ಗರ್ಭಗುಡಿಯಲ್ಲಿ ಹಾಸನಾಂಬೆ ಇರುವುದು ವಿಗ್ರಹರೂಪದಲ್ಲಿ ಅಲ್ಲ, ಹುತ್ತದ ರೂಪದಲ್ಲಿ. ಪ್ರತಿವರ್ಷ ದೇವಸ್ಥಾನ ಮುಚ್ಚುವಾಗ ದೇವಿಯ ಮುಂದೆ ಇರಿಸಿದ ನೈವೇದ್ಯ ಕೆಡದೆ, ಹೂವುಗಳು ಬಾಡದೆ, ಹಚ್ಚಿದ ದೀಪ ಆರದೆ ಮುಂದಿನ ವರ್ಷ ಬಾಗಿಲು ತೆರೆಯುವವರೆಗೂ ಹಾಗೆ ಇರುತ್ತವೆ ಎಂಬುದು ನಂಬಿಕೆ. ಪ್ರತಿವರ್ಷ ಬಾಗಿಲು ತೆಗೆಯುವಾಗ ಭಕ್ತರನ್ನು ಒಳಬಿಡದೆ ಅದು ಹಾಗೇ ಇತ್ತು ಎಂದು ಹೇಳುವವರು ಸತ್ಯವನ್ನೇ ಹೇಳುತ್ತಾರೆ ಎಂದು ನಂಬುವುದು ಹೇಗೆ ? ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡುವುದಲ್ಲವೆ ?

ಸ್ವಲ್ಪ ನಮ್ಮ ವಿವೇಕದ ಕಣ್ಣು ತೆರೆದು ಚಿಂತಿಸೋಣ. ಹಾಸನಾಂಬೆ ದೇವಸ್ಥಾನದಲ್ಲಿ 'ಕಳ್ಳಪ್ಪನ ಗುಡಿ' ಎಂಬುದೊಂದಿದೆ. ಅದರ ಹಿನ್ನೆಲೆ ಹೀಗಿದೆ : "ಹಿಂದೊಮ್ಮೆ ನಾಲ್ಕು ಜನ ಕಳ್ಳರು ದೇವಿಯ ಆಭರಣಗಳನ್ನು ಕಳ್ಳತನ ಮಾಡುವ ಪ್ರಯತ್ನ ಮಾಡಿದ್ದರು. ದೇವಸ್ಥಾನದ ಒಳಗೆ ಪ್ರವೇಶ ಮಾಡಿದ ಕಳ್ಳರನ್ನು ಕಂಡು ಕುಪಿತಳಾದ ಹಾಸನಾಂಬೆ ಅವರಿಗೆ ಶಾಪ ಹಾಕಿದಳು. ಪರಿಣಾಮ ನಾಲ್ವರೂ ಕಲ್ಲಾದರು. ಅದೇ ಈಗ ಕಳ್ಳಪ್ಪನ ಗುಡಿ ಎಂದು ಹೆಸರಾಗಿದೆ." ಇದು ನಿಜವಾದರೆ ಇಂದು ಆಕೆಯ ದೇವಸ್ಥಾನದ ಹೆಸರಿನಲ್ಲಿ ವಿವಿಧ ಸ್ವರೂಪದ ಕಳ್ಳ ವ್ಯವಹಾರಗಳು ನಡೆಯುತ್ತಿಲ್ಲವೆ ? ಈ ವರ್ಷ ದೇವಸ್ಥಾನದ ಬಾಗಿಲು ತೆರೆಯುವಾಗ ನೂಕುನುಗ್ಗಲಿನಲ್ಲಿ ಒಬ್ಬ ಮಹಿಳೆಯ ಮಾಂಗಲ್ಯ ಸರ ಕಳುವಾಯಿತಲ್ಲವೆ ? ಇದ್ದವರೆಲ್ಲ ಕಲ್ಲಾಗದೆ ರಾಜಾರೋಷವಾಗಿಯೇ ಇದ್ದಾರಲ್ಲ, ಅದು ಹೇಗೆ ? ಹಾಸನಾಂಬೆಯ ನಗರ ಹಾಸನದಲ್ಲಿ ಹಾಗೂ ಜಿಲ್ಲೆಯಲ್ಲಿ ಕಳ್ಳ ಕ್ರಿಯೆಗಳು ಕ್ಷಣ ಕ್ಷಣವೂ ಜರುಗುತ್ತಿಲ್ಲವೆ ? ಅವರೆಲ್ಲರನ್ನೂ ಕಲ್ಲಾಗಿಸದೆ 'ಹಾಸನಾಂಬೆ' ಏಕೆ ಮೌನವಾಗಿದ್ದಾಳೆ ? ತನಗೂ ನೈವೇದ್ಯದ ಪಾಲಿದೆ ಎಂದೇ ?

ಮತ್ತೊಂದು ಘಟನೆ ಸ್ವಾರಸ್ಯಕರವಾಗಿದೆ. ಒಂದು ಕಲ್ಲು ಗರ್ಭಗುಡಿಯಲ್ಲಿ ದೇವಿಯ ಎದುರೇ ಇದೆ. ಅದನ್ನು 'ಸೊಸೆ ಕಲ್ಲು' ಎಂದು ಕರೆಯುತ್ತಾರೆ. ಅದರ ಹಿನ್ನೆಲೆ ಹೀಗಿದೆ: ಅತ್ತೆಕಾಟ ತಾಳಲಾರದೆ ಸೊಸೆ ದೇವಿಯ ಮುಂದೆ ಬಂದು ಧ್ಯಾನಕ್ಕೆ ಕೂರುತ್ತಾಳೆ. ಹಿಂಬಾಲಿಸಿ ಬಂದ ಅತ್ತೆ, "ಮನೆ ಕೆಲಸಕ್ಕಿಂತ ದೇವಿದರ್ಶನ ಹೆಚ್ಚಾಯಿತೆ ?" ಎಂದು ತಲೆಗೆ ಕುಕ್ಕುತ್ತಾಳೆ. ಆ ನೋವಿನಿಂದ ಸೊಸೆ, "ಹಾಸನಾಂಬೆ ಕಾಪಾಡು" ಎನ್ನುತ್ತಾಳೆ. ಆಗ ದೇವಿ, "ಯಾವಾಗಲೂ ನೀನು ನನ್ನ ಸನ್ನಿಧಿಯಲ್ಲೇ ನೆಲಸು" ಎಂದಳು. ಸೊಸೆ ಕಲ್ಲಾದಳು. ಈಗಲೂ ಅಲ್ಲಿಯೇ ಇದ್ದಾಳೆ. ಈ ಕಲ್ಲು ವರ್ಷಕ್ಕೆ ಭತ್ತದ ಕಾಳಿನ ತುದಿಯಷ್ಟು ಮುಂದೆ ಬರುತ್ತದೆ, ಅದು ದೇವಿಪಾದ ತಲುಪಿದ ತಕ್ಷಣ ಕಲಿಯುಗ ಅಂತ್ಯವಾಗುತ್ತದೆ ಎಂದು ಕಥೆ ಕಟ್ಟಲಾಗಿದೆ. ಅದು ನಿಜವಾದರೆ ಹಾಸನ ಜಿಲ್ಲೆಯ ಸೊಸೆಯರೆಲ್ಲರೂ ಕಲ್ಲಾಗಬೇಕಾಗುತ್ತದೆ.

ಅದಿರಲಿ, ಹೇಳಿ ಕೇಳಿ ಹಾಸನಾಂಬೆಯ ರೂಪ ಹುತ್ತ. ಅವಳಿಗೆ ಪಾದಗಳೇ ಇಲ್ಲ. 'ಸೊಸೆ ಕಲ್ಲು' ಬೆಳೆಯುವುದಾದರೂ ವೈಜ್ಞಾನಿಕವೆ ? ಒಂದು ಪಕ್ಷ ಬೆಳೆಯುತ್ತದೆ ಎಂದು ಭಾವಿಸಿದರೂ ಅದು ಇಲ್ಲದ ಹಾಸನಾಂಬೆಯ ಪಾದವನ್ನು ಮುಟ್ಟುವುದಾದರೂ ಹೇಗೆ ? ಹಾಸನಾಂಬೆ ಹುತ್ತ ಅಲ್ಲವೆ ?

ಮತ್ತೊಂದು ಸೋಜಿಗದ ಸಂಗತಿ ಎಂದರೆ ಇತ್ತೀಚೆಗೆ ಜಗತ್ತಿನಲ್ಲಿ ಪ್ರಳಯವಾಗುತ್ತದೆ ಎಂಬ ಸುದ್ದಿಯನ್ನು ಉದ್ದಗಲ ಹಬ್ಬಿಸಲಾಗಿತ್ತು. ಬಹಳಷ್ಟು ಜನ ಪ್ರಳಯವಾಗುತ್ತದೆ ಎಂದು ನಿದ್ದೆಗೆಟ್ಟಿದ್ದರು. ನಂಬಿದ ರಸಿಕರು ಹಿಂದಿನ ದಿನ ಬಾರ್‌ಗಳಲ್ಲಿ ಕುಡಿದು ತಿಂದು ಮಜಾ ಉಡಾಯಿಸಿದ್ದರು. ಇಂಥ ಅನೇಕ ಸುದ್ದಿಗಳು ಪತ್ರಿಕೆಗಳಲ್ಲಿ ಮಿಂಚಿದ್ದುವು. ಸೊಸೆ ಕಲ್ಲು ದೇವಿ ಪಾದ ತಲುಪಿಲ್ಲ, ಪ್ರಳಯ ಆಗುವುದಿಲ್ಲ ಎಂಬ ಅಥವಾ ತಲುಪಿದೆ, ಪ್ರಳಯ ಆಗಿ ಕಲಿಯುಗ ಅಂತ್ಯವಾಗುತ್ತದೆ ಎಂಬ ಮಾಹಿತಿಯನ್ನು ಹಾಸನಾಂಬೆ ಆರಾಧಕರಾಗಲೀ, ಜಿಲ್ಲಾಡಳಿತವಾಗಲೀ ಇಲ್ಲವೇ ಅರ್ಚಕರಾಗಲೀ ಏಕೆ ಬಹಿರಂಗಪಡಿಸಲಿಲ್ಲ ?




ಪ್ರಚಲಿತದಲ್ಲಿರುವ ಮತ್ತೊಂದು ವಿಷಯವೆಂದರೆ ಹಾಸನಾಂಬೆ ಕೇವಲ ಹಿಂದೂಗಳ ದೇವತೆಯಷ್ಟೇ ಅಲ್ಲ, ಅವಳು ಮುಸಲ್ಮಾನರ ದೇವತೆಯೂ ಹೌದು. 'ಹಸನ್ ಬಿ' ಎಂದು ಆಕೆಯನ್ನು ಅವರು ಆರಾಧಿಸುತ್ತಾರೆ.

ಮಲ್ಲಿಕಾಫಿರ್ ಇಲ್ಲಿಗೆ ಬಂದಿದ್ದಾಗ ಅವನು ಆ ಸ್ಥಳದಲ್ಲಿ ಬೀಡುಬಿಟ್ಟು ಮಲಗಿದ್ದಾಗ ಆಕೆ ಕನಸಿನಲ್ಲಿ ಬಂದು ಹೇಳಿದಂತೆ ಆ ಹುತ್ತಕ್ಕೆ ಸುತ್ತ ಗೋಡೆ ಕಟ್ಟಿಸಿದ್ದಾನೆ ಎಂಬುದು ಮತ್ತೊಂದು ಐತಿಹ್ಯ.

ಅದೇನೇ ಇರಲಿ, ಹಾಸನಾಂಬೆಯ ಅಂತರಂಗ – ಬಹಿರಂಗಗಳನ್ನು ಬಿಂಬಿಸುವ, ಮೌಢ್ಯದಿಂದ ಹೊರಗುಳಿದು ವೈಜ್ಞಾನಿಕ ನೆಲೆಯಲ್ಲಿ ವಿವೇಕದಿಂದ ಚಿಂತಿಸುವವರಿಗಾಗಿ ಈ ನನ್ನ ಕವನ :

## ಹಾಸನಾಂಬೆ

*ಇಲ್ಲ, ಇಲ್ಲಿ ಇವಳ ತಂಟೆಗೆ ಯಾರೂ ಹೋಗುವುದಿಲ್ಲ*
*ವರ್ಷಕ್ಕೊಮ್ಮೆ ತೋರಿಕೆಯ ಭಕ್ತಿ, ಮಿಕ್ಕಂತೆ ಭಯ !*
*ಇವಳು ಹಾಸನಾಂಬೆಯೋ ಹಸನ್ ಬಿಯೋ ಗೊತ್ತಿಲ್ಲ ಕೂಡ*
*ಕಾಣಬೇಕೆಂಬ ಶ್ರದ್ಧೆ ಗಾಢವಾದಷ್ಟು ಇವಳೂ ನಿಗೂಢ !*
*ಬಾಗಿಲು ತೆರೆದರೆ ಕತ್ತಲೆ, ಒಳಗೆ ಉಸಿರುಗಟ್ಟುವ ಕಮಟು*
*ಬರುವ ಹಾಗಿಲ್ಲ ಒಳಗೆ, ಹೊರಗಿನ ನೈಜ ಗಾಳಿ ಬೆಳಕು*
*ಥಟ್ಟನೆ ಕಾಣುವುದಿಲ್ಲ ಅಲ್ಲಿ ಏನೊಂದೂ; ಕಣ್ಣಿಟ್ಟು ಕಂಡರೆ*
*ಆಕಾರ ಇಲ್ಲದ ಇವಳು ಹುತ್ತ, ಕಲ್ಲುಗೋಡೆ ಸುತ್ತ.*

*ಮೇಲೆ ಜರಿ ಸೀರೆ, ಕರಿಮಣಿಸರ, ಬಳೆಗಳು ಕೆಂಪುಕರಿ*
*ಅರಿಶಿಣ, ಬೆಳ್ಳಿಯ ಕಣ್ಣು, ಕುಂಕುಮ ರಕ್ತ ಚೆಲ್ಲಿದಂತೆ !*
*'ಮಣಿಕರ್ಣಿಕಾ–ಸಪ್ತಮಾತೃಕೆಯರು' ಪೂಜಾರಿ ಅಂತೆ ಕಂತೆ*
*ಹೊರಗೆ ಏನೆಲ್ಲ ಆದರೂ ಇವಳು ಮಾತ್ರ ಸದಾ ನಿಶ್ಚಿಂತೆ !*

*ಬಾಗಿಲು ತೆರೆದಾಗ ನುಗ್ಗುವ ಹಿಂಡುಗಳ ಸರಿಸಿ ಕೇಳಿದೆ*
*ಅಂಬೆ ಈ ಹಿಂದೆ ನಗರದ ಪ್ರಥಮ ಪ್ರಜೆ ಕೊಲೆಯಾದದ್ದು ಗೊತ್ತೆ ?*
*ಮಾತಿಲ್ಲ ಮೌನ, ಮಾತಿಗೆ ಉಂಟು ಒಂದರ್ಥ ಮೌನಕ್ಕೆ ?*
*ಅರ್ಥ ಹಚ್ಚುವರಾರು ? ಹೊಳೆದಂತೆ... ದಾರಿ ನೂರಾರು !*

*ಕೊಳೆಗೇರಿ ಗುಂಡಿಗೊಸರುಗಳು ಕೊನೆಗೆ ಇವಳ ದೇವಿಗೆರೆ*
*ಕೊಳೆತು ನಾರಲಿ, ಬಿದ್ದು ಸತ್ತ ಹೆಣಗಳು ಮೇಲೆದ್ದು ತೇಲಲಿ*
*ಇವಳ ಮೂಗಿಗಿಲ್ಲ ತೊಂದರೆ; ರಸ್ತೆಗಳು ಒಸರೆದ್ದು*
*ಗುಳಿಬಿದ್ದರೂ ಕೆಸರಾಗದು, ಕುಲುಕದು ಇವಳ ಮೈ !*

*ಇವಳ ಊರಿನ ಅರಳಿಮರ ಉರುಳಿ ಶಾರದೆಗೆ ಶೃಂಗಾರ*
*ಪಾರ್ಕು, ಎಲ್ಲಿ ಸಿಕ್ಕಿದರಲ್ಲಿ ಅತ್ಯಾಚಾರ; ರಾಜಕೀಯ*
*ಗೂಳಿಗಳ ಗುದ್ದಾಟ, ಮೂಗುದಾರವಿರದ ಕೊಬ್ಬಿದ*
*ಕರುಗಳ ಕೆನೆತ; ಕಪ್ಪು ಹಣ, ವಿದ್ಯೆ ವ್ಯಾಪಾರ ನಿತ್ಯಪಾಠ !*

*ಮಚ್ಚು ಕತ್ತಿ ಉರುಳುವ ಕೈಕಾಲು ಹೆಣ; ಎಲ್ಲಿ ಏಕೆ ಎಲ್ಲ*
*ನಿಗೂಢ ! ನಾಟಕ ಸಂಗೀತ ಸಾಹಿತ್ಯ ಕಲೆ ಯಾರಿಗೂ ಬೇಡ*
*ಇವಳ ಹೃದಯ ಗೆದ್ದಲಿಡಿದು ಬಲೆ ನೇಯುತ್ತಿದೆ ಜೇಡ*
*ಮಧ್ಯ ಸಮೃದ್ಧ, ಪರಿಸರ ಅಶುದ್ಧ ಯುವಕ ಹದಿನೆಂಟಕ್ಕೆ ವೃದ್ಧ !*

*ಬೆಳಗಾಗೆ ಗುಡಿ ಚರ್ಚು ಮಸೀದಿಗಳ ಪೈಪೋಟಿ ಕಿರುಚಾಟ*
*ಹಗಲಿರುಳು ಪರಸ್ಪರ ಸುಲಿದು ಕಿತ್ತು ತಿನ್ನುವ ಆಟ*
*ಯಾರು ಯಾರನ್ನೆ ಸುಲಿಯಲಿ ಕಿತ್ತು ತಿನ್ನಲಿ ಇಲ್ಲ ಭಯ*
*ಇವಳು ನಿರ್ಲಿಪ್ತೆ, ಸಮಾಧಾನಚಿತ್ತೆ, ಕೋಣೆಯಲಿ ಧ್ಯಾನಸ್ಥೆ !*

*ಇವಳನ್ನು ಎಚ್ಚರಿಸಬೇಕು ಎಂದು ಸಂಕಲ್ಪ ಮಾಡಿ*
*ಒಳಗಿಳಿದರೆ ಕಗ್ಗತ್ತಲು, ಶತಶತಮಾನಗಳ ಕಮಟು*
*ಗಾಳಿ ಬೆಳಕಿಲ್ಲ, ಉಸಿರುಗಟ್ಟಿಸಿ ನುಂಗಿಬಿಡುವ ಒಳಸುಳಿ*
*ಚೀರಿ ಜಿಗಿದು ಗಾಳಿ ಬೆಳಕಿಗೆ ಎದೆ ತೆರೆದು ನೋಡಿದೆ*

*ಬುಸುಗುಡುವ ಮಂತ್ರ ಸರ್ಪಗಳ ಕಾವಲು ಅತ್ತ*
*ಭಯದಿ ಬಿಳಿಚಿಕೊಂಡ ಭಕ್ತರ ಮುಖಗಳು ಇತ್ತ*
*ಕತ್ತಲು ಕಗ್ಗತ್ತಲು ಗಾಢಾಂಧಕಾರ ಸುತ್ತಮುತ್ತ*
*ಇವಳಿಗಿಲ್ಲ ಹೃದಯ ಚಿತ್ತ; ಇದು ಕೇವಲ ಹುತ್ತ !*

ಒಟ್ಟಿನಲ್ಲಿ, ವ್ಯಕ್ತಿಗತ ಮುಕ್ತಿಗೆ ಮೂಲ ಸೆಲೆ ಹಾಗೂ ನೆಲೆಯನ್ನು ಕಂಡುಕೊಂಡ ವಿವೇಕಾನಂದರು ಬಿಡುಗಡೆಯ ಮಂತ್ರವನ್ನು ನೀಡಿದ್ದಾರೆ. ಅದೇ, 'ತನ್ನ ಜಯಿಸಿದ ಶಕ್ತನು, ಅವನೆಲ್ಲ ಜಯಿಸಿದ ಮುಕ್ತನು' ಎಂಬುದು. ವ್ಯಕ್ತಿ ತನ್ನನ್ನು ತಾನು ಜಯಿಸಲು ಅಗತ್ಯವಾಗಿ ಬೇಕಾದುದು ಒಳಮುಖದ ಚಿಂತನೆ. ಹಾಗಾಗಿ ಎದೆಗೆ ಬೆಳಕು ಹರಿದುಬರುವುದು ಬಹಿರ್ಮುಖಿಯಾಗಿ ಹುತ್ತ ಪೂಜಿಸಿದರೆ ಅಲ್ಲ, ಅಂತರ್ಮುಖಿಯಾಗಿ ಚಿತ್ತವನ್ನೇ ಹುತ್ತಗಟ್ಟಿಸಿಕೊಂಡಾಗ ಮಾತ್ರ ಎಂಬ ವೈಜ್ಞಾನಿಕ ಸತ್ಯ ಭಕ್ತವೃಂದಕ್ಕೆ ಬೆಳಕಾಗಿ ಹರಿದುಬರಲಿ.

**ಜ. ಹೊ. ನಾರಾಯಣಸ್ವಾಮಿ**
ವಕೀಲ, ಸಾಹಿತಿ, ನಂ. ೨೦೬೪/ಅ, 'ಮಾನವ'
ಉತ್ತರ ಬಡಾವಣೆ ಹಾಸನ – ೫೭೩ ೨೦೧

ಮೂಲ : **ಅಖ್ತರ್ ಮೊಹಿಯುದ್ದೀನ್**
ಕನ್ನಡಕ್ಕೆ : **ತಂಬ್ರಹಳ್ಳಿ ರಾಮನಮಲಿ**

# ವಧುವಿನ ಪೈಜಾಮಾ




ಬಟ್ಟೆ ಹೊಲಿಯುವ ನಬೀರ್ ಶಲ್ಲಾ ಮೂರು ಬಟ್ಟೆ ಹೊಲಿದಿದ್ದ. ಅವನು ಶಿಥಿಲವಾಗಿದ್ದ ಎರಡು ಕಿಟಕಿಯ ಕಟ್ಟಿಗೆಯ ಮನೆಯನ್ನು ಜೀಲಮ್ ನದಿ ದಂಡೆಯ ಮೇಲೆ ಹೊಂದಿದ್ದ. ಅವನು ತನ್ನ ಕೆಲಸ ಮಾಡುತ್ತಾ ವರಾಂಡದಲ್ಲಿ ಕುಳಿತಿರುತ್ತಿದ್ದ. ದಪ್ಪಗಿನ ಗಾಜುಗಳುಳ್ಳ ಕನ್ನಡಕ ಯಾವಾಗಲೂ ಮೂಗಿನ ಮೇಲಿರುತ್ತಿತ್ತು. ಮಕ್ಕಳ ತೊದಲು ನುಡಿಯಂತೆ ಆತನಿಗೆ ಪ್ರಿಯವಾದ ಹಾಡನ್ನು ಮೆಲುದನಿಯಲ್ಲಿ ಹೇಳುತ್ತಿದ್ದ :

*ಅವಳು ನನಗೆ ಕುಡಿಯುವ ಬಟ್ಟಲಲ್ಲಿ ಸುರೆ ತಂದಳು*
*ಮತ್ತು ನನ್ನ ಪ್ರಾಣ ಒಯ್ದಳು*

ನಬೀರ್ ಶಲ್ಲಾ ಬಹಳಷ್ಟು ವರ್ಷಗಳನ್ನು ವರಾಂಡದಲ್ಲಿ ಕುಳಿತೇ ಕಳೆದಿದ್ದ ಮತ್ತು ಈ ಸಂದರ್ಭದಲ್ಲಿ ಅವನು ಎರಡೇ ಹಾಡುಗಳನ್ನು ನೆನೆಯುತ್ತಿದ್ದ. ಹೊರಗೆ ಮತ್ತು ಆಗಾಗ ಮೆಲುಕು ಹಾಕುತ್ತಿದ್ದ ಎರಡನೇ ಹಾಡು ಹೀಗಿತ್ತು :

*ಅವಳ ಚರ್ಮವು ಮಾಗಿದ ನವಿಲು*
*ಮರಿಯಂತೆ ನುಣುಪಾಗಿತ್ತು*
*ಓ ದೇವರೇ ! ಪ್ರಪಂಚದ ದೃಷ್ಟಿಯಿಂದ*
*ಅವಳನ್ನು ರಕ್ಷಿಸು*

ಚಿಕ್ಕ ವಯಸ್ಸಿನಲ್ಲಿ ಕುತೂಹಲ ತುಂಬಿದ ತೊದಲ ನುಡಿ ಆತನ ಮಾತುಗಳಲ್ಲಿತ್ತು. ಹಲ್ಲುಗಳು ಕಳೆದು ಹೋದಮೇಲೆ ಉಚ್ಚಾರಣೆ ಜಾಸ್ತಿ ಆಯಿತು. ಆತನ ಮುಖದ ಮೇಲೆ ಮಂಜಿನ ಹನಿಗಳಂತೆ ಕಂಗೊಳಿಸುತ್ತಿದ್ದ ಸಣ್ಣ ಸಣ್ಣ ಬಿಳಿ ದಾಡಿಗಳು, ಬಟ್ಟೆ ಅಂಗಡಿಯಲ್ಲಿದ್ದ ಸಣ್ಣ ಗುಚ್ಛಗಳು ಅಲ್ಲಲ್ಲಿ ಬಿದ್ದ ಹತ್ತಿ ಉಂಡೆಗಳಂತೆ ಅವನ ಕೆನ್ನೆಯ ಮೇಲೆ ಕಂಗೊಳಿಸುತ್ತಿದ್ದವು. ಆತನ ಕೈಗಳು ನಡುಗುತ್ತಿದ್ದರೂ ಜೀವನ ಮಾಡಲಿಕ್ಕೆ ಸಾಧ್ಯವಿತ್ತು. ಆತ ತನ್ನ ಕೆಲಸದಲ್ಲಿ ಪರಿಣತನಿದ್ದುದರಿಂದ ಗಿರಾಕಿಗಳು ಆತನನ್ನು ಹುಡುಕಿಕೊಂಡು ಬರುತ್ತಿದ್ದರು.

ನಬೀರ್ ಶಲ್ಲಾ ತನ್ನ ಅಸ್ಥಿರವಾದ ಮನೆಯನ್ನು ಮತ್ತು ಆತನ ಹೆಂಡತಿ ಖಾತೂನ್ ದೀದಿಯನ್ನು ಪ್ರಪಂಚದ ಎಲ್ಲದಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ. ಪ್ರತಿದಿನ ಸಾಯಂಕಾಲ ಹೆಂಡತಿ ಆತನ ಬೆನ್ನನ್ನು ನೀವುತ್ತಿದ್ದಳು. ದಿನವೆಲ್ಲಾ ಆತನ ಲಾಲನೆ ಮಾಡುತ್ತಾ ಪ್ಲೇಟಿನ ತುಂಬ ಬಿಸಿಬಿಸಿ ಅನ್ನ ಬಡಿಸುತ್ತಿದ್ದಳು. ಆತನು ಸೇದುವ ಹುಕ್ಕ ತುಂಬುತ್ತಿದ್ದಳು. ಯಾವಾಗಲಾದರೂ ವರಾಂಡದಲ್ಲಿ ಕುಳಿತು ಹಾಡುಗಳನ್ನು ಮೆಲುಕು ಹಾಕುತ್ತಿದ್ದಾಗ ಮತ್ತು ಒಳ್ಳೆಯ ಬಟ್ಟೆಯ ಮೇಲೆ ರಾಟಿಯ ಸೂಜಿಯಿಂದ ಓಡಿಸುತ್ತಿದ್ದಾಗ, ಅವನ ಮುಂದೆಯೇ ಕುಳಿತು ಬಟ್ಟೆ ಬದಲಿಸುತ್ತಾ ಹೊಲಿಯುತ್ತಾ ನಬೀರ್ ಶಲ್ಲಾ ಕಟಕಿ ಮಾತನಾಡುತ್ತಾ "ನೀನು ಮಗುವಿದ್ದ ಹಾಗೆ. ನಾನು ಯಜಮಾನ" ಎನ್ನುತ್ತಿದ್ದ. ಆತನ ಚುಚ್ಚುವ ಮಾತಿನಿಂದ ಖಾತೂನ್ ದೀದಿ, "ನಾನೇ ಏಕೆ ಮಗುವಿನ ತರಹ ? ನೀವೆ ಏಕಾಗಬಾರದು ?" ಎಂದು ಪ್ರತಿಕ್ರಿಯಿಸಿದ್ದಳು.

ಖಾತೂನ್ ದೀದಿಯ ಮೇಲಿನ ದವಡೆಯು ಮುರಿದು ಒಂದೇ ಒಂದು ಹಲ್ಲು ಉಳಿದಿತ್ತು. ಆಕೆಯ ಕೆಳ ತುಟಿಯು ಗುಹೆಯಂತಾಗಿದ್ದರಿಂದ ಈ ಹಲ್ಲು ಇಳಿಬಿಟ್ಟ ಚಾಕುವಿನಂತಿತ್ತು. ಆಕೆಯ ಮುಖವು ಸಿಹಿ ಮೂಲಂಗಿಯ ನೆರಿಗೆಯಂತಿತ್ತು ಮತ್ತು ಕೂದಲು ಕೊಳಕು ಬಟ್ಟೆಯಂತಿತ್ತು.

ಆಕೆಯ ಎರಡು ಹೆಣ್ಣುಮಕ್ಕಳನ್ನು ಬಿಟ್ಟರೆ ಉಳಿದ ಯಾವ ಮಕ್ಕಳೂ ಉಳಿದಿಲ್ಲ. ಇಬ್ಬರೂ ಈಗ ಅವರವರ ಗಂಡನ ಮನೆಯಲ್ಲಿ ನೆಮ್ಮದಿಯಿಂದ ಇದ್ದಾರೆ. ನಬೀರ್ ಶಲ್ಲಾ ಮತ್ತು ಆತನ ಹೆಂಡತಿ ತಮ್ಮ ಕಟ್ಟಿಗೆಯ ಗೂಡಿನಲ್ಲಿ ಯಾವುದೇ ಗಹನವಾದಂತಹ ದುರದೃಷ್ಟವಿಲ್ಲದೆ ನೆಮ್ಮದಿಯಿಂದಿದ್ದಾರೆ. ತಮ್ಮ ಮಕ್ಕಳ ಮದುವೆಗಾಗಿ ಮಾಡಿದ್ದ ಸಾಲದ ಹೊರೆ ಹಂತಹಂತವಾಗಿ ತೀರಿಸಿದ್ದಾರೆ. ಖಾತೂನ್ ದೀದಿಯ ಒಂದೇ ಒಂದು ದುಃಖವೆಂದರೆ ಯಾವ ಗಂಡುಮಕ್ಕಳೂ ದೀರ್ಘಕಾಲ ಬದುಕಲಿಲ್ಲ. ನಬೀರ್ ಶಲ್ಲಾ ಒಂದೆರಡು ಸಾವಿರದಷ್ಟು ಹಣದ ಚೀಲವನ್ನು ಕೂಡಿಟ್ಟಿದ್ದಾನೆ ಎಂದು ಗಾಳಿ ಸುದ್ದಿ ಇತ್ತು. ನಿಜವಾದ ಪರಿಸ್ಥಿತಿ ಆ ದೇವರಿಗೊಬ್ಬನಿಗೇ ಗೊತ್ತು. ತಮ್ಮ ಜೀವನವನ್ನು ಕನಿಷ್ಠ ಆದಾಯದಿಂದ ನಡೆಸುತ್ತಿದ್ದರು, ಅಷ್ಟೆ. ದಪ್ಪ ಕನ್ನಡಕದ ಗ್ಲಾಸು ಅವನ ಮೂಗಿನ ಮೇಲೆ ಇದ್ದು, ನಬೀರ್ ಶಲ್ಲಾ ಒಂದು ಒಳ್ಳೆಯ ಬಟ್ಟೆ ಹೊಲಿಯುತ್ತಾ ತನ್ನ ಇಷ್ಟವಾದ ಪದ್ಯವನ್ನು ಮಗು ತೊದಲಿದಂತೆ ಹೇಳುತ್ತಿದ್ದ :

ಅವಳು ನನಗೆ ಕುಡಿಯುವ ಬಟ್ಟಲಲ್ಲಿ ಸುರೆ ತಂದಳು
ಮತ್ತು ನನ್ನ ಪ್ರಾಣ ಒಯ್ದಳು

ಆತನ ಪಕ್ಕದಲ್ಲೇ ಕುಳಿತಿದ್ದ ಖಾತೂನ್ ದೀದಿ ರಾಟೆಯ ಚಕ್ರ ತಿರುಗುವ ಸಂಗೀತದಂತೆ ಆ ಚಕ್ರಕ್ಕೆ ತಾನೂ ಗುನುಗುತ್ತಿದ್ದಳು. ಬಹಳ ಹೊತ್ತು ಅಲ್ಲದಿದ್ದರೂ ಮಳೆ ಬಂತು. ಆದಾಗ್ಯೂ ಜೀಲಮ್ ನದಿಯ ನೀರು ಕೆಸರಾಗಿ ಬಿಸಿಲು ಸಹಿಸಲು ಸಾಧ್ಯವಾಯಿತು. ಈ ಬಿಸಿಲಿನಲ್ಲಿ ಕೆಲಸ ಮಾಡುವುದು ಬೇಡವೆಂದು ಬಯಸಿದರೂ ಆತನೊಬ್ಬನೇ ಸಂಪಾದಿಸುವವನಾಗಿದ್ದ. ಆತನು ಇಚ್ಛಿಸಲಿ ಬಿಡಲಿ, ಕೆಲಸ ಮಾಡಲೇಬೇಕು. ಅವನ ಬೆವರು ಮತ್ತು ರಕ್ತ ಸುರಿಯುವುದರಿಂದಲೇ ಬೇರೆಯವರ ಬಟ್ಟೆಗಳಿಗೆ ರೂಪ ಬರುವುದು ಎಂದು ಆತ ತಿಳಿದುಕೊಳ್ಳುತ್ತಿದ್ದ. ಆತನು ಬೆವರಿನಿಂದ ತೊಯ್ಯುತ್ತಿದ್ದಾಗ ಮಂಡಿಯ ಮೇಲೆ ಇರುತ್ತಿದ್ದ ಬಟ್ಟೆಗಳಿಂದ ಕಿರಿಕಿರಿ ಆಗುತ್ತಿದ್ದವು. ಆದರೆ ಆತನು ಕೆಲಸ ಮಾಡಲೇಬೇಕಿತ್ತು. ತನಗಾಗುವ ಅಸಹನೆಯನ್ನು ಮರೆಯಲು ತನ್ನ ಕೆಲಸದ ನಡುವೆ ಪದ್ಯಗಳನ್ನು ಗುನುಗುನಿಸುತ್ತಿದ್ದ. ಆತ ತೇಪೆ ಇದ್ದುದು ಹೊಲಿಯುವುದನ್ನು ಮುಗಿಸಿ, ಬಟ್ಟೆಯ ಮೇಲಿನ ಗುಂಜು ಕತ್ತರಿಸಲು ಕತ್ತರಿಗಾಗಿ ಹುಡುಕಾಡಿದ. ಆದರೆ ಅದು ಎಲ್ಲಿಯೂ ಸಿಗಲಿಲ್ಲ. ಕೊನೆಗೆ ತನ್ನ ಹೆಂಡತಿಯನ್ನು ಕೇಳಿದ, "ಕತ್ತರಿಯನ್ನು ನೀನು ಎಲ್ಲಿಯಾದರೂ ಇಟ್ಟಿದ್ದೀಯಾ ?"

"ನಾನು ಅವುಗಳನ್ನು ಶೆಲ್ಫಿನಲ್ಲಿ ಇಟ್ಟಿದ್ದೇನೆ" ಉತ್ತರಿಸಿದಳು.

"ಅವು ನನಗೆ ಬೇಕು, ಇಲ್ಲಿಗೆ ತಂದುಕೊಡು."

ಖಾತೂನ್ ದೀದಿಯ ಕಾಲುಗಳಿಗೆ ಸಂಧಿವಾತ ಆಗಿತ್ತು. ಆಕೆಗೆ ಏಳಲು ಆಗುತ್ತಿರಲಿಲ್ಲ. ಕಾಲ ಮೇಲೆ ನಿಂತುಕೊಂಡು ಹುಡುಕುವುದು ಕಷ್ಟವಾಗುತ್ತಿತ್ತು. ಆಕೆಗೆ ತನ್ನದೇ ಬೇರೆ ದಾರಿ ಇದ್ದರೆ ತನ್ನ ಉಳಿದ ಜೀವಿತದಲ್ಲಿ ಎಲ್ಲಿಗೂ ಹೋಗುತ್ತಿರಲಿಲ್ಲ. ಆದರೂ ಆಕೆ ತನ್ನ ಗಂಡನ ಕೋರಿಕೆಯನ್ನು ತಿರಸ್ಕರಿಸು ವಂತಿರಲಿಲ್ಲ. ಹಾಗೆಯೇ ಸ್ವಲ್ಪ ನೋವಿನಲ್ಲೇ ಎದ್ದು ಕತ್ತರಿ ಹುಡುಕುವುದಕ್ಕೆ ಪ್ರಾರಂಭಿಸಿದಳು. ಶೆಲ್ಫಿನಲ್ಲಿ ನೋಡಿದಳು. ಸಣ್ಣ ಪಿನ್ನಿನ ಪೆಟ್ಟಿಗೆಯಲ್ಲಿ ನೋಡಿದಳು. ಆದರೆ ಕತ್ತರಿ ಎಲ್ಲೂ ಕಂಡುಬರಲಿಲ್ಲ. ನಬೀರ್ ಶಲ್ಲಾನ ಅಸಹನೆ ಜಾಸ್ತಿಯಾಯ್ತು. ಅಲ್ಲಲ್ಲಿಯ ಎಳೆಗಳನ್ನು ತೆಗೆದುಹಾಕಲು ಕತ್ತರಿ ಬೇಕಾಗಿದ್ದಿತು. "ಸರಿಯಾಗಿ ನೋಡಿದೆಯಾ ನೀನು ?" ಕೂಗಿದ. ಖಾತೂನ್ ದೀದಿ ಶೆಲ್ಫಿನಿಂದ ಒಂದು ಚೀಲವನ್ನು ಎಳೆದಳು. ಅದರಲ್ಲಿ ಸಣ್ಣ ಮಕ್ಕಳು ತೊಡುವ ಸಿದ್ಧ ಉಡುಪುಗಳು ಮತ್ತು ಹಳೆಯ ಬಟ್ಟೆಗಳು ತುಂಬಿದ್ದವು. ಎಲ್ಲ ಮಕ್ಕಳು ಸತ್ತುಹೋಗಿದ್ದರೂ ಬಟ್ಟೆಗಳು ಮಾತ್ರ ಈಗಲೂ ಇದ್ದವು. ವಿಷಾದದಿಂದ ಖಾತೂನ್ ದೀದಿ ಯೋಚಿಸಿದಳು. ಒಬ್ಬರಾದ ಮೇಲೆ ಒಬ್ಬರಂತೆ ತನ್ನ ಮಕ್ಕಳನ್ನು ನೆನೆಸಿಕೊಂಡಳು ಮತ್ತು ತಕ್ಷಣವೇ ಅವಳ ಕಣ್ಣಾಲಿಗಳು ತುಂಬಿದವು. ಆಕೆಯ ಚಪ್ಪಟೆಯಾಗಿರುವ ಮೊಲೆಗಳು ಕಂಪಿಸಿದವು. ಈ ರೀತಿ ಹಳೆಯ ಬಟ್ಟೆಗಳನ್ನು ಕೆದಕುತ್ತಿದ್ದಾಗ ಒಂದು ಜೊತೆ ಗುಲಾಬಿ ಕೆಂಪಿನ ಪಾಯಿಜಾಮಾಗಳನ್ನು ಕಂಡಳು. ಬಹಳ ಹಿಂದೆ ಆಕೆಯ ಮದುವೆಯ ದಿನ ಈ ಪಾಯಿಜಾಮಗಳನ್ನು ಧರಿಸಿದ್ದಳು. ಆಕೆಯ ವರದಕ್ಷಿಣೆಯ ಕುರುಹಾಗಿ ಇನ್ನೂ ಅವುಗಳು ಅಲ್ಲಿದ್ದವು. ಆಕೆಯ ಯೌವ್ವನದ ದಿನಗಳತ್ತ ಹೊರಳಿದಾಗ ಅವಳ ಹೃದಯದ ವೇಗ ಹೆಚ್ಚಾಗಿ ಬಡಿದುಕೊಳ್ಳಲಾರಂಭಿಸಿತು.

ಖಾತೂನ್ ದೀದಿಗೆ ಹಳೆಯದೆಲ್ಲ ನೆನಪಾಗಿ ಲಜ್ಜೆ ಉಂಟಾಯಿತು. ತನ್ನ ಗಂಡನಿಂದ ದೂರವಿರಲು ಪ್ರಯತ್ನಿಸಿದರೂ ಕಣ್ಣು ಕುಕ್ಕುವ ಆ ಕೆಂಪು ಉಡುಪುಗಳ ಆಕರ್ಷಣೆ ಹೆಚ್ಚಾಯಿತು. ನಾಚಿಕೆಯಿಂದ ಅವಳ ಹೃದಯ ಕಂಪಿಸಿತು. ದೇಹವೆಲ್ಲ ರೋಮಾಂಚನವಾಯಿತು. ತಾನೊಬ್ಬಳು ಹೊಸದಾಗಿ ಮದುವೆಯಾದ ವಧುವಿನಂತೆ ಭಾಸವಾಯಿತು. ನಬೀರ್ ಶಲ್ಲಾ ಆಕೆಗೆ ನವ ವರನಂತೆ ಕಂಡ. ಯೋಚನಾ ಲಹರಿಗಳು ಅವಳ ಕಣ್ಣಮುಂದೆ ಹಾದು ಅವಳ ತಾಯಿ ನಿಷೇಕದ ಕೋಣೆಗೆ ಬಿಡುತ್ತಿದ್ದಾಳೆ, ಅಲ್ಲಿ ವರ ನಬೀರ್ ಶಲ್ಲಾ ಕಾಯುತ್ತಿದ್ದಾನೆ. ಒಂದು ಕ್ಷಣ ನಬೀರ್ ಶಲ್ಲಾ ಅವಳ ಮುಂದೆ ನವ ಯುವಕನಂತೆ ಕಂಗೊಳಿಸಿದ. ಅವಳು ತನ್ನ ಗಂಡನೆಡೆಗೆ ಪಾರ್ಶ್ವನೋಟ ಬೀರಿದಳು. ಅವನು ಮುದ್ದಿಸುತ್ತಾ ತನ್ನ ಹಾಡನ್ನು ಮಧುರವಾಗಿ ಗುನುಗಿದ. ಅವಳ ಮೈಬಣ್ಣ ನವಿಲಿನ ಮರಿಯಂತೆ ಮಾಗಿದೆ. ನಬೀರ್ ಶಲ್ಲಾ ತನ್ನ ಸೆಲ್ವಾರ್ ಕಮೀಝ್ ಮತ್ತು ಮೇಲಿನ ಶಾಲು ಹೊದ್ದು ನವ ಯುವಕನಂತೆ ಕಂಡು, ತಲೆಗೆ ಸುತ್ತಿದ್ದ ರುಮಾಲು ಮುಸ್ಲಿಂರ ಕಿರೀಟದಂತಿತ್ತು. ಇತ್ತ ಮದುವೆಯ ಸಂಭ್ರಮದಲ್ಲಿ ವಧುವಿದ್ದರೆ, ಅತ್ತ ವರ ಒಣ ಯೋಚನೆಗಳಿಂದ ಬಲೆ ಹೆಣೆಯುತ್ತಿದ್ದ. ನಬೀರ್ ಶಲ್ಲಾ ನಿರೀಕ್ಷೆಯಿಂದ ಕಂಪಿಸಹತ್ತಿದ.

ಮೃದುವಾದ ಒತ್ತಾಯದಿಂದ, ನಬೀರ್ ಶಲ್ಲಾ, "ನೀನೇಕೆ ಆ ಪಾಯಿಜಾಮಗಳನ್ನು ಹಾಕಿಕೊಳ್ಳಬಾರದು ?" ಎಂದು ಪುಸಲಾಯಿಸಿದ.

ಕಾವ್ಯಲೋಕ

## ಗಝಲ್

೧

ಬಂಧಗಳ ಬದಿಗೊತ್ತಿ ಕನಸು ಹೊತ್ತು ಬಂದೆ ನೀನು
ಕನಸುಗಳು ನನಸಾದ ಹರುಷದಲಿ ಮುದಗೊಂಡೆ ನಾನು

೨

ಬಿಸಿ ಉಸಿರ ಮರೆಯಲಿ ಮಡುಗಟ್ಟಿದ ನೋವು ನೀನು
ಜಯದ ಖುಷಿಯಲಿ ನವಜೀವನಕೆ ನಾಂದಿ ನಾನು

೩

ಬರಡು ಮನಕೆ ಉತ್ಸಾಹ ತುಂಬಿದ ಚಿಲುಮೆ ನೀನು
ಉತ್ಸಾಹ ಕುಂದಿ ಶೂನ್ಯ ಕವಚದಾಚೆ ಒಂಟಿ ನಾನು

೪

ನೀಲಿ ಆಗಸದ ಸ್ವಚ್ಛಂದ ಬಿಳಿಮೋಡ ನೀನು
ಭುವಿಯ ಕಾನನದ ಮಧ್ಯ ನಿರ್ಲಿಪ್ತ ಬಂಡೆ ನಾನು

೫

ಮೋಜಿಗಾಗಿ ವರಿಸಿದ ಒಲ್ಲದ ನಲ್ಲನಲ್ಲ ನಾನು
ಬಂದ ಬಿರುಸಿನಲೆ ದಾರಿ ತೋರದೆ ಹೋದ ನಲ್ಲೆ ನೀನು

೬

ನಗುವ ಮಗುವ ಮೊಗವೇ ಜೀವವೆಂದೆ ನಾನು
ಮಗುವಿನಾಚೆ ನಗುವ ನುಂಗಿ ಬದುಕ ಕಳೆದೆ ನೀನು

**ಶಿವಕುಮಾರ ದಂಡಿನ**
ಕರ್ನಾಟಕ ಪೊಲೀಸ್ ಅಕಾಡೆಮಿ
ಜಲಪುರಿ, ಮೈಸೂರು.

ಖಾತೂನ್ ದೀದಿ ಮತ್ತೆ ನಾಚಿದಳು. ಅವಳು ಏನನ್ನೂ ಹೇಳಲಿಲ್ಲ. ನಬೀರ್ ಶಲ್ಲಾ, "ಬಾ, ಏಕೆ ಬೇಡ ?" ಆತ ಬಟ್ಟೆ ಹೊಲಿಯುತ್ತಿದ್ದುದನ್ನು ಬಿಟ್ಟು ತನ್ನ ಹೆಂಡತಿ ಬಳಿಗೆ ಬಂದು ಪ್ರೀತಿಯಿಂದ ಮಾತನಾಡುತ್ತ, "ಏಕೆ ನೀನು ನಿರಾಕರಿಸುತ್ತಿ ? ಆ ಪಾಯಿಜಾಮ ಹಾಕಿಕೋ, ನೀನು ಒಳ್ಳೆಯ ಹೆಂಗಸು ಎಂದ." "ನೀನೊಬ್ಬ ದೊಡ್ಡ ಹುಚ್ಚ" ಎಂದು ಕೋಪಿಸುತ್ತಾ ಆತನ ಹೆಂಡತಿ ಹೇಳಿದಳು.

"ಆದರೆ ಏಕೆ ?" ಎಂದು ನಬೀರ್ ಶಲ್ಲಾ ಕೇಳಿದ.

ಖಾತೂನ್ ದೀದಿ ಸುಮ್ಮನೆ ಅಲುಗಾಡದೆ ಕುಂತಳು. ತನ್ನ ದೇಹ ಹೊತ್ತು ಓಡಾಡುವುದು ಆಕೆಗೆ ಅಷ್ಟು ಸುಲಭವಾಗಿರಲಿಲ್ಲ. "ಸರಿ" ಎಂದು ಗುರುಗುಟ್ಟುತ್ತಾ ನಬೀರ್ ಶಲ್ಲಾ ತನ್ನ ಕೆಲಸದತ್ತ ಗಮನ ಹರಿಸಿದ. ಖಾತೂನ್ ದೀದಿ ನೆಮ್ಮದಿಯ ಉಸಿರು ಬಿಟ್ಟಳು. ಆಕೆ ಬಟ್ಟೆಗಳೆಲ್ಲವನ್ನು ಕಲೆ ಹಾಕುತ್ತಾ ಒಂದು ಗಂಟು ಮಾಡಿದಳು, ಆದರೆ ಆ ಚಿಂದಿ ಬಟ್ಟೆಗಳನ್ನು ಗಂಟು ಕಟ್ಟಿ ಕಪಾಟಿನಲ್ಲಿ ಇಡುವುದಕ್ಕೆ ಮೊದಲು ಕೊನೆಗೊಂದು ನೋಟವನ್ನು ಆ ಕೆಂಪು ಗುಲಾಬಿ ಪೈಜಾಮದ ಕಡೆಗೆ ಹರಿಸಿದಳು. ಆಕೆ ತನ್ನ ಗಂಡನಿಗಾಗಿ ಸುತ್ತಲೂ ನೋಡಿದಳು. ಈ ಮನುಷ್ಯ ಎಲ್ಲಿಗೆ ಹೋಗಿರಬಹುದೆಂದು ಚಿಂತಿಸಿದಳು. ಈತ ಉಡುಪುಗಳನ್ನು ಉಟ್ಟುಕೊಳ್ಳಲು ಏಕೆ ಒತ್ತಾಯಿಸಲಿಲ್ಲ ಎಂದು ವಿಷಾದದಿಂದ ಹೃದಯದಲ್ಲಿ ಚುಚ್ಚಿದಂತಾಗಿ ದುಃಖಪಟ್ಟಳು.

ಸ್ವಲ್ಪ ಹೊತ್ತಿನಲ್ಲೇ ನಬೀರ್ ಶಲ್ಲಾ ತನ್ನ ಹಾಡುಗಳನ್ನು ಗುನುಗುತ್ತ ವಾಪಸ್ಸು ಬಂದ. ಖಾತುನ್ ದೀದಿ ತಾನು ವಧುವಾಗಿದ್ದಾಗ ಧರಿಸಿದ್ದ ಪೈಜಾಮಗಳನ್ನು ನೆನಪಿಸಿಕೊಂಡು ಅವುಗಳನ್ನು ಅಪ್ಪಿಕೊಂಡಂತೆ ನಾಚಿಕೆ ಪಡುತ್ತಿದ್ದಳು. ಆಕೆಗೆ ಯೌವನದ ದಿನಗಳ ನೆನಪನ್ನು ಬಿಟ್ಟಿರಲು ಕಷ್ಟವಾಗಿತ್ತು. ಆದರೆ ನಬೀರ್ ಶಲ್ಲಾ ಖುಷಿಗೊಂಡಿದ್ದ. ಆತ ಹಾಡನ್ನು ಗುನುಗುತ್ತಾ ಮೆಟ್ಟಲು ಏರುತ್ತಿದ್ದ. ಆಕೆಯ ಮುಂದೆ ನಿಂತು ತನ್ನ ಕೈಯಲ್ಲಿ ಹಿಡಿದಿದ್ದ ಒಂದು ಪೌಂಡು ಮಾಂಸವನ್ನು ಆಕೆಯ ಕೈಗಿಡುತ್ತಾ, "ನೀನು ಆ ಪೈಜಾಮವನ್ನು ಹಾಕಿಕೊಳ್ಳುವೆಯಾ" ಎಂದು ಕೇಳಿದ. ಸ್ವಲ್ಪ ಹೊತ್ತಿನ ನಂತರ, "ಏನು ಹಠಮಾರಿ ನೀನು, ನಿನ್ನ ಬಗ್ಗೆ ನಿನಗೆ ನಾಚಿಕೆಯಾಗುವುದಿಲ್ಲವೆ ? ಈ ವಯಸ್ಸಿನಲ್ಲಿ ಮಂಗನಂತೆ ವರ್ತಿಸುವೆಯಲ್ಲ" ಎಂದು ಹೆಂಡತಿ ಆಕ್ಷೇಪಿಸಿದಳು.

"ನಾಚಿಕೆ ಏಕೆ ?" ಒದರಿದ ಶಲ್ಲಾ ! ನಾವು ಗಂಡ ಹೆಂಡತಿಯರಲ್ಲವೆ ? ಖಾತುನ್ ದೀದಿ ಮಾತನ್ನು ಬದಲಿಸಿದಳು.

"ಈ ಮಾಂಸ ಏತಕ್ಕೆ ?" ಕೇಳಿದಳು.

"ಅಡಿಗೆ ಮಾಡಲು, ಮತ್ತೇಕೆ ?"

ಖಾತೂನ್ ದೀದಿಗೆ ತಿಳಿಯಿತು. ಆಕೆಗೆ ಒಂದೇ ಒಂದು ಹಲ್ಲಿರುವುದು. ಆದರೆ ನಬೀರ್ ಶಲ್ಲಾ ಹುಚ್ಚನಲ್ಲ. ಅವನು ಹೇಳಿದ, "ಮಾಂಸ ಮೃದು ಆಗುವವರೆಗೂ ಕುದಿಸು. ಜಗಿಯಲು ಗಟ್ಟಿಯಾಗದ ಹಾಗೆ ಇರಲಿ. ಆದರೆ ಈವರೆಗೂ ಆ ಪೈಜಾಮಗಳನ್ನೇಕೆ ಹಾಕಿಕೊಂಡಿಲ್ಲ ?" ಎಂದು ಆಕೆಯನ್ನು ತನ್ನೆಡೆಗೆ ಎಳೆಯುತ್ತಾ ಮಗುವಿನ ತರಹ ಮುತ್ತು ನೀಡುತ್ತಾ ಆಕೆಯನ್ನು ಎಲ್ಲಿಯೂ ಹೋಗಲು ಬಿಡಲಿಲ್ಲ. ಕೊನೆಗೆ ಆಕೆ ಒಪ್ಪಿದಾಗಲೇ ನಬೀರ್ ಶಲ್ಲಾ ಕೆಂಪು ಪೈಜಾಮಗಳನ್ನು ತೊಡಲು ಒಬ್ಬಳನ್ನೇ ಬಿಟ್ಟಿದ್ದು.

ನಬೀರ್ ಶಲ್ಲಾ ಕೋಣೆ ಬಿಟ್ಟು ಒಂದು ಪೌಂಡು ಮಾಂಸವನ್ನು ಕೈಯಲ್ಲಿ ಹಿಡಿದುಕೊಂಡು ಕೆಳಗಿಳಿದ. ಖಾತೂನ್ ದೀದಿ ಬಾಗಿಲು ಮುಚ್ಚಿ ಚಿಲಕ ಹಾಕಿದಳು. ಆಕೆ ಬಟ್ಟೆಯ ಗಂಟನ್ನು ಸರಿಯಾಗಿ ಕಟ್ಟಿರಲಿಲ್ಲ. ಪೈಜಾಮದಲ್ಲಿ ಲಾಡಿಯನ್ನು ಹಾಕಿಕೊಂಡು ಅವುಗಳನ್ನು ಬದಲಿಸಿದಳು. ಆಕೆ ಆ ಕ್ಷಣ ತನ್ನ ಸಂಧಿವಾತವನ್ನು ಮರೆತು ಕೆಳಗಿಳಿದು ಮುಂದಾಗುವುದನ್ನು ಭಯದಿಂದ ನಿರೀಕ್ಷಿಸುತ್ತಾ ತನ್ನ ಗಂಡನಿಗೆ ಎದುರಾದಳು. "ಓ ದೇವರೆ ! ಬಹುಶಃ ಯಾರಾದರೂ ಅವರನ್ನು ನೋಡಿದರೆ ! ಆ ವಯಸ್ಸಿನಲ್ಲಿ ಆತನಿಗೇನಾಗಿದೆ ! ಓ ದೇವರೆ" ಎಂದು ಗಲಿಬಿಲಿಗೊಳ್ಳುತ್ತಾ ನಿಶ್ಶಬ್ದವಾಗಿ ಅಡುಗೆಮನೆ ಪ್ರವೇಶಿಸಿದಳು.

ನಬೀರ್ ಶಲ್ಲಾ ಒಲೆಯ ಮೇಲೆ ಮಾಂಸ ಬೇಯಿಸಲು ಪಾತ್ರೆಯನ್ನು ಮೇಲಿರಿಸಿದ, ಕುಳಿತಲ್ಲೇ ಒಲೆ ಊದುತ್ತ, ಹಾಡುತ್ತಿದ್ದ. ಖಾತೂನ್ ದೀದಿ ತನ್ನ ಗಂಡ ಗಮನಿಸದೆ ಇರುವ ಮೊದಲೇ ಕುಳಿತುಕೊಳ್ಳಲು ಇಚ್ಛಿಸಿದಳು. ಆದರೆ ಆಕೆಯ ಕಾಲುಗಳು ಚಾಪೆಯ ದಾರದಲ್ಲಿ ಸಿಲುಕಿ 'ಧಡ' ಎಂಬ ಶಬ್ದ ಮಾಡುತ್ತಾ ಬಿದ್ದಳು. ಆತ ನೆಲದ ಮೇಲೆ ಸುಸ್ತಾಗಿ ಬಿದ್ದಿದ್ದ ಖಾತೂನ್ ದೀದಿಯನ್ನು ನೋಡಿದ. ಗಾಬರಿಯಿಂದ ಕೂಗಿಕೊಂಡ. ಆದರೆ ಕ್ಷಣದಲ್ಲಿಯೇ ಖಾತೂನ್ ದೀದಿ ತನ್ನ ಗಲ್ಲ ಎತ್ತಿ ಗಂಡನತ್ತ ಮುಗುಳ್ನಕ್ಕಳು. ನಬೀರ್ ಶಲ್ಲಾ ಆಕೆಯ ತೋಳುಗಳನ್ನು ಹಿಡಿದು ಮೇಲೇಳಲು ಸಹಾಯ ಮಾಡಿದ. "ನಿನಗೇನು ಗಾಯವಾಗಿಲ್ಲವಲ್ಲ ?" ನಬೀರ್ ಶಲ್ಲಾ ಕುತೂಹಲದಿಂದ ಕೇಳಿದ. ಖಾತೂನ್ ದೀದಿ ತುಂಬ ನಾಚಿಕೆಯಿಂದ ತಲೆಯಾಡಿಸಿದಳು. "ಸರಿ, ಎದ್ದೇಳು ಮತ್ತೆ." ನಬೀರ್ ಶಲ್ಲಾ ಯಾಚಿಸಿದ. ಮತ್ತೆ ತಲೆಯಾಡಿಸುವುದೇ ಆಕೆಯ ಉತ್ತರವಾಗಿತ್ತು. "ಖಾತೂನ್ ದೀದಿ ಉಟ್ಟ ಪೈಜಾಮದಿಂದ ಎದ್ದು ನಿಂತುಕೋ" ಎಂದು ಹೇಳಿದ. ಆಕೆ ನಿರಾಕರಿಸಲು ಪ್ರಯತ್ನ ಮಾಡಿದಳು. ಅವನು ಹಠವಾದಿ. ಆಕೆಯನ್ನು ಹೊಸ ಮದುಮಗಳಂತೆ ರಸಿಕತೆಯಿಂದ ಬಂಧಿಸಿ ಎತ್ತಿ ಹಿಡಿಯಲು ಪ್ರಾರಂಭಿಸಿದ. ಖಾತೂನ್ ದೀದಿ ತಾನು ವಯಸ್ಸಾದ ಹೆಣ್ಣುಮಗಳು ಮತ್ತು ತನಗೆ ಮೊಮ್ಮಕ್ಕಳು ಇದ್ದಾರೆ ಎನ್ನುವುದನ್ನು ಮರೆತಳು. ತನ್ನ ಎಲ್ಲಾ ಹಲ್ಲುಗಳು ಉದುರಿಬಿದ್ದಿವೆ ಮತ್ತು ತನ್ನ ಅಳಿಯ ಕೂಡ ಆಗಲೇ ಮುದುಕನಾಗಿದ್ದಾನೆ ಎನ್ನುವುದನ್ನು ನಬೀರ್ ಶಲ್ಲಾ ಮರೆತ. ನೋಡಲಿಕ್ಕೆ ಅದೊಂದು ರೋಮಾಂಚಕ ಕ್ಷಣವಾಗಿತ್ತು. ಖಾತೂನ್ ದೀದಿ ನೆಲವನ್ನು ಹಿಡಿದಿದ್ದಾಳೆ ಮತ್ತು ನಬೀರ್ ಶಲ್ಲಾ ಆಕೆಯ ತೋಳು, ಭುಜ, ಏನೇ ಆಗಲಿ ಆತ ತನ್ನ ಕೈಯನ್ನು ಮೇಲಿಡಲು ಪ್ರಯತ್ನಿಸಿದ. ಕೂಡಲೇ ಬಾಗಿಲು ಶಬ್ದವಾಯಿತು. ಯಾರೋ ಕೆಮ್ಮಿದರು. ನಬೀರ್ ಶಲ್ಲಾ ಓಡುತ್ತಾ ತನ್ನ ಜಾಗಕ್ಕೆ ಹಿಂತಿರುಗಿ ಏನು ಆಗಿಲ್ಲವೇನೋ ಎಂಬಂತೆ ಕುಳಿತ. ಖಾತೂನ್ ದೀದಿಗೆ ಬೆವರಿನಿಂದ ಸ್ನಾನ ಮಾಡಿದಂತಾಯ್ತು. ಹೊಸದಾಗಿ ಬಂದಾತ ಬೇರೆ ಯಾರೂ ಆಗಿರದೆ ಅವರ ದೊಡ್ಡ ಅಳಿಯನೇ ಆಗಿದ್ದ. ಅವರ ಪ್ರಣಯ ಚೇಷ್ಟೆಯನ್ನು ಹುಬ್ಬು ಗಂಟಿಕ್ಕಿಕೊಂಡು ವೀಕ್ಷಿಸುತ್ತಿದ್ದ.

"ಸಲಾಂ ಅಲೈಕುಮ್" ಅಂದ. ನಬೀರ್ ಶಲ್ಲಾ "ದಯವಿಟ್ಟು ಒಳಗೆ ಬಾ" ಎಂದ. ಆದರೆ ಆತನ ಅಳಿಯ ಒಂದು ಮಾತನ್ನೂ ಆಡದೆ ಒಳಗೆ ಹೆಜ್ಜೆ ಇಟ್ಟ. ಆತನ ಮುಖ ಕಾದುಂಡೆಯಾಗಿತ್ತು. ಅವನಿಗೆ ಗೊತ್ತಾಗಿರಬೇಕು ಎಂದುಕೊಂಡು ಖಾತೂನ್ ದೀದಿ ನಾಚಿಕೆಯಿಂದ ಮುದುಡಿದಳು. ಅಪರಾಧಿಭಾವದಿಂದ ತನ್ನ ಗಂಡನ ಕಡೆ ನೋಡಿದಳು. ಆದರೆ ಆತ ತಕ್ಷಣ ಎದ್ದು ನಿಂತು, "ನೀನೇಕೆ ಅಪರಾಧಿಭಾವ ಹೊಂದಿದ್ದೀ ? ಇದು ನಮ್ಮ ಮನೆ ಅಲ್ಲವೇ ? ತನ್ನ ಸ್ವಂತ ಮನೆಯಲ್ಲಿರುವಾತ ರಾಜಕುಮಾರನೇ ಅಲ್ಲವೇ ? ಎಂದು ಹೇಳಹತ್ತಿದ.



ಕಾಶ್ಮೀರಿ ಮೂಲ :
**ಅಖ್ತರ್ ಮೊಹಿಯುದ್ದೀನ್**
ಕನ್ನಡಕ್ಕೆ :
**ತಂಬ್ರಹಳ್ಳಿ ರಾಮನಮಲಿ**
'ಹೊಂಬೆಳಕು', ಆಚಾರ್ಯ ಲೇಔಟ್
ಹರಪನಹಳ್ಳಿ (ಪೋಸ್ಟ್)
ದಾವಣಗೆರೆ – ೫೮೩೧೩೧

---

## ಮಾರ್ಪಾಡು



ನಲ್ಲೆ
ನನ್ನತ್ತ
ನೀ
ಮೆಲುನಗೆ
ಬೀರುವಾಗಲೆಲ್ಲಾ
ಬದಲಿಸಿ
ಬರೆಯಲ್ಪಡುವುದು
ಹನಿಗವನದ ವ್ಯಾಕರಣ ।

**ಡಾ|| ವಿ. ಪುಗಳೇಂದಿ**
ಸಿರುಗುಪ್ಪ – ೫೮೩೧೨೧
ಬಳ್ಳಾರಿ ಜಿಲ್ಲೆ




# ಮುಂದಣ ಭವಿಷ್ಯತ್ತಿಗೆ ಹಿಂದಣ ಇತಿಹಾಸ ಬೆಳಕಾಗಬೇಕು

## (ಸ್ವಾತಂತ್ರ್ಯ ಹೋರಾಟಗಾರ ಟಿ. ಆರ್. ರೇವಣ್ಣನವರ ಅಭಿನಂದನ ಗ್ರಂಥ)

ಕೃತಿ : **ಸ್ವಾತಂತ್ರ್ಯ ಚೌಕ**
ಸಂಪಾದಕರು : **ಜಿ. ಇಂದ್ರಕುಮಾರ್**
ಪುಟ : vi + ೨೧೭ + ೧೬ = ೨೪೦
ಬೆಲೆ : ರೂ. ೨೦೦
ಪ್ರಕಾಶನ : ಭಾರತೀಯ ಜನಕಲಾ ಸಮಿತಿ, ತುಮಕೂರು.




ತುಮಕೂರು ಜಿಲ್ಲೆಯಲ್ಲಿ ಹಾಗೂ ಕಾರ್ಮಿಕ ಸಂಘಟನೆಗಳಲ್ಲಿ ಅತ್ಯಂತ ಚಿರಪರಿಚಿತವಾಗಿರುವ ಹಿರಿಯ ಜೀವ ಟಿ. ಆರ್. ರೇವಣ್ಣನವರು ನಿಜ ಅರ್ಥದಲ್ಲಿ ತನು ಮನ ಧನಗಳನ್ನು ಸಮಾಜದ ಏಳಿಗೆಗಾಗಿ, ಕಾರ್ಮಿಕ ಹೋರಾಟಕ್ಕಾಗಿ ಸವೆಸಿದವರು. ಈಗಾಗಲೇ ಎಂ. ಎಚ್. ನಾಗರಾಜು ಸಂಪಾದಿಸಿರುವ 'ಚಳವಳಿಯ ಚೇತನ ಟಿ. ಆರ್. ರೇವಣ್ಣ' ಎಂಬ ಜೀವನಚರಿತ್ರೆ ಕೃತಿಯಲ್ಲಿ ರೇವಣ್ಣನವರ ಬದುಕು – ಹೋರಾಟದ ವಿವಿಧ ಮಜಲುಗಳನ್ನು ನಿರೂಪಿಸಿದ್ದಾರೆ. ಇದೀಗ ಇವರಿಗೆ ೮೬ ವರ್ಷ ತುಂಬಿದ ಸಂದರ್ಭದಲ್ಲಿ ಅರ್ಪಿಸಿರುವ ಅಭಿನಂದನ ಗ್ರಂಥ 'ಸ್ವಾತಂತ್ರ್ಯ ಚೌಕ' ಕೃತಿಯು ಸಾರ್ವಜನಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದ ಕ್ಷಿತಿಜವಾಗಿ ಗೋಚರಿಸುವುದರಲ್ಲಿ ಎರಡು ಮಾತಿಲ್ಲ. ಏಕೆಂದರೆ ಈ ಕೃತಿಯಲ್ಲಿ ಟಿ. ಆರ್. ರೇವಣ್ಣನವರ ವ್ಯಕ್ತಿತ್ವ–ಬದುಕನ್ನು ಕುರಿತಂತೆ ವಿಶದೀಕರಿಸುವುದಕ್ಕಿಂತ ಅವರ ಕಾಲದ ಸಾಂದರ್ಭಿಕ ಘಟಿತಗಳಲ್ಲಿ, ಸಮಕಾಲೀನ ಚಳವಳಿಗಳಲ್ಲಿ ಅವರು ಭಾಗವಹಿಸಿದ ಅಥವಾ ಸ್ಪಂದಿಸಿದ ರೀತಿ, ಅವರು ತಾಳಿರುವ ನಿಲುವು, ತಾತ್ವಿಕ ಬದ್ಧತೆಗಳ ಉಲ್ಲೇಖವಿದೆ ಹಾಗೂ ತನ್ಮೂಲಕ ಚಳವಳಿ – ಹೋರಾಟಗಳ ಪ್ರತಿಫಲನಗಳ ವ್ಯಾಖ್ಯಾನ ಮುಂತಾದವುಗಳನ್ನು ದಾಖಲಿಸುವ ಯತ್ನವಿದೆ. ಅಂದಿನ ಕಾಲಘಟ್ಟದಿಂದ ಇಂದಿನವರೆಗಿನ ಹೋರಾಟ – ಚಳವಳಿಗಳು ಸಾಗಿಬಂದ ಮಾರ್ಗದ ಹೆಜ್ಜೆಗುರುತುಗಳನ್ನು ಗುರುತಿಸಲಾಗಿದೆ. ಸಾರ್ವತ್ರಿಕ ಚಳವಳಿಯು ಇತಿಹಾಸವೊಂದನ್ನು ಹೇಗೆ ಸೃಷ್ಟಿಸಬಲ್ಲದು ಎಂಬುದಕ್ಕೆ ೧೨ನೆಯ ಶತಮಾನ ಎಲ್ಲ ಕಾಲಕ್ಕೂ ಸಲ್ಲುವ ಉದಾಹರಣೆಯಾದಂತೆ ಸ್ವಾತಂತ್ರ್ಯ ಚಳವಳಿಯೂ ಒಂದು ಉದಾಹರಣೆ. ಅಂತೆಯೇ ಅದು ಮಾರ್ಗದರ್ಶಕವೂ ಅನುಕರಣೀಯವೂ ಆಗಿರುವುದನ್ನು ಮರೆಯುವಂತಿಲ್ಲ.

ಈ ಕೃತಿಯಲ್ಲಿನ ಕೆಲವೊಂದು ಲೇಖನಗಳು ಟಿ. ಆರ್. ರೇವಣ್ಣನವರನ್ನು ಕುರಿತಂತೆ, ಅವರನ್ನು ವೈಯಕ್ತಿಕವಾಗಿ ಬಲ್ಲವರು, ಒಡನಾಡಿಗಳು, ಅವರೊಂದಿಗೆ ಕೆಲಸ ಮಾಡಿದವರು ಬರೆದಿರುವಂತೆಯೇ ಅವರ ಕಾರ್ಯವೈಖರಿಯನ್ನು ಗಮನಿಸುತ್ತಲೇ ಅದರ ಭಾಗವಾಗಿ ಅವರ ಒಡನಾಟ ಹೊಂದಿದಂತೆಯೂ ತಮ್ಮ ಅನುಭವ ಹಂಚಿಕೊಂಡಿದ್ದಾರೆ. ಇವತ್ತಿನ ಪೀಳಿಗೆಯವರಿಗೆ ಇವೆಲ್ಲ ಒಂದು ಅಗಾಧತೆಯ ಪವಾಡಸದೃಶ ರೋಚಕತೆಯನ್ನೂ ಉಂಟುಮಾಡಬಹುದು ಅಥವಾ ಸಿನಿಕತನವನ್ನೂ ಮೂಡಿಸಬಹುದು. ಆದರೆ ಇವೆರಡರ ನಡುವೆ ನಿಂತ ನಮ್ಮಂತಹ ಅನೇಕರಿಗೆ ರೋಮಾಂಚಕ ಅನುಭವವೆನಿಸಬಹುದು.

'ಸ್ವಾತಂತ್ರ್ಯ ಚೌಕ' ಈ ಕೃತಿಯ ಹೆಸರಿನೊಂದಿಗೇ ತುಮಕೂರಿನಲ್ಲಿ ನಿಜವಾಗಿಯೂ ಇರುವ 'ಸ್ವಾತಂತ್ರ್ಯ ಚೌಕ (ಚರ್ಚ್ ಸ್ಕ್ವೇರ್)' ಒಂದು ಐತಿಹಾಸಿಕ ಸ್ಮಾರಕ. ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಮಾಡಲಾದ ಗೋಲಿಬಾರ್‌ನಲ್ಲಿ ಮೃತಪಟ್ಟ ಮೂವರು ದುರಂತ ನಾಯಕರ ಸ್ಮರಣಾರ್ಥ ಇದನ್ನು ನಿರ್ಮಿಸಲಾಗಿದೆ. ಹೀಗೆ ಇತಿಹಾಸ ಮತ್ತು ನಮ್ಮ ನಡುವೆ ಇರುವ ಜ್ವಲಂತ ನಿದರ್ಶನವನ್ನು ಕೃತಿಯ ಮೂಲಕ ಕಟ್ಟಿಕೊಡುವ ಮಹತ್ವದ ಕೆಲಸವನ್ನು ಕೃತಿಯ ಸಂಪಾದಕ ಜಿ. ಇಂದ್ರಕುಮಾರ್ ಮಾಡಿದ್ದಾರೆ.

ಎಷ್ಟೋ ಪುಸ್ತಕಗಳು ಬರುತ್ತವೆ. ಅದರಿಂದ ಪ್ರಯೋಜನವೇನು, ಎಂದು ಕೆಲವೊಮ್ಮೆ ಕೆಲವರು ಪ್ರಶ್ನೆ ಮಾಡುವುದುಂಟು. ಸದ್ಯಕ್ಕೆ ಪ್ರಯೋಜನದ ಮಾತು ಬೇಡ. ಆದರೆ ಅದರಲ್ಲಿ ದಾಖಲೀಕರಣಗೊಂಡ ಘಟನೆಗಳ ಮಹತ್ವಕ್ಕೆ ಬೆಲೆ ಕಟ್ಟಲಸಾಧ್ಯ ಎನ್ನುವುದು ಅನೇಕರಿಗೆ ಗೊತ್ತಿಲ್ಲ. ಘಟನೆಗಳನ್ನು ಕಂಡವರು, ಅನುಭವಿಸಿದವರು ಕಾಲಕೋಶಕ್ಕೆ ಸೇರಿಹೋದ ನಂತರ ಅವು ದಾಖಲಾಗದಿದ್ದರೆ? ಉದಾಹರಣೆಗೆ ಎಷ್ಟೋ ಸ್ಮರಣ ಸಂಚಿಕೆ, ಲೇಖನಗಳಲ್ಲಿ ತುಮಕೂರು ಜಿಲ್ಲೆಗೆ ಮಹಾತ್ಮ ಗಾಂಧಿಯವರು ಬಂದಿದ್ದರ ಬಗ್ಗೆ ಉಲ್ಲೇಖವಿದ್ದರೂ ಇತ್ತೀಚೆಗೆ ಜಿಲ್ಲಾ ಉಸ್ತುವಾರಿ ಸಚಿವರು ಈ ವಿಚಾರ ನನಗೆ ಗೊತ್ತೇ ಇರಲಿಲ್ಲ ಎಂದು ಸಾರ್ವಜನಿಕ ಭಾಷಣದಲ್ಲಿ ಹೇಳಿರುವುದನ್ನು ನೋಡಿದರೆ ಇಂತಹ ಕೃತಿಗಳ ಮಹತ್ವದ ಅರಿವು ಹೆಚ್ಚಾಗುತ್ತದೆ.

ಈ ಕೃತಿಯಲ್ಲಿ ವೈವಿಧ್ಯಮಯ ಬರಹಗಳಿವೆ. ಸ್ವಾತಂತ್ರ್ಯ ಚಳವಳಿಯ ಕಾಲಘಟ್ಟ ಮಾತ್ರವೇ ಅಲ್ಲ, ತದನಂತರ ಮುಂದುವರಿದ ಭಾಗವಾದ ಹಾಗೂ ಮುಂದುವರಿದ ಭಾಗವಾಗಿ ಈಗಲೂ ಮುಂದುವರಿಯುತ್ತಿರುವ ಹೋರಾಟ – ಚಳವಳಿ, ಜನಪರ ಕಾಳಜಿಗಳ ಗುರುತುಗಳನ್ನೂ ಬಿಂಬಿಸಲಾಗಿದೆ. ಕೇವಲ ರೇವಣ್ಣನವರ ವ್ಯಕ್ತಿತ್ವ ಮತ್ತು ಅವರ ಪಾತ್ರದ ಕುರಿತಾಗಿರದೆ ನಮ್ಮ ದೇಶದ – ಸಮಾಜದ ವ್ಯವಸ್ಥೆಯನ್ನು ಆಗಿನ ಕಾಲದ ಕನ್ನಡಿಗೆ ಈಗಿನ ಮುಖವನ್ನು ಹಿಡಿದು ತೋರಿಸುವ ಯತ್ನವೂ ಇದಾಗಿದೆ ಎನ್ನಬಹುದು.

ಮಹಿಳಾ ಹೋರಾಟದ ಸಂಕಥನ, ಸ್ವಾತಂತ್ರ್ಯ ಸಂಗ್ರಾಮ, ಬಂಡವಾಳಶಾಹಿ ಮತ್ತು ಗಾಂಧಿ ಚಿಂತನೆ, ಭಾರತ ಸಂವಿಧಾನ–ಬದಲಾವಣೆಯ ಅರುಣೋದಯ, ಗಾಂಧಿ ಕಾಣಬಯಸಿದ್ದ ಶಿಷ್ಟ ಸಮಾಜ ಮುಂತಾದ ಲೇಖನಗಳು ನೈಜ ಹೋರಾಟದ ಆಶಯ ಹಾಗೂ ವಿವಿಧ ಮಜಲುಗಳನ್ನು ಬಿಂಬಿಸಿದಂತೆ ಸ್ವತಂತ್ರ ಭಾರತದ ಸಂಕೀರ್ಣ ಸಮಾಜದಲ್ಲಿ ತತ್ತರಿಸುತ್ತಿರುವ ಅನೇಕ ಸವಾಲುಗಳಿಗೆ ಪ್ರತಿರೋಧ ಒಡ್ಡುವ, ಸಮಾಜದ ಶಾಂತಿ ಸುವ್ಯವಸ್ಥಿತ ಬದುಕಿಗೆ ಮಾರ್ಗಗಳಾಗಬಹುದಾದ ಆಯಾಮಗಳನ್ನು ಸೂಚಿಸುವ ಗಾಂಧೀಜಿಯವರ ನಿಸರ್ಗೋಪಚಾರದ ಮಹತ್ವ ಮತ್ತು ಅವಶ್ಯಕತೆ, ನೈಸರ್ಗಿಕ ಕೃಷಿಯಿಂದ ಆಹಾರ ಭದ್ರತೆ ಪಡೆಯುವ ಬಗೆ, ಹುಲ್ಲುಗಾವಲು ಕೃಷಿಕೈಗಾರಿಕೆ ಮುಂತಾದ ಬರಹಗಳು. ಸಾಮಾಜಿಕ ನೆಲೆಯ ಸಮಾನತೆಯ ಜೀವದ್ರವ್ಯಗಳಾಗಿ ಎಂದೆಂದಿಗೂ ಪ್ರಸ್ತುತವಾಗುವ ಬಸವಣ್ಣನ ಅಥವಾ ೧೨ನೇ ಶತಮಾನದ ವಿಚಾರಕ್ರಾಂತಿಗಳ ವಿಶ್ಲೇಷಣೆ ಹಾಗೂ ಸಮಕಾಲೀನ ಸಮಾಜಕ್ಕೆ ಅನ್ವಯಿಸಬಹುದಾದ ಶರಣರ ವಚನಗಳಲ್ಲಿನ ಲೋಕ ಸಂಗ್ರಹದ ಮಹಾಮಾರ್ಗ,

**ಬಾ. ಹ. ರಮಾಕುಮಾರಿ**

ಬಸವಣ್ಣ ತಿರಸ್ಕರಿಸಿದ ದೇವರುಗಳು, ಅಸ್ಪೃಶ್ಯತೆ ಮುಂತಾದ ಲೇಖನಗಳು, ಅವುಗಳ ಮೂಲಕ ಪ್ರತಿಪಾದಿಸಹೊರಟಿರುವ ಅಂಶಗಳು ಪ್ರತಿಯೊಂದನ್ನೂ ಆನ್ವಯಿಕ ನೆಲೆಯಲ್ಲಿ ಚರ್ಚೆಗೆ ಒಳಪಡಿಸುವಂತಹವುಗಳಾಗಿವೆ. ಇವಲ್ಲದೆ ರೇವಣ್ಣನವರ ಸಮೀಪವರ್ತಿಗಳು ತಾವು ಕಂಡಂತೆ ಅವರ ವ್ಯಕ್ತಿತ್ವ, ಹೋರಾಟದಲ್ಲಿ ಅವರ ಪಾತ್ರ, ಸಮಾಜದೊಂದಿಗಿನ ಅವರ ಪ್ರತಿಸ್ಪಂದನ, ಸಾಮಾಜಿಕ ಜವಾಬ್ದಾರಿ, ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ರೇವಣ್ಣನವರ ವಿಚಾರ – ನಡವಳಿಕೆ ಮುಂತಾದವುಗಳಲ್ಲದೆ ತಳ ಸಮುದಾಯದ ಸ್ವಾತಂತ್ರ್ಯ ಹೋರಾಟಗಾರರು, ಕೊಳೆಗೇರಿ ಜೀವನ ಸಮಸ್ಯೆಗಳು ಮುಂತಾದ ಲೇಖನಗಳ ಮೂಲಕ ಹಿರಿಯರೂ ಕೂಡ ಕಟ್ಟಿಕೊಟ್ಟಿದ್ದಾರೆ. ತಮ್ಮದೇ ಆದ ಧೋರಣೆಯಲ್ಲಿ ಸಮಾಜವನ್ನು ನೋಡುವ ಪ್ರಸ್ತುತ ಸಂದರ್ಭಕ್ಕೆ ಪರ್ಯಾಯವಾಗಬಹುದಾದ ಮಾರ್ಗವನ್ನು ಆಲೋಚಿಸುವ ಪರಿ ಹಾಸುಹೊಕ್ಕಾಗಿರುವುದು ಈ ಕೃತಿಯ ಮಹತ್ವವನ್ನು ಹೆಚ್ಚಿಸಿದೆ.

ಸುಂದರವಾಗಿ ಉತ್ತಮ ಮುದ್ರಣ ಹೊಂದಿ ಹೊರಬಂದಿರುವ ಈ ಕೃತಿ ಟಿ. ಆರ್. ರೇವಣ್ಣನವರ ಅಸ್ತಿತ್ವವನ್ನು ಸಾರುವಂತಿರುವ ಅನೇಕ ಛಾಯಾಚಿತ್ರಗಳನ್ನೊಳಗೊಂಡಿದೆ. ಇದರೊಂದಿಗೆ ಸ್ವಾತಂತ್ರ್ಯಪೂರ್ವ ಹಾಗೂ ನಂತರದ ಪ್ರಬಲ ಹೋರಾಟದ ಚಿತ್ರಗಳಿದ್ದಿದ್ದರೆ ಇಡೀ ಕೃತಿ ಇನ್ನಷ್ಟು ಔಚಿತ್ಯಪೂರ್ಣವೆನಿಸುತ್ತಿತ್ತು. ರೇವಣ್ಣನವರ ಚಟುವಟಿಕೆಗಳ ಬಗ್ಗೆ ಬರೆದಿರುವ ಲೇಖನಗಳಲ್ಲಿ ಪುನರಾವರ್ತಿತವಾಗಿರುವ ಅಂಶಗಳೂ ಇದ್ದು, ಕೆಲವು ಬರೆಯಲೇಬೇಕೆಂಬ ಉಮೇದಿಗೆ ಸಿಲುಕಿ ಬರೆದಂತೆ ಗೋಚರಿಸುತ್ತವೆ. ಕೆಲವರು ಕವನಗಳ ಮೂಲಕವೂ ಅಭಿನಂದನೆ ಸಲ್ಲಿಸಿದ್ದಾರೆ. ಒಟ್ಟಾರೆ, ಈ ಕೃತಿ ಒಂದು ಚಳವಳಿಯ ಸಂದರ್ಭದ ಹೋರಾಟದ ಮನಃಸ್ಥಿತಿಗಳಿಗೆ ಉಲ್ಲೇಖನಗಳನ್ನು ನೀಡುವ ದಿಸೆಯಲ್ಲಿ ಅರ್ಥಪೂರ್ಣ ಕೊಡುಗೆಯಾಗಿದೆ. ಇಂದಿನ ಯುವಜನಾಂಗ ಹಾಗೂ ವಿದ್ಯಾರ್ಥಿಗಳು ಅಥವಾ ಸಾಮಾಜಿಕ ಚಿಂತನೆಯ ಮಾರ್ಗದಲ್ಲಿರುವ ಎಲ್ಲರೂ ಇಂತಹ ಕೃತಿಗಳನ್ನು ಓದಲೇಬೇಕು. ಮುಂದಣ ಭವಿಷ್ಯತ್ತಿಗೆ ಹಿಂದಣ ಇತಿಹಾಸ ಬೆಳಕಾಗಬೇಕು.

**ಬಾ. ಹ. ರಮಾಕುಮಾರಿ**
೨೪ನೇ ಕ್ರಾಸ್, ಎಸ್. ಐ. ಟಿ. ಬಡಾವಣೆ, ತುಮಕೂರು – ೫೭೨ ೧೦೩

# ಒಂಟಿ ಬೀದಿಯಲ್ಲಿ ಅನಾಥ ಜಂಗಮನ ಹಾಡು






ಈ ಬೀದಿ
ಬೀದಿ ಬದಿಯ ಸಾಲು ಸಾಲು ಮರಗಳು
ಉದುರಿಬಿದ್ದ ತರಗೆಲೆಗಳು,
ಸಂಜೆಯಾಗುತ್ತಲೆ ಮರವನ್ನಾಶ್ರಯಿಸುವ ಹಕ್ಕಿಗಳು;
ಬೀದಿಯುದ್ದಕ್ಕೂ ಮೂಡಿದ ಯಾರದೋ
ಅಸ್ಪಷ್ಟ ಹೆಜ್ಜೆಗುರುತುಗಳು
ಈ ಎಲ್ಲವೂ ನನ್ನ ಅನಾದಿಕಾಲದ ಸಂಗಾತಿಗಳು !

ಇಲ್ಲಿ ಬದುಕುವುದೆಂದರೆ
ಮುಖವಾಡಗಳ ಸಂತೆ,
ನಮ್ಮ ನೈಜ ಮುಖವನ್ನು ಮರೆಮಾಚಿ
ನಿತ್ಯವೂ ಒಡಲು ಪೊರೆಯಲು ಕಸರತ್ತು, ಕರಾಮತ್ತು !
ಆದರೆ ನಾನೋ, ಮುಖವಾಡ ಧರಿಸದ 'ಅನಾಥ ಜಂಗಮ'

ನನ್ನೊಳಗೆ ಚುರ್ರೆನ್ನುವ ಕರುಳು;
ನಿತ್ರಾಣಗೊಂಡು
ಸೋತ ಹೆಜ್ಜೆಗಳ ಎಣಿಸುತ್ತಾ,
ಬೀದಿ ಬೀದಿಗಳ ಸುತ್ತಿದ್ದೇನೆ
ನನ್ನ ಅನುಭವಕ್ಕೆ
ತಟ್ಟಿರುವುದು ಕೇವಲ ಹಸಿವೊಂದೆ !

ಇಲ್ಲಿ ಯಾವ ಮನುಷ್ಯನಿಗಿದೆ
ನನ್ನ ಆರ್ತನಾದವ ಆಲಿಸಿಕೊಳ್ಳುವ ಪುರುಸೊತ್ತು ?
ನನಗೆ ಸುಖವೆಂದರೆ,
ಕನಸು, ಕಲ್ಪನೆಯಲ್ಲಿ ಮೂಡಿ ಮರೆಯಾಗುವ ಗೆರೆ
ಹೊಟ್ಟೆಯ ಮೇಲೆ ಅಳಿಸದಂಥ ಬರೆ !

ಯಾವುದಕ್ಕೂ ಮರುಳನಾಗದ ನಾನು
ವಾಸ್ತವಕ್ಕೆ ಮರಳುತ್ತೇನೆ, ನರಳುತ್ತೇನೆ
ಈ ಬೀದಿ, ಮರ, ಹಕ್ಕಿಗಳಷ್ಟೆ ನನ್ನನ್ನು
ಸಾಂತ್ವಾನಿಸಬಲ್ಲವು, ನಾಳೆಯನ್ನು ನೆನಪಿಸಬಲ್ಲವು
ಮನುಷ್ಯರ್‍ಯಾರೂ ಸುಳಿಯಲಾರರು
ನನ್ನ ಸನಿಹ !

ಇದೇ ಮಣ್ಣು ಕಲ್ಲುಗಳಿಂದ ಕಟ್ಟಿದ
ಮನೆಯನೊಲ್ಲೆ,
ಮಣ್ಣು ಬೆಳೆದ ಹತ್ತಿ, ಅದರಿಂದಾದ ಬಟ್ಟೆಯನ್ನೂ ನಾ ಬೇಡೆ,
ನನ್ನೊಡಲೊಳಗೆ ಹಸಿವಿನ ಕಿಚ್ಚನ್ನಿಟ್ಟುಕೊಂಡು,
ಗಗನಮುಖಿಯಾಗಿ,
ಮುಳುಗುತ್ತಿರುವ ಸೂರ್ಯನನ್ನು
ನಿರುಕಿಸುತ್ತಾ...
ಈ ಮಣ್ಣಿಗೆ
ಅನ್ನವನ್ನು ದಯಪಾಲಿಸಲು ಬೇಡುತ್ತೇನೆ
ಅದೂ ಸಿಗದ ವೇಳೆ
ಓ ಮಣ್ಣೇ ನನ್ನನ್ನು ಅರ್ಪಿಸಿಕೋ...!

**ಸಂತೋಷ ಅಂಗಡಿ**
'ಲಕ್ಷ್ಮೀ ನಗರ', ಬಾದಾಮಿ, ಬಾಗಲಕೋಟ ಜಿಲ್ಲೆ – ೫೮೭ ೨೦೧

ದಲಿತರ ಬದುಕಿನ ಕರಾಳ ಕಪ್ಪು ಚುಕ್ಕೆಯಾದ 'ಪೂನಾ ಒಪ್ಪಂದವನ್ನು ಕುರಿತ ಚರ್ಚೆಯು ಒಂದರ್ಥದಲ್ಲಿ ಭಾರತೀಯ ದಲಿತ ರಾಜಕಾರಣವನ್ನು ಕುರಿತ "ಆತ್ಮಾವಲೋಕನ"ದ ಸಂಗತಿಯಾಗಿದೆ. ಜೊತೆಗೆ, ಪ್ರಸ್ತುತ ದಲಿತರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಸ್ಮಿತೆಗಳ ಬಗ್ಗೆ ಕೂಡ ಗಂಭೀರವಾಗಿ ಚಿಂತಿಸಬೇಕಾಗಿದೆ. ಪೂನಾ ಒಪ್ಪಂದವನ್ನು ಕುರಿತ ಚರ್ಚೆ ಕೇವಲ ಔಪಚಾರಿಕವಾಗದೆ ಪ್ರಸ್ತುತ ದಲಿತ ರಾಜಕಾರಣದ ಸಮಸ್ಯೆಗಳೇನು ? ದಲಿತ ರಾಜಕಾರಣವನ್ನು ಯಾವ ನೆಲೆಯಲ್ಲಿ ಪುನರ್ ನಿರ್ಮಿಸಬೇಕು ? ದಲಿತ ರಾಜಕಾರಣಿಗಳ ಸಮುದಾಯಬದ್ಧ ಕಾಳಜಿ, ಜವಾಬ್ದಾರಿಗಳೇನು ? ದಲಿತ ರಾಜಕಾರಣಿಗಳು ಬೇರೆ ಬೇರೆ ಪಕ್ಷಗಳಲ್ಲಿ ಇದ್ದಾಗ್ಯೂ, ಅವರನ್ನು ಶೋಷಿತ ಸಮುದಾಯಗಳ ಹಿತದೃಷ್ಟಿಯಿಂದ ಸಂಘಟಿಸುವುದು ಹೇಗೆ ? ದಲಿತರ ರಾಷ್ಟ್ರಮಟ್ಟದ ರಾಜಕೀಯ ಪಕ್ಷವಾದ ಬಿ.ಎಸ್.ಪಿ ಪಕ್ಷವನ್ನು ಪ್ರಜಾಸತ್ತಾತ್ಮಕವಾಗಿ ಬಲಿಷ್ಠಗೊಳಿಸುವುದು ಹೇಗೆ ? ಎಲ್ಲಾ ಜಾತಿ ಸಮುದಾಯಗಳಲ್ಲಿನ ಶೋಷಿತರನ್ನು ಈ ಪಕ್ಷದ ಪರಿಧಿಯಲ್ಲಿ ಒಗ್ಗೂಡಿಸುವುದು ಹೇಗೆ ? ಎಂಬುವುದು ಈ ಚರ್ಚೆಯ ಸಂದರ್ಭದ ಪೂರಕ ವಿಚಾರಗಳಾಗಬೇಕು.

**ಡಾ॥ ಅಪ್ಪಗೆರೆ ಸೋಮಶೇಖರ**

# ಅಂಬೇಡ್ಕರ್ ವೈಚಾರಿಕತೆ ಮತ್ತು ಪೂನಾ ಒಪ್ಪಂದದ ಮರುಚಿಂತನೆ

*ಪ್ರಜಾಪ್ರಭುತ್ವವು*
*ಕೇವಲ ಒಣ ಆಡಳಿತ ಯಂತ್ರ ಮಾತ್ರವಲ್ಲ*
*ಪರಸ್ಪರ ಪ್ರೇಮದ ಸಹಕಾರದ*
*ಅರಿವಿನ ಎಲ್ಲೆಗಳನ್ನು ವಿಸ್ತರಿಸುವ*
*ಜೀವನ ವಿಧಾನ ಆಗಬೇಕು*

– ಡಾ॥ ಬಿ. ಆರ್. ಅಂಬೇಡ್ಕರ್

ಮಾನವತೆಯ ಸಾಕಾರ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರನ್ನು ಮರೆತ ಭಾರತಕ್ಕೆ ಭವಿಷ್ಯವಿಲ್ಲ. ಪ್ರಸ್ತುತ ವಿವೇಕ ಶೂನ್ಯತೆಯಿಂದ ಪರಿತಪಿಸುತ್ತಿರುವ ಭಾರತೀಯ ಬದುಕಿಗೆ ಅಂಬೇಡ್ಕರ್ ಅವರ ವೈಚಾರಿಕತೆಯ ಅರಿವು ದಿಕ್ಕಾಗಬಲ್ಲದು. ಜಾತಿ ಅಪಮಾನದ ನೋವುಗಳನ್ನೆಲ್ಲ ತನ್ನ ಅಂತಃಕರಣದಲ್ಲಿ ಅರಗಿಸಿಕೊಳ್ಳುತ್ತಲೇ ಮಾನವೀಯ ವಿವೇಕದ ನೆಲೆಗಟ್ಟಿನ ಮೇಲೆ ರಾಷ್ಟ್ರೀಯತೆಯನ್ನು ಕಟ್ಟಹೊರಟ ಅಂಬೇಡ್ಕರ್ ಅವರು ಅಸ್ಪೃಶ್ಯತೆಯ ಕ್ರೌರ್ಯಗಳನ್ನು ತನ್ನ ಅಹಿಂಸಾತ್ಮಕ ಹೋರಾಟದ ಮೂಲಕ ಗೆದ್ದವರು. ಆ ಕಾರಣಕ್ಕಾಗಿ ಅಂಬೇಡ್ಕರ್ ಜಾಗತಿಕ ಮಟ್ಟದ ಬಹುದೊಡ್ಡ ಅಹಿಂಸಾ ಹೋರಾಟಗಾರರಾಗಿದ್ದಾರೆ. ಜಾತಿ ಪ್ರಣೀತ ಅಸಮಾನತೆಯ ಬೇರುಗಳು ಸಂಕೀರ್ಣವಾಗಿರುವ ಈ ಸಂದಿಗ್ಧ ಸಂದರ್ಭದಲ್ಲಿ ಅಂಬೇಡ್ಕರ್ ಅವರನ್ನು ಅರಿತುಕೊಳ್ಳುವ ಬಗೆ : ಯಾವುದೇ ಪೂರ್ವಗ್ರಹ ಪೀಡಿತವಲ್ಲದ, ಪ್ರಜ್ಞಾಪೂರ್ವಕ ಜಾತ್ಯತೀತ ನೆಲೆಯದ್ದಾಗಬೇಕಿದೆ. ಈ ಹೊತ್ತಿನ ಜನವಿರೋಧಿ ಜಾತಿರಾಜಕಾರಣ; ಮತಮಾನ್ಯಗಳ ಮತಾಂಧತೆ; ಕ್ರೂರತನದ ಹಿಂದುತ್ವ ಹಾಗೂ ಕೋಮುವಾದಿತನಗಳಿಗೆ ಮುಖಾಮುಖಿಯಾಗಿ ನಿಂತು ಸವಾಲಿನ ಉತ್ತರವಾಗುವ ದಿಟ್ಟತನ ಅಂಬೇಡ್ಕರ್ ವಾದದಲ್ಲಿದೆ. ಶೋಷಿತರು ಭಾವನಾತ್ಮಕ ನೆಲೆಗಿಂತ ವೈಚಾರಿಕ ನೆಲೆಯಲ್ಲಿಯೂ ಮೂಲಭೂತ ವಾದಿಗಳು ಜಾತಿವಾದಿ ದೃಷ್ಟಿಕೋನಕ್ಕಿಂತ ಮಾನವೀಯ, ಜಾತ್ಯತೀತ ಪ್ರಜ್ಞೆಯಲ್ಲಿ ಪ್ರಾಮಾಣಿಕವಾಗಿ ಅಂಬೇಡ್ಕರ್ ಅವರನ್ನು ಅರ್ಥೈಸಿಕೊಳ್ಳುವ, ಆ ಮೂಲಕ ತಮ್ಮ ಬದುಕಿನ ಅಂತರಾಳಕ್ಕೆ ತಂದುಕೊಳ್ಳುವ ಅಗತ್ಯವಿದೆ. ಆಗ ಮಾತ್ರ ಅಂಬೇಡ್ಕರ್ ಅವರ ನಿಸ್ವಾರ್ಥ, ವಿಸ್ತೃತ ಮಾತೃ ಸಂವೇದನೆಯ ಅನುಭವ ದಕ್ಕಲಿಕ್ಕೆ ಸಾಧ್ಯ.

ಹಿಂದೂ ಧರ್ಮದ ವಾರಸುದಾರರೆನಿಸಿಕೊಳ್ಳುವ ವರಿಗೆ ಜಾತೀಯತೆ, ಅಸ್ಪೃಶ್ಯತೆ, ಅಸಮಾನತೆ, ಬಡತನ, ಅನಕ್ಷರತೆ, ನಿರುದ್ಯೋಗದಂತಹ ಸಮಸ್ಯೆಗಳಿಗಿಂತ, 'ಮತಾಂತರ' ಬಹಳ ದೊಡ್ಡ ರಾಷ್ಟ್ರೀಯ ಸಮಸ್ಯೆಯಾಗಿ ಕಾಣುತ್ತದೆ. ಇಂತಹ

ಮತಾಂಧರಿಗೆ ಅಂಬೇಡ್ಕರ್ ಹೇಳಿರುವ : "ಒಂದು ಧರ್ಮ ಒಬ್ಬ ವ್ಯಕ್ತಿಯನ್ನು ಅಥವಾ ಸಮುದಾಯವನ್ನು ಕೀಳುದರ್ಜೆಯ, ಹೀನಮಾನಗೇಡಿ, ಬಹಿಷ್ಕೃತ ವ್ಯಕ್ತಿ ಅಥವಾ ಸಮುದಾಯವೆಂದು ಕಾಣದೆ ಅವರೂ ಕೂಡ ತಮ್ಮಂತೆ ಮನುಷ್ಯರು ಎಂದು ಪರಿಗಣಿಸಬೇಕು. ಆ ಧರ್ಮ, ಅವನೂ ಇತರರಿಗೆ ಸಮಾನ ಎನ್ನುವ ವಾತಾವರಣ, ಭರವಸೆಯನ್ನು ಮೂಡಿಸಬೇಕು. ಆಗ ಅಂಥ ಧರ್ಮಕ್ಕೆ, ಮತಾಂತರ ಹೊಂದುವುದರಿಂದ ಶತಶತಮಾನಗಳಿಂದ ಅಸ್ಪೃಶ್ಯರಲ್ಲಿ ಬೇರುಬಿಟ್ಟ ಕೀಳರಿಮೆ ಕಾಣೆಯಾಗುತ್ತದೆ" – ಎಂಬ ಮಾತಿನ ಮೌಲ್ಯ ಅರಿವಾಗಬೇಕಿದೆ. ಆ ಕಾರಣದಿಂದಲೇ ಅಂಬೇಡ್ಕರ್, ಜಾತಿ–ಅಸಮಾನತೆಗೆ ಕಾರಣವಾದ ಮನುಸ್ಮೃತಿಯನ್ನು ಬಹಿರಂಗವಾಗಿ ಸುಡುವ ಮೂಲಕ, "ಹಿಂದುವಾಗಿ ಹುಟ್ಟಿದ್ದೇನೆ; ಹಿಂದುವಾಗಿ ಸಾಯುವುದಿಲ್ಲ" ಎಂದು ಹೇಳುತ್ತ ಕೊನೆಗೆ ಬೌದ್ಧಧರ್ಮಕ್ಕೆ ಮರಳಿದರು.

ಶತಮಾನಗಳಿಂದ ಜಾತಿ ರೋಗಕ್ಕೆ ಬಲಿಯಾಗಿರುವ ನಮ್ಮ 'ರಾಷ್ಟ್ರೀಯತೆ'ಗೆ ಅಂಬೇಡ್ಕರ್ ತತ್ತ್ವದಿಂದ ಮಾತ್ರ ಕಾಯಕಲ್ಪ ಸಾಧ್ಯ. ಬುದ್ಧ, ಬಸವ, ಅಂಬೇಡ್ಕರ್ ಅವರ ವೈಚಾರಿಕತೆಯನ್ನು ಅರ್ಥೈಸಿಕೊಳ್ಳದ ಯಾವೊಬ್ಬ ಭಾರತೀಯನಿಗೂ ರಾಷ್ಟ್ರೀಯ ಪ್ರಜ್ಞೆಯ ಅರಿವು ಮೂಡುವುದು ಅಸಾಧ್ಯ. "ಚರಿತ್ರೆ ಗೊತ್ತಿಲ್ಲದವ ಚರಿತ್ರೆ ನಿರ್ಮಿಸಲು ಸಾಧ್ಯವಿಲ್ಲ; ಅಸ್ಪೃಶ್ಯತಾ ನಿವಾರಣೆ ಮತ್ತು ಎಲ್ಲಾ ದುರ್ಬಲ ವರ್ಗಗಳ ವಿಮೋಚನೆಯಾಗದ ಹೊರತು ದೇಶದ ಸ್ವಾತಂತ್ರ್ಯ ಅರ್ಥರಹಿತ...; ಭಾರತ ಸ್ವತಂತ್ರವಾದರಷ್ಟೇ ಸಾಲದು ಧಾರ್ಮಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳಲ್ಲಿ ಭರತಖಂಡದಲ್ಲಿ ಜನಿಸಿದವರೆಲ್ಲ ಸಮಾನ ಹಕ್ಕುಳ್ಳವರಾಗಬೇಕು...; ಸ್ವಾತಂತ್ರ್ಯ, ಸಮಾನತೆ, ಸೋದರತ್ವದ ತಳಹದಿಯ ಮೇಲೆ ಮಾತ್ರವೇ ಆದರ್ಶ, ಸುಸ್ಥಿರ ಸಮಾಜವನ್ನು ನಿರ್ಮಾಣ ಮಾಡಬಹುದು...; ನಾವೆಲ್ಲ ಭಾರತೀಯರು ಎಂಬ ಭಾವನೆಯನ್ನು ನಿರ್ಮಿಸುವುದು ನಮ್ಮ ಗುರಿಯಾಗಬೇಕು; ನಮ್ಮ ಎಲ್ಲಾ ಜನರು ಮೊದಲು ಭಾರತೀಯರು, ನಂತರವೂ ಭಾರತೀಯರು, ಕೊನೆಗೂ ಭಾರತೀಯರು. ಭಾರತೀಯತೆಯನ್ನು ಉಳಿದು ಬೇರೇನೂ ಇಲ್ಲ." ಎಂಬ ಅಂಬೇಡ್ಕರ್ ಅವರ ಖಚಿತ ಅಭಿಪ್ರಾಯಗಳು, ಅವರಿಗಿದ್ದ ತಾಯ್ತನದ ರಾಷ್ಟ್ರೀಯತೆ ಹಾಗೂ ಭ್ರಾತೃಭಾವನೆಯನ್ನು ಸಾಕ್ಷೀಕರಿಸುತ್ತವೆ.

ನಮ್ಮೊಳಗಿನ ಜಾತಿ ಸೂತಕದ ಓದು–ಗ್ರಹಿಕೆಗಳು ನಾಶವಾಗದ ಹೊರತು ಅಂಬೇಡ್ಕರ್ ಅವರ ಜಾತ್ಯತೀತ ಬಹುಮುಖಿ ಮಾನವೀಯ ನೆಲೆಗಳು ಸಾಕಾರಗೊಳ್ಳುವುದಿಲ್ಲ. ಭಾರತೀಯ ಸಂದರ್ಭದಲ್ಲಿ ಅಂಬೇಡ್ಕರ್ ಅವರನ್ನು ಜಾತಿ ಕೇಂದ್ರಿತ ದಲಿತ ನೆಲೆಯಲ್ಲಿಯೇ ವ್ಯಾಖ್ಯಾನಿಸಲಾಗುತ್ತಿದೆ. ಈ ಬಗೆಯ ಮನೋಧರ್ಮ ವಿದ್ಯಾವಂತ ಸಮುದಾಯದಲ್ಲಿ ವಿಪರೀತವಾಗಿರುವುದು ನಾಗರಿಕ ಸಮಾಜ ತಲೆತಗ್ಗಿಸುವ ವಿಚಾರವಾಗಿದೆ. ಇದು ಭಾರತೀಯ ಸಾಮಾಜಿಕ ಹಾಗೂ ಬೌದ್ಧಿಕ ದಿವಾಳಿತನದ




ಸಂಕೇತವೇ ಸರಿ. ಮಹಿಳಾಪರ ಹಕ್ಕುಬಾಧ್ಯತೆಗಳ ಪ್ರಾತಿನಿಧ್ಯವನ್ನು ಪ್ರತಿಪಾದಿಸುವ 'ಹಿಂದೂ ಕೋಡ್ ಬಿಲ್' ತಿರಸ್ಕೃತಗೊಂಡಾಗ, "ಮಹಿಳೆಯರ ಸಾಮಾಜಿಕ ನ್ಯಾಯವನ್ನು ಗೌರವಿಸದ ಸರ್ಕಾರದಲ್ಲಿ ನಾನು ಇರುವುದಿಲ್ಲ" ಎಂದು ಹೇಳಿ ತಮ್ಮ ಕಾನೂನು ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟ ಏಕೈಕ ಭಾರತೀಯ ಪ್ರಜಾಪ್ರತಿನಿಧಿ ಅಂಬೇಡ್ಕರ್. ಅವರಿಗಿದ್ದ ಮಹಿಳಾಪರ ಕಳಕಳಿಗೆ ಈ ಚಾರಿತ್ರಿಕ ಪ್ರಸಂಗವೇ ನಿದರ್ಶನ. ಆದರೆ ಈವರೆಗಿನ ಬಹುತೇಕ ಭಾರತೀಯ ಮಹಿಳಾ ಚಳುವಳಿಗೆ ಅಂಬೇಡ್ಕರ್ ಅವರ ಸ್ತ್ರೀ ಸಂವೇದನೆಯ ಮಹತ್ವ ಅರ್ಥ ವಾಗದಿರುವುದು ವಿಪರ್ಯಾಸ. "ಭೂ ರಾಷ್ಟ್ರೀಕರಣ; ಸಹಕಾರ ಕೃಷಿ ಪದ್ಧತಿ; ಜಾತಿ–ಅಸ್ಪೃಶ್ಯತೆಯ ನಿರ್ಮೂಲನೆಗಾಗಿ ಅಂತರ್‌ಜಾತಿ ವಿವಾಹ; ಸಂಪತ್ತಿನ ಸಮಾನ ಹಂಚಿಕೆ; ಆಸ್ತಿ ಮಿತಿ ಕಾಯಿದೆ; ಧಾರ್ಮಿಕ ಸ್ವಾತಂತ್ರ್ಯ; ಮೀಸಲಾತಿ ಮೂಲಕ ಸಾಮಾಜಿಕ ನ್ಯಾಯ; ಕಾರ್ಮಿಕರ ಸಂಘಟನೆ – ಎಲ್ಲ ಸಮುದಾಯಗಳಿಗೂ ರಾಜಕಾರಣದಲ್ಲಿ ಸಮಾನ ಆದ್ಯತೆ; ಶೋಷಣೆರಹಿತ ಸಮಸಮಾಜದ ಅಸ್ತಿತ್ವಕ್ಕಾಗಿ ಶೋಷಿತರ ಕೈಗೆ ರಾಜ್ಯಾಧಿಕಾರ; ಸರ್ವರಿಗೂ ಸಮಾನ ಶಿಕ್ಷಣದ ಅವಶ್ಯಕತೆ" – ಮುಂತಾದುವನ್ನು ಕುರಿತ ಅಂಬೇಡ್ಕರ್ ಅವರ ಚಿಂತನೆಗಳ ತಲಸ್ಪರ್ಶಿ ಅಧ್ಯಯನ ಹಾಗೂ ಅನುಷ್ಠಾನದ ಅನಿವಾರ್ಯತೆ ಇದೆ. ಆ ಮೂಲಕ ಇಂದು ನಮ್ಮನ್ನು ಕಾಡುತ್ತಿರುವ ಹಲವು ಜ್ವಲಂತ ಸಮಸ್ಯೆಗಳಿಗೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬಹುದಾಗಿದೆ. ಇದರೊಟ್ಟಿಗೆ ಶೋಷಿತರ ಪಾಲಿಗೆ ಮೋಸದ, ಕರಾಳತೆಯ ಸಂಕೇತವಾದ 'ಪೂನಾ ಒಪ್ಪಂದ'ದ ಮರುವಿಮರ್ಶೆಯ ಅಗತ್ಯವಿದೆ. ಬಹುಶಃ ಇವತ್ತಿನ ದಲಿತರ ಸ್ವಾಭಿಮಾನರಹಿತ, ಅತಂತ್ರ ಜೀತರಾಜಕಾರಣದ ಸ್ಥಿತಿಗೆ ಪೂನಾ ಒಪ್ಪಂದ ಕಾರಣ ಎಂಬುದನ್ನು ಅಷ್ಟು ಸುಲಭವಾಗಿ ನಿರ್ಲಕ್ಷಿಸಲು ಸಾಧ್ಯವಿಲ್ಲ. ಈ ಚರ್ಚೆಯ ಮೂಲಕವೇ ಭಾರತೀಯ ದಲಿತರ ರಾಜಕಾರಣದ ದಿಕ್ಕು ದೆಸೆಗಳನ್ನು ಸ್ಪಷ್ಟವಾಗಿ ಕಂಡುಕೊಳ್ಳಬೇಕಿದೆ.

ಬುದ್ಧನನ್ನು ಮರಳಿ ಭಾರತಕ್ಕೆ ಕರೆತಂದ ಅಂಬೇಡ್ಕರ್ ಅವರ ಆಮೂಲಾಗ್ರ ಚಿಂತನೆ ಬೌದ್ಧ ನೆಲೆಯದ್ದಾಗಿದೆ. ಕರುಣೆ, ಮೈತ್ರಿ, ಸಮತೆಯೇ ಮೈವೆತ್ತ ನಮ್ಮ 'ಭಾರತ ಸಂವಿಧಾನ' ಇದಕ್ಕೆ ಸೂರ್ಯಸತ್ಯ ನಿದರ್ಶನವಾಗಿದೆ. ಎಲ್ಲಾ ಜಾತಿ ಜನವರ್ಗಗಳ ಏಳ್ಗೆಯ ಬಗ್ಗೆ ದೂರದೃಷ್ಟಿಯ ವಿವೇಚನೆ ಇದ್ದ ಬಹುದೊಡ್ಡ ದಾರ್ಶನಿಕ ಚಿಂತಕ ಅಂಬೇಡ್ಕರ್ ಎಂಬುದು ಇದರಿಂದ ಸಾಬೀತಾಗುತ್ತದೆ. ಆದರೆ 'ಸಂವಿಧಾನ' ದೇಶದ ದಲಿತರಿಗಷ್ಟೇ ಮೀಸಲಾದದ್ದು ಎಂಬ ಅಪಾಯಕಾರಿ ಧೋರಣೆ ಗಳನ್ನು ಬಿತ್ತಲಾಗುತ್ತಿದೆ. ಜೊತೆಗೆ ಮನುವಾದಿಗಳು, ಹೇಗಾದರೂ ಮಾಡಿ ಸಂವಿಧಾನವನ್ನು ನಾಶಮಾಡಿ ಅದರ ಸ್ಥಾನದಲ್ಲಿ ಭಗವದ್ಗೀತೆ ಅಥವಾ ಮನುಸ್ಮೃತಿಯನ್ನು ಪ್ರತಿಷ್ಠಾಪಿಸಬೇಕೆಂದು ಹೊಂಚು ಹಾಕುತ್ತಿವೆ. ಇದಕ್ಕೆ ಪೂರಕವೆಂಬಂತೆ ಭಗವದ್ಗೀತೆಯನ್ನು ಶಾಲಾ, ಕಾಲೇಜುಗಳಲ್ಲಿ ಪಠ್ಯ ಮಾಡುವ ಕುತಂತ್ರ ನಡೆಯುತ್ತಿದೆ. "ಭಾರತದ ಪ್ರಜೆಗಳಾದ ನಾವು ಭಾರತವನ್ನು ಒಂದು ಸಾರ್ವಭೌಮ, ಸಮಾಜವಾದಿ, ಸರ್ವಧರ್ಮ ಸಮಭಾವದ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ; ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವಿಚಾರ ಅಭಿವ್ಯಕ್ತಿ, ವಿಶ್ವಾಸ, ಧರ್ಮಶ್ರದ್ಧೆ ಮತ್ತು ಉಪಾಸನ ಸ್ವಾತಂತ್ರ್ಯ; ಸ್ಥಾನಮಾನ ಹಾಗೂ ಅವಕಾಶ ಸಮಾನತೆಯು ದೊರೆಯುವಂತೆ ಮಾಡಲು ಮತ್ತು ವ್ಯಕ್ತಿ ಗೌರವ, ರಾಷ್ಟ್ರದ ಏಕತೆ ಹಾಗೂ ಅಖಂಡತೆಯನ್ನು ಸುನಿಶ್ಚಿತಗೊಳಿಸಿ ಅವರಲ್ಲಿ ಭ್ರಾತೃತ್ವ ಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ" ಎಂಬ ಅಂಬೇಡ್ಕರ್ ಬರೆದಿರುವ ಸಂವಿಧಾನದ 'ಪ್ರಸ್ತಾವನೆ'ಯ ಈ ಮಾತುಗಳು ಬುದ್ಧನ ಆಶಯವನ್ನು ಸಾಕ್ಷಾತ್ಕರಿಸುತ್ತವೆ. ಇದನ್ನು ಸಾಕಾರಗೊಳಿಸಿಕೊಂಡಾಗ ಮಾತ್ರ ಜಾತಿವಾದಿ, ಮತಾಂಧ, ಅಸಮಾನ ಭಾರತವು, ಜಾತ್ಯತೀತ, ಸರ್ವಧರ್ಮ ಸಮನ್ವಯ ಪ್ರಜಾಪ್ರಭುತ್ವ ರಾಷ್ಟ್ರವಾಗಲಿಕ್ಕೆ ಸಾಧ್ಯ. ತಾಯ್ತನದ ದಲಿತತತ್ತ್ವಕ್ಕೆ ಜಾತ್ಯತೀತ ಮೌಲ್ಯವನ್ನು ಅರಗಿಸಿಕೊಳ್ಳುವ ಅನುಷ್ಠಾನ ಗೊಳಿಸುವ ಜೀವಪರ ತುಡಿತವಿರುವುದನ್ನು ಅಂಬೇಡ್ಕರ್ ತಮ್ಮ ಬದುಕು ಮತ್ತು ಬರಹದ ಮೂಲಕ ಸಾಬೀತು ಪಡಿಸಿದ್ದಾರೆ. ಈ ಕಾರಣಕ್ಕಾಗಿ 'ಅಂಬೇಡ್ಕರ್ ಸಂಸ್ಮರಣೆ' ಅರಿವಿನೆಚ್ಚರದ, ಅನುಷ್ಠಾನದ ಬುದ್ಧಪೂರ್ಣಿಮೆಯಾಗ ಬೇಕಿದೆ. ಆ ಮೂಲಕ ಅಂಬೇಡ್ಕರ್ ಕನಸುಕಂಡಿದ್ದ ಸಂಪೂರ್ಣ 'ಬುದ್ಧ ಭಾರತ'ವನ್ನು ಜಾತ್ಯತೀತ ನೆಲೆಗಟ್ಟಿನ ಮೇಲೆ ಕಟ್ಟಬಹುದು.

**ಪೂನಾ ಒಪ್ಪಂದ**

ದಲಿತರ ಬದುಕಿನ ಕರಾಳ ಕಪ್ಪು ಚುಕ್ಕೆಯಾದ 'ಪೂನಾ ಒಪ್ಪಂದ'ವನ್ನು ಕುರಿತ ಚರ್ಚೆಯು ಒಂದರ್ಥದಲ್ಲಿ ಭಾರತೀಯ ದಲಿತ ರಾಜಕಾರಣವನ್ನು ಕುರಿತ "ಆತ್ಮಾವಲೋಕನ"ದ ಸಂಗತಿಯಾಗಿದೆ.

ಜೊತೆಗೆ, ಪ್ರಸ್ತುತ ದಲಿತರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಸ್ಮಿತೆಗಳ ಬಗ್ಗೆ ಕೂಡ ಗಂಭೀರವಾಗಿ ಚಿಂತಿಸಬೇಕಾಗಿದೆ. ಪೂನಾ ಒಪ್ಪಂದವನ್ನು ಕುರಿತ ಚರ್ಚೆ ಕೇವಲ ಔಪಚಾರಿಕವಾಗದೆ ಪ್ರಸ್ತುತ ದಲಿತ ರಾಜಕಾರಣದ ಸಮಸ್ಯೆಗಳೇನು ? ದಲಿತ ರಾಜಕಾರಣವನ್ನು ಯಾವ ನೆಲೆಯಲ್ಲಿ ಪುನರ್ ನಿರ್ಮಿಸಬೇಕು ? ದಲಿತ ರಾಜಕಾರಣಿಗಳ ಸಮುದಾಯಬದ್ಧ ಕಾಳಜಿ, ಜವಾಬ್ದಾರಿಗಳೇನು ? ದಲಿತ ರಾಜಕಾರಣಿಗಳು ಬೇರೆ ಬೇರೆ ಪಕ್ಷಗಳಲ್ಲಿ ಇದ್ದಾಗ್ಯೂ, ಅವರನ್ನು ಶೋಷಿತ ಸಮುದಾಯಗಳ ಹಿತದೃಷ್ಟಿಯಿಂದ ಸಂಘಟಿಸುವುದು ಹೇಗೆ? ದಲಿತರ ರಾಷ್ಟ್ರಮಟ್ಟದ ರಾಜಕೀಯ ಪಕ್ಷವನ್ನು ಪ್ರಜಾಸತ್ತಾತ್ಮಕವಾಗಿ ಬಲಿಷ್ಠಗೊಳಿಸುವುದು ಹೇಗೆ ? ಎಲ್ಲಾ ಜಾತಿ ಸಮುದಾಯಗಳಲ್ಲಿನ ಶೋಷಿತರನ್ನು ಈ ಪಕ್ಷದ ಪರಿಧಿಯಲ್ಲಿ ಒಗ್ಗೂಡಿಸುವುದು ಹೇಗೆ ? ಎಂಬುದು ಈ ಚರ್ಚೆಯ ಸಂದರ್ಭದ ಪೂರಕ ವಿಚಾರಗಳಾಗಬೇಕು.

೧೯೦೯ರಲ್ಲಿ ಜಾರಿಯಾದ "ಇಂಡಿಯನ್ ಕೌನ್ಸಿಲ್ಸ್" ಕಾಯಿದೆ ಪ್ರಕಾರ ಮೊಟ್ಟಮೊದಲ ಬಾರಿಗೆ ಪ್ರಾಂತೀಯ ಶಾಸಕಾಂಗ ಪರಿಷತ್ತುಗಳಿಗೆ ಓಟು ಚಲಾಯಿಸಿ, ಚುನಾವಣೆಗಳ ಮೂಲಕ ಕೆಲವು ಭಾರತೀಯರನ್ನು ಆರಿಸುವ ಪದ್ಧತಿ ಜಾರಿಯಾಯಿತು. ಈ ಕಾಯಿದೆ ಪ್ರಕಾರ, ಓಟು ಚಲಾಯಿಸುವ ಹಕ್ಕಿದ್ದದ್ದು "ಶ್ರೀಮಂತರು, ಆಸ್ತಿವಂತರು, ಜಮೀನ್ದಾರರು, ಬಿ.ಎ., ಎಂ.ಎ. ಕಲಿತ ಪದವೀಧರರಿಗೆ" ಮಾತ್ರ. ೧೯೧೯ರಲ್ಲಿ ಜಾರಿಯಾದ 'ಗೌರ್ನಮೆಂಟ್ ಆಫ್ ಇಂಡಿಯಾ ಕಾಯಿದೆ' ಪ್ರಕಾರ ರಾಜ್ಯ ಪರಿಷತ್ತಿನ ಒಂದೆರಡು ಸ್ಥಾನಗಳಿಗೆ ದಲಿತರ ಪರವಾಗಿ ಕೆಲವರನ್ನು ನಾಮಕರಣ ಮಾಡಲಾಗುತ್ತಿತ್ತು. ಆಗ ತಾವೇ ದಲಿತರೆಂದು ಕೆಲವು ಸವರ್ಣೀಯರು ನಾಮಕರಣಗೊಳ್ಳುತ್ತಿದ್ದದ್ದುಂಟು. ಆದ ಕಾರಣ ದಲಿತರು ಇದನ್ನು ವಿರೋಧಿಸಿದರು. ಇದರ ಪರಿಣಾಮ ೧೯೨೮ರಲ್ಲಿ ಸರ್ ಜಾನ್ ಸೈಮನ್ ಅವರ ನೇತೃತ್ವದಲ್ಲಿ ಒಂದು ಆಯೋಗ ಭಾರತಕ್ಕೆ ಬಂದಿತು. ಆಗ ಕೆಲವು ಜಾತಿವಾದಿ ಸವರ್ಣೀಯರು ಈ ಸೈಮನ್ ಆಯೋಗವು ಭಾರತಕ್ಕೆ ಬರಬಾರದೆಂದು ವಿರೋಧಿಸಿದ್ದುಂಟು. ಎಲ್ಲ ವಿರೋಧಗಳ ನಡುವೆಯೂ ಈ "ಸೈಮನ್ ಆಯೋಗವು" ಭಾರತೀಯ ಸಮಾಜವನ್ನು ಅಧ್ಯಯನ ಮಾಡಿ ತನ್ನ ವರದಿಯನ್ನು, ಅಂದಿನ ಬ್ರಿಟಿಷ್ ಪ್ರಧಾನಿ "ರ್‍ಯಾಮ್ ಸೆ ಮ್ಯಾಕ್ ಡೋನಾಲ್ಡ್" ಅವರಿಗೆ ಒಪ್ಪಿಸಿತು. ಸೈಮನ್ ಆಯೋಗದ ವರದಿ ಮೇರೆಗೆ ಪ್ರಧಾನಿ ರ್‍ಯಾಮ್ ಸೆ ಮ್ಯಾಕ್ ಡೊನಾಲ್ಡ್ ಅವರು ಭಾರತದ ಎಲ್ಲಾ ಪ್ರತಿನಿಧಿಗಳನ್ನು ಬ್ರಿಟಿಷ್ ಸರ್ಕಾರದೊಂದಿಗೆ ಚರ್ಚೆ ನಡೆಸಲು ಇಂಗ್ಲೆಂಡಿಗೆ ಆಹ್ವಾನಿಸಿದರು. ಈ ಚರ್ಚೆಯ ಸಭೆಯನ್ನೇ 'ದುಂಡುಮೇಜಿನ ಸಭೆ' ಎನ್ನುತ್ತಾರೆ.

೧೯೩೦ ನವೆಂಬರ್, ೧೨ರಂದು ಇಂಗ್ಲೆಂಡಿನ ೫ನೇ ದೊರೆ ಜಾರ್ಜ್ ಮೊದಲ ದುಂಡುಮೇಜಿನ ಸಭೆಯನ್ನು ಉದ್ಘಾಟಿಸಿದರು. ಮೊದಲ ಬಾರಿಗೆ ದುಂಡುಮೇಜಿನ ಸಭೆಯಲ್ಲಿ ಭಾಗವಹಿಸಿದವರು : ಅಸ್ಪೃಶ್ಯರ ಪರವಾಗಿ ಅಂಬೇಡ್ಕರ್, ರಾವ್ ಬಹದ್ದೂರ್ ಶ್ರೀನಿವಾಸನ್; ಮುಸ್ಲಿಂ ಪರವಾಗಿ ಆಗಾ ಖಾನ್; ಸಿಖ್ಖರ ಪರವಾಗಿ ಸರ್ದಾರ್ ಉಜ್ಜಲ್ ಸಿಂಗ್; ಭಾರತೀಯ ಕ್ರೈಸ್ತರ ಪರವಾಗಿ ರಾವ್ ಬಹದ್ದೂರ್ ಪನ್ನೀರ ಸೆಲ್ವಂ; ಆಂಗ್ಲೋ ಇಂಡಿಯನ್ನರ ಪರವಾಗಿ ಸರ್ ಹೆನ್ರಿ ಗಿಡ್ನೆ; ಯೂರೋಪಿಯನ್ ಕ್ರೈಸ್ತರ ಪರ ಸರ್ ಹ್ಯೂಬರ್ಟ್ ಕಾರ್ ಭಾಗವಹಿಸಿದ್ದರು. ಈ ಸಭೆಯನ್ನು ಕಾಂಗ್ರೆಸ್ ಬಹಿಷ್ಕರಿಸಿತು. ಕಾರಣ, ಸೈಮನ್ ಆಯೋಗ ನಮಗೆ ಮಾನ್ಯತೆ ನೀಡಿಲ್ಲವೆಂದು. ಹಿಂದುಳಿದ ಜಾತಿಗಳ ಪರವಾಗಿ ಯಾರೂ ಭಾಗವಹಿಸಿರಲಿಲ್ಲ. ಕಾರಣ ಹಿಂದುಳಿದ ಜಾತಿಗಳು ಆ ಹೊತ್ತಿಗೆ ರಾಷ್ಟ್ರಮಟ್ಟದಲ್ಲಿ ಸಂಘಟಿತರಾಗಿರಲಿಲ್ಲ. ಜೊತೆಗೆ, ಇವರನ್ನು ಪ್ರತಿನಿಧಿಸುವ ಯಾವೊಬ್ಬ ರಾಷ್ಟ್ರಮಟ್ಟದ ನಾಯಕನೂ ಇರಲಿಲ್ಲ. ಹಿಂದುಳಿದವರು ಅಂಬೇಡ್ಕರ್ ಅವರನ್ನು ಅನುಸರಿಸದ ಹಾಗೆ ಅವರನ್ನು ಗಾಂಧಿ ಮತ್ತು ಕಾಂಗ್ರೆಸಿಗರು ವ್ಯವಸ್ಥಿತವಾಗಿ ತಡೆದಿದ್ದರು.

ಅಂಬೇಡ್ಕರ್ ಇಂಗ್ಲೆಂಡಿಗೆ ದುಂಡುಮೇಜಿನ ಸಭೆಗೆ ತೆರಳುವಾಗ ಅವರಿಗೆ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಲಾಗಿತ್ತು. ಆ ಸಮಾರಂಭದ ಅಧ್ಯಕ್ಷತೆಯನ್ನು ಚಮ್ಮಾರರ ಧುರೀಣ ಎಸ್. ಎನ್. ಶಿವತಾರಕರ್ ವಹಿಸಿದ್ದರು. ಕೆ. ಎ. ಕೇಳುಸ್ಕರ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ದುಂಡುಮೇಜಿನ ಸಭೆಯಲ್ಲಿ ಭಾಗವಹಿಸಿದ್ದ ನಾಯಕರು ತಮ್ಮ ತಮ್ಮ ವರ್ಗಗಳ ಹಿತಾಸಕ್ತಿ ಕುರಿತು ಮಾತನಾಡಿದರೆ, ಅಂಬೇಡ್ಕರ್ ಭಾರತೀಯ ದಲಿತರು, ಅಲ್ಪಸಂಖ್ಯಾತರು ಹಾಗೂ ಹಿಂದುಳಿದ ಜಾತಿಗಳ ಹಕ್ಕು, ಅಧಿಕಾರಗಳ ಪರವಾಗಿ ತೀವ್ರವಾಗಿ ವಾದಿಸಿದರು. ಅಂಬೇಡ್ಕರ್ ಅವರು ಪ್ರಧಾನಿ ರ್‍ಯಾಮ್ ಸೆ ಮ್ಯಾಕ್ ಡೊನಾಲ್ಡ್‌ರವರ ಮುಂದೆ ವಾದ ಮಂಡಿಸುತ್ತಾ : "ಪ್ರಧಾನ ಮಂತ್ರಿಯವರೆ, ನೀವು ಭಾರತೀಯರಿಗೆ ಅಧಿಕಾರ ಹಸ್ತಾಂತರ ಮಾಡುವುದಾದರೆ ಆ ಅಧಿಕಾರವು ಕೆಲವು ಮಂದಿ ಸರ್ವಾಧಿಕಾರಿಗಳ ಕೈಗೋ ಅಥವಾ ಸಂಚುಗಾರರ ಕೈಗೋ ಜಾರಿಬೀಳದಿರಲಿ. ಅವರು ಹಿಂದೂಗಳಾಗಿರಲಿ ಅಥವಾ ಮುಸ್ಲಿಮರಾಗಿರಲಿ ಯಾರೊಬ್ಬರ ಕೈಗೂ ಇಡೀ ಅಧಿಕಾರವು ಜಾರಿಬೀಳಕೊಡದು. ಅದಕ್ಕಾಗಿ ನನ್ನ ಸಲಹೆಯೆಂದರೆ ಈ ದೇಶದ ಅಧಿಕಾರವನ್ನು ಎಲ್ಲಾ ಜನಾಂಗಗಳು ತಮ್ಮ ತಮ್ಮ ಜನಸಂಖ್ಯೆಗೆ ಅನುಸಾರವಾಗಿ ಹಂಚಿಕೊಳ್ಳುವಂತಾಗಲಿ" ಎಂದರು. ಜೊತೆಗೆ ಅಂಬೇಡ್ಕರ್ ಅವರು ಬ್ರಿಟಿಷ್ ಪ್ರಧಾನಿಯ ಮುಂದೆ ಈ ಕೆಲವು ಮುಖ್ಯ ಬೇಡಿಕೆಗಳನ್ನು ಮಂಡಿಸಿದರು :

೧. ೨೧ ವರ್ಷ ತುಂಬಿದ ಪ್ರತಿಯೊಬ್ಬರಿಗೂ ಓಟು ಚಲಾಯಿಸುವ ಹಕ್ಕು ಇರಬೇಕು.
೨. ಈಗಾಗಲೇ ಮುಸ್ಲಿಮರಿಗೆ ಕೊಟ್ಟಿರುವ ಹಾಗೆ, ಅಸ್ಪೃಶ್ಯ ನಾಯಕರನ್ನು ಕೇವಲ ಅಸ್ಪೃಶ್ಯ ಮತದಾರರು ಮಾತ್ರ 'ಓಟು' ಹಾಕಿ ಶಾಸಕರನ್ನಾಗಿ ಆರಿಸುವ "ಪ್ರತ್ಯೇಕ ಮತದಾನ ಪದ್ಧತಿ"ಯ ಹಕ್ಕು ನೀಡಬೇಕು.
೩. ಬಹುಜನ ಸಮಾಜದ ಪ್ರತಿಯೊಂದು ಜಾತಿ – ಜನಾಂಗಕ್ಕೂ ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಮಂತ್ರಿಮಂಡಲದಲ್ಲಿ ಮಂತ್ರಿ ಸ್ಥಾನ ನೀಡಬೇಕು ಮತ್ತು ಸರ್ಕಾರಿ ನೌಕರಿಗಳಲ್ಲಿ ಸಹ ಅವಕಾಶ ನೀಡಬೇಕು.
೪. ಶೋಷಿತ ವರ್ಗಗಳಿಗೆ ನಾಗರಿಕ ಹಕ್ಕು ಹಾಗೂ ಸಾರ್ವಜನಿಕ ಕೆರೆ, ದೇವಸ್ಥಾನಗಳಿಗೆ ಮುಕ್ತ ಪ್ರವೇಶ ದೊರೆಯುವಂತಾಗಬೇಕು.
೫. ದಲಿತರ ವಿರುದ್ಧ ವಿಧಿಸುವ ಸಾಮಾಜಿಕ ಬಹಿಷ್ಕಾರವನ್ನು ದಂಡನಾರ್ಹ ಅಪರಾಧವೆಂದು ಪರಿಗಣಿಸಬೇಕು.

– ಬ್ರಿಟಿಷ್ ಸರ್ಕಾರ ಅಂಬೇಡ್ಕರ್ ಅವರ ಈ ಎಲ್ಲಾ ಬೇಡಿಕೆಗಳನ್ನು ಬೇಷರತ್ತಾಗಿ ಒಪ್ಪಿಕೊಂಡು, ಮುಂದಿನ ಸಂವಿಧಾನದಲ್ಲಿ ಈ ಎಲ್ಲಾ ವಿಚಾರಗಳನ್ನು ಅಳವಡಿಸಲು ಸಮ್ಮತಿಸಿತು.

ಮೊದಲನೆ ದುಂಡುಮೇಜಿನ ಸಭೆಯಲ್ಲಿ ಭಾಗವಹಿಸದ ಗಾಂಧೀಜಿಯವರು ೧೯೩೧ ಸೆಪ್ಟೆಂಬರ್, ೧೭ರಂದು ಆರಂಭವಾದ ೨ನೇ ದುಂಡುಮೇಜಿನ



ಸಭೆಯಲ್ಲಿ ಭಾಗವಹಿಸಿ, ಅಂಬೇಡ್ಕರ್ ಅವರು ಮೊದಲನೆ ದುಂಡುಮೇಜಿನ ಸಭೆಯಲ್ಲಿ ಮಂಡಿಸಿದ್ದ ಬೇಡಿಕೆಗಳನ್ನು ವಿರೋಧಿಸಿದರು. ಬಹಳ ಮುಖ್ಯವಾಗಿ ಅವರು ವಿರೋಧಿಸಿದ್ದು : "ದಲಿತರಿಗೆ ಪ್ರತ್ಯೇಕ ಮತದಾನದ ಹಕ್ಕು ಬೇಡ; ಮುಸ್ಲಿಂ ಮತ್ತು ಸಿಖ್ಖರಿಗೆ ಬೇಕಾದರೆ ಪ್ರತ್ಯೇಕ ಮತದಾನದ ಹಕ್ಕನ್ನು ನೀಡಿ; ದಲಿತರನ್ನು ಒಳಗೊಂಡಂತೆ ಇತರ ಎಲ್ಲರಿಗೂ 'ಓಟು' ಚಲಾಯಿಸುವ ಹಕ್ಕು ಬೇಡ" ಎಂದು. ಮುಂದುವರಿದು ಗಾಂಧೀಜಿಯವರು : "ಅಂಬೇಡ್ಕರ್ ವಾದ ಸರಿಯಲ್ಲ. ಇದರಿಂದಾಗಿ ಹಿಂದೂ ಧರ್ಮ ಹೋಳಾಗುತ್ತದೆ. ಅಸ್ಪೃಶ್ಯರು ಇಚ್ಛಿಸಿದಲ್ಲಿ ಇಸ್ಲಾಂ ಅಥವಾ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳಲಿ. ನನ್ನದೇನೂ ಆಕ್ಷೇಪಣೆ ಇಲ್ಲ. ಆದರೆ ಅವರ ಪ್ರತ್ಯೇಕ ಮತದಾನದ ಹಕ್ಕಿನ ವಿರುದ್ಧ ನಾನು ನನ್ನ ಜೀವವನ್ನೇ ಪಣವಿಟ್ಟು ಹೋರಾಡುತ್ತೇನೆ" ಎನ್ನುತ್ತಾರೆ. ಗಾಂಧೀಜಿಯವರ ವರ್ತನೆಯನ್ನು ಮನಗಂಡ ಅಂಬೇಡ್ಕರ್ : "ಅಸ್ಪೃಶ್ಯರ ಮೊದಲನೆಯ ಶತ್ರು ಗಾಂಧಿ. ಅಸ್ಪೃಶ್ಯರ ರಾಜಕೀಯ ಹಕ್ಕುಗಳನ್ನು ವಿರೋಧಿಸಲೆಂದೇ ಈತ ದುಂಡುಮೇಜಿನ ಸಭೆಗೆ ಬಂದಿದ್ದಾರೆ" ಎಂದು ಹೇಳುತ್ತಾರೆ. ದಲಿತರಿಗೆ ರಾಜಕೀಯ ಸ್ವಾತಂತ್ರ್ಯ (ಪ್ರತ್ಯೇಕ ಮತದಾನದ ಹಕ್ಕು) ನೀಡುವುದರಿಂದ ಹಿಂದೂ ಧರ್ಮ ಹೋಳಾಗುತ್ತದೆ ಎಂದು ಗಾಂಧೀಜಿ ಹೇಳುವುದಾದರೆ, ಯಾವ ಅರ್ಥದಲ್ಲಿ ದಲಿತರು ಹಿಂದೂಗಳು ? ದಲಿತರು ಹಿಂದೂಗಳೆ ಆಗಿದ್ದರೆ, ಅಂಬೇಡ್ಕರ್ ಅವರ ನಾಯಕತ್ವದಲ್ಲಿ ಮಹಾಡ್ ನಗರದ ಚೌಡರ್ ಕೆರೆ ನೀರು (೧೯೨೭) ಮುಟ್ಟಲಿಕ್ಕೆ ಬಂದಾಗ ಏಕೆ ಬಿಡಲಿಲ್ಲ ? ನಾಸಿಕ್‌ನ ಕಾಳರಾಮ ದೇವಸ್ಥಾನ (೧೯೩೦) ಪ್ರವೇಶಿಸಲು ಬಂದಾಗ ಏಕೆ ಪ್ರವೇಶ ನೀಡಲಿಲ್ಲ ? ಎಂದು ನಾವು ಈಗ ಪ್ರಶ್ನಿಸಬೇಕಾಗುತ್ತದೆ. ಬ್ರಿಟಿಷರಿಗೆ ಗಾಂಧಿ : "ಅಸ್ಪೃಶ್ಯರ ನಿಜವಾದ ನಾಯಕ ನಾನು. ಅಂಬೇಡ್ಕರ್ ಅಲ್ಲ" ಎಂದಾಗ ಅಂಬೇಡ್ಕರ್ ಅವರು, "ಹಾಗಂತ ನಮ್ಮ ದೇಶದ ಅಸ್ಪೃಶ್ಯರು ಹೇಳಲಿ" ಎನ್ನುತ್ತಾರೆ. ಆಗ ಬ್ರಿಟಿಷ್ ಸರ್ಕಾರ, ಪರಸ್ಪರ ನಾಯಕರಲ್ಲಿ ಅಸ್ಪೃಶ್ಯ ನಾಯಕರು ಯಾರೆಂದು ಭಾರತೀಯರಿಂದ ಪತ್ರ ಸಾಕ್ಷಿ ಕೇಳುತ್ತಾರೆ. ಭಾರತದಿಂದ ಗಾಂಧಿ ಪರವಾಗಿ ೧೦೦ ಪತ್ರಗಳು ಕೇವಲ ಪೂನಾದ ಚಿತ್‌ಪಾವನ್ ಬ್ರಾಹ್ಮಣರಿಂದ ಮಾತ್ರ ಬಂದರೆ, ಅಂಬೇಡ್ಕರ್ ಅವರಿಗೆ ದೇಶದ ಬೇರೆಬೇರೆ ರಾಜ್ಯಗಳಿಂದ ೬೦ ಪತ್ರಗಳು ಬರುತ್ತವೆ (ಬೆಂಗಳೂರು ಮತ್ತು ಕೋಲಾರದಿಂದಲೂ ಪತ್ರಗಳನ್ನು ಬರೆಯಲಾಗಿತ್ತು). ಈ ಪತ್ರವನ್ನು ಸಾಕ್ಷಿಯಾಗಿ ಇಟ್ಟುಕೊಂಡು ಬ್ರಿಟಿಷ್ ಸರ್ಕಾರ ಅಂಬೇಡ್ಕರ್ ಅವರನ್ನು ಅಸ್ಪೃಶ್ಯರ ನಾಯಕರೆಂದು ಒಪ್ಪುತ್ತದೆ.

ಪ್ರೊ|| ಕಾಳೇಗೌಡ ನಾಗವಾರ ಅವರು ಒಮ್ಮೆ ಗಾಂಧೀಜಿ ಮತ್ತು ಅಂಬೇಡ್ಕರ್ ಅವರನ್ನು ಕುರಿತು ಹೇಳಿದ ವಿಚಾರ ಯಾವತ್ತಿಗೂ ಸಹ ತುಂಬ ಅರ್ಥಪೂರ್ಣ ಎನಿಸುತ್ತದೆ. ಅದು ಹೀಗಿದೆ : "ಒಮ್ಮೆ ಗಾಂಧೀಜಿಯವರು ಅಂಬೇಡ್ಕರ್ ಅವರನ್ನು ಭೇಟಿ ಮಾಡಿದಾಗ, "ಅಂಬೇಡ್ಕರ್ ಜೀ, ನನ್ನ ಬಗ್ಗೆ ನಿಮಗೇಕೆ ಅನುಮಾನ, ಪ್ರಶ್ನೆ, ತಕರಾರು ? ನನಗೂ ಕೂಡ ಅಸ್ಪೃಶ್ಯರ ಬಗೆಗೆ ಪ್ರೀತಿ, ಕಾಳಜಿ ಇದೆ. ನಾನು ಕೂಡ ಅವರ ಪರವಾಗಿ ಕೆಲಸ ಮಾಡಿದ್ದೇನೆ. ನನ್ನನ್ನು ನಂಬಿ. ನಾನು ದಲಿತರ ದತ್ತು ಮಗ." ಎಂದರಂತೆ. ಗಾಂಧೀಜಿಯವರ ಮಾತಿಗೆ ತಕ್ಷಣ ಪ್ರತಿಕ್ರಿಯಿಸಿದ ಅಂಬೇಡ್ಕರ್, "ಸಮಸ್ಯೆ ಇರೋದು ಇಲ್ಲೆ ಗಾಂಧಿ ಅವರೆ. ನೀವು ದಲಿತರ ದತ್ತು ಮಗ. ನಾನು ದಲಿತರ ಮನೆಯ ಮಗ. ಮನೆಯ ಮಗನಿಗೆ ಗೊತ್ತಿರುವ ಮನೆಯ ಹಸಿವು, ಬಡತನ, ಅವಮಾನ, ಸಂಕಟಗಳು ದತ್ತು ಮಗನಿಗೆ ಗೊತ್ತಿರುವುದಿಲ್ಲ. ಯಾವತ್ತೂ ದತ್ತು ಮಗ ಹೊರಗಿನವನೆ. ನೀವು ನಮ್ಮ ನೋವು, ಅವಮಾನಗಳನ್ನು ಕೇಳಿರಬಹುದು, ಕಂಡಿರಬಹುದು. ಆದರೆ ನಾನು ಆ ಎಲ್ಲವನ್ನು ಅನುಭವಿಸಿರುವವನು. ಇದೇ ನನಗೂ ನಿಮಗೂ ಇರುವ ವ್ಯತ್ಯಾಸ." ಎಂದು ಹೇಳುತ್ತಾರೆ. ಈ ಪ್ರಸಂಗವು ೧೨ನೇ ಶತಮಾನದ ಬಸವಣ್ಣನನ್ನು ನೆನಪು ಮಾಡುತ್ತದೆ. ಆಧುನಿಕ ಶಿಕ್ಷಣ ಪಡೆದ, ವಿದೇಶದಲ್ಲಿ ಓದಿದ ಇಪ್ಪತ್ತನೇ ಶತಮಾನದ ಗಾಂಧೀಜಿ 'ದಲಿತರ ದತ್ತು ಮಗ' ಎನ್ನುತ್ತಾರೆ. ಆದರೆ ಹನ್ನೆರಡನೇ ಶತಮಾನದ ಬಸವಣ್ಣ 'ಮಾದಾರ ಚೆನ್ನಯ್ಯನ ಮನೆಯ ಮಗ' ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಗಾಂಧೀಜಿ ಅಪ್ರಸ್ತುತರಾದರೆ, ಬಸವಣ್ಣ ಎಲ್ಲ ಕಾಲಕ್ಕೂ ಪ್ರಸ್ತುತವಾಗುತ್ತಾರೆ. ಅಂಬೇಡ್ಕರ್ ಅವರು ೧೯೩೧ರಲ್ಲಿ ಮುಂಬೈನಲ್ಲಿ ಗಾಂಧೀಜಿಯವರನ್ನು ಭೇಟಿ ಮಾಡಿದಾಗ, "ಈ ನಾಡನ್ನು ನಾನು ನನ್ನ ಮಾತೃಭೂಮಿಯೆಂದು ಹೇಗೆ ಕರೆಯಲಿ ? ನಮ್ಮನ್ನು ನಾಯಿ, ನರಿಗಳಿಗಿಂತಲೂ ಕನಿಷ್ಠವಾಗಿ ಕಾಣುವ, ಕುಡಿಯಲು ನೀರು ಕೊಡಲಾರದ ಈ ಧರ್ಮವನ್ನು ನಮ್ಮದೆಂದು ಹೇಗೆ



ಹೇಳಲಿ ?" ಎಂದು ತಾತ್ವಿಕವಾಗಿ ಪ್ರಶ್ನಿಸುತ್ತಾರೆ. ಸಾತ್ವಿಕ ಸಿಟ್ಟಿನಿಂದ ಹೀಗೆ ಹೇಳಿದ ಅಂಬೇಡ್ಕರ್ ಮುಂದೆ ತಮ್ಮ ಪ್ರಾಮಾಣಿಕ ಭಾರತೀಯತೆಯನ್ನು ಸಾಬೀತು ಪಡಿಸುತ್ತಾರೆ. ಅದಕ್ಕೆ ಸಂವಿಧಾನವೇ ಸಾಕ್ಷಿ. ಸ್ವತಃ ಗಾಂಧೀಜಿಯವರೆ ಅಂಬೇಡ್ಕರ್ ಅವರನ್ನು ಮೊದಲ ಬಾರಿ ಭೇಟಿಯಾಗಿ ಚರ್ಚಿಸಿದ ಪ್ರಸಂಗವನ್ನು ಕುರಿತು ತಮ್ಮ ಕಾರ್ಯದರ್ಶಿ ಮಹಾದೇವ ದೇಸಾಯಿ ಬಳಿ : "ಅಂಬೇಡ್ಕರ್‌ಗಿದ್ದ ದಲಿತ ಪರ ಕಾಳಜಿ ನೋಡಿ, ಈತ ಬ್ರಾಹ್ಮಣನಿರಬೇಕೆಂದು ತಿಳಿದಿದ್ದೆ. ಆ ಕಾರಣ ಅವರೊಂದಿಗೆ ಸಂಯಮರಹಿತವಾಗಿ ಮಾತನಾಡಿದೆ" ಎಂದು ಹೇಳುತ್ತಾರೆ.

ಎರಡನೇ ದುಂಡುಮೇಜಿನ ಸಭೆಯ ತರುವಾಯ ಗಾಂಧೀಜಿಯವರು ಬ್ರಿಟಿಷ್ ಪ್ರಧಾನಿ ರ್‍ಯಾಮ್ ಸೇ ಮ್ಯಾಕ್ ಡೊನಾಲ್ಡ್ ಅವರಿಗೆ ಪತ್ರದ ಮೂಲಕ, "ನೀವು ದಲಿತರಿಗೆ ಪ್ರತ್ಯೇಕ ಮತದಾನದ ಹಕ್ಕನ್ನು ನೀಡಿದರೆ, ನಾನು ಉಪವಾಸ ಮಾಡಿ ಸಾಯುತ್ತೇನೆ" ಎಂದು ಬರೆಯುತ್ತಾರೆ. ಇದನ್ನು ಗಂಭೀರವಾಗಿ ಪರಿಗಣಿಸದ ಬ್ರಿಟಿಷ್ ಪ್ರಧಾನಿ ೧೯೩೨ ಆಗಸ್ಟ್ ೧೭ರಂದು 'ಕೋಮುವಾರು ಆದೇಶ'ವನ್ನು ಪ್ರಕಟಿಸುತ್ತಾರೆ. ಈ ಆದೇಶದ ಪ್ರಕಾರ ದಲಿತರಿಗೆ 'ಪ್ರತ್ಯೇಕ ಮತದಾನದ ಪದ್ಧತಿ'ಗೆ ಬದಲಾಗಿ, 'ವಿಶೇಷ ಮತದಾನ ಪದ್ಧತಿ'ಯ ಹಕ್ಕನ್ನು ನೀಡಲಾಗುತ್ತದೆ. ಈ ವಿಶೇಷ ಮತದಾನ ಪದ್ಧತಿ ಹಕ್ಕಿನನ್ವಯ ದಲಿತರಿಗೆ ಎರಡು ಓಟುಗಳನ್ನು ಚಲಾಯಿಸುವ ಹಕ್ಕನ್ನು ನೀಡಲಾಗುತ್ತದೆ. ಅಂತೆಯೇ ದಲಿತ ಮತದಾರರೇ ಇರುವ ವಿಶೇಷ ಮತಕ್ಷೇತ್ರದಲ್ಲಿ ದಲಿತರು 'ಒಂದನೇ ಓಟಿನಿಂದ ತಮಗೆ ಬೇಕಾದ ತಮ್ಮ ಜಾತಿಯ ನಾಯಕರನ್ನು ಆರಿಸುವುದು ಮತ್ತು ಎರಡನೇ ಓಟಿನಿಂದ ಸಾಮಾನ್ಯ ಮತಕ್ಷೇತ್ರದ ಇತರೆ ಜಾತಿಯ ನಾಯಕರನ್ನು ಆರಿಸುವುದು ಸಾಧ್ಯವಾಗಿತ್ತು.' ಈ ವಿಶೇಷ ಮತದಾನ ಪದ್ಧತಿಯ ಪ್ರಕಾರ ದಲಿತರಿಗೆ ಒಟ್ಟು ೭೮ ಸ್ಥಾನಗಳು ಲಭಿಸಿದವು.

ಗಾಂಧೀಜಿಯವರು ೧೯೩೨ ಸೆಪ್ಟೆಂಬರ್, ೨೦ರಂದು ಪೂನಾದ ಯರವಾಡ ಜೈಲಿನಲ್ಲಿ, ಬ್ರಿಟಿಷ್ ಸರ್ಕಾರ ದಲಿತರಿಗೆ ನೀಡಿದ್ದ ವಿಶೇಷ ಮತದಾನ ಪದ್ಧತಿಯನ್ನು ವಿರೋಧಿಸಿ ಅಮರಣಾಂತರ ಉಪವಾಸ ಆರಂಭಿಸುತ್ತಾರೆ. ಕಾಂಗ್ರೆಸಿಗರು, ಅಂಬೇಡ್ಕರ್ ಅವರ ಮನವೊಲಿಸುವ ಕಾರಣಕ್ಕಾಗಿ ಹಣ–ಅಧಿಕಾರದ ಆಮಿಷ ಒಡ್ಡಿದಾಗ ಅಂಬೇಡ್ಕರ್ ಅವರು : "ನಿಮ್ಮ ಬಳಿ ಇಡೀ ಜಗತ್ತನ್ನೇ ಖರೀದಿ ಮಾಡುವಷ್ಟು ಹಣ ಇರಬಹುದು. ಆದರೆ, ನನ್ನನ್ನು ಖರೀದಿ ಮಾಡಲು ಸಾಧ್ಯವಿಲ್ಲ" ಎಂದು ಹೇಳುತ್ತಾರೆ. ಈ ಸಂಬಂಧ ಕೆಲವರು ಜೀವ ಬೆದರಿಕೆ ಒಡ್ಡಿದಾಗ : "ನಾನು ನನ್ನ ಜನರ ಏಳಿಗೆಗಾಗಿ ಬದುಕಿದ್ದೇನೆ ಮತ್ತು ಅದೇ ಉದ್ದೇಶಕ್ಕಾಗಿ ನಾನು ಸಾಯಲೂ ಸಿದ್ಧ. ಎದುರಿನಲ್ಲಿರುವ ಆ ಕಂಬಕ್ಕೆ ನನ್ನನ್ನು ನೇಣು ಹಾಕಿದರೂ ನಾನು ನಿಮ್ಮ ಒತ್ತಡಕ್ಕೆ ಬಲಿಯಾಗಲಾರೆ." ಎಂದು ಪ್ರತಿಕ್ರಿಯಿಸುತ್ತಾರೆ. ಗಾಂಧೀಜಿಯವರ ಹೆಂಡತಿ ಕಸ್ತೂರಿಬಾಯಿ ಅವರು, "ಬಾಬಾ ಸಾಹೇಬರೆ, ನನ್ನ ಪತಿಯ ಪ್ರಾಣ ಉಳಿಸಿ" ಎಂದು ಕೇಳಿಕೊಂಡಾಗ ಅಂಬೇಡ್ಕರ್,

"ಒಬ್ಬ ಗಾಂಧಿಯ ಜೀವ ಉಳಿಸುವ ಸಲುವಾಗಿ ಏಳು ಕೋಟಿ ದಲಿತರ ಬದುಕನ್ನು ನಿರ್ನಾಮ ಮಾಡಬೇಕೆ ? ದಲಿತರ ನ್ಯಾಯಬದ್ಧ ಹಕ್ಕುಗಳ ವಿರುದ್ಧ ಅನ್ಯಾಯವಾಗಿ ಉಪವಾಸ ಕುಳಿತಿರುವ ನಿಮ್ಮ ಪತಿ ಗಾಂಧಿಯವರಿಗೆ ತಮ್ಮ ಉಪವಾಸ ಕೈಬಿಡುವಂತೆ ನೀವ್ಯಾಕೆ ಹೇಳಬಾರದು ?" ಎಂದು ಪ್ರಶ್ನಿಸುತ್ತಾರೆ.

ಬಾಲಗಂಗಾಧರನಾಥ ತಿಲಕರಂಥವರು, ವಿಶೇಷ ಮತದಾನದ ಹಕ್ಕನ್ನು ಹಿಂಪಡೆಯದಿದ್ದರೆ, ದೇಶಾದ್ಯಂತ ಇರುವ ಅಸ್ಪೃಶ್ಯತೆಯ ಸಮುದಾಯದ ಮೇಲೆ ಹಿಂಸಾತ್ಮಕ ಕೃತ್ಯ ಎಸಗಲಾಗುತ್ತದೆ ಎಂಬ ಬೆದರಿಕೆ ಒಡ್ಡಿದಾಗ, ಅಂಬೇಡ್ಕರ್ ಅವರು ಸಮುದಾಯದ ಹಿತದೃಷ್ಟಿಯಿಂದ ಅನಿವಾರ್ಯವಾಗಿ ವಿಶೇಷ ಮತದಾನದ ಹಕ್ಕನ್ನು ಹಿಂಪಡೆಯಲು ಒಪ್ಪುತ್ತಾರೆ. ಅಂಬೇಡ್ಕರ್ ಅವರು ಒಪ್ಪಂದಕ್ಕೆ ಸಹಿ ಹಾಕುವ ಮೊದಲು ಈ ಕೆಳಕಂಡ ಕೆಲವು ಷರತ್ತು ಹಾಗೂ ನಿರ್ಣಯಗಳನ್ನು ಗಾಂಧೀಜಿ ಮತ್ತು ಕಾಂಗ್ರೆಸಿಗರ ಮುಂದಿಡುತ್ತಾರೆ.

೧. ಮೀಸಲು ಕ್ಷೇತ್ರಗಳಲ್ಲಿ ಕಾಂಗ್ರೆಸನ್ನು ಒಳಗೊಂಡಂತೆ ಯಾವುದೇ ಮೇಲ್ಜಾತಿಯ ಪಕ್ಷ ತಲೆ ಹಾಕಬಾರದು.

೨. ದಲಿತ ಅಭ್ಯರ್ಥಿಗಳಿಗೆ ಮೇಲ್ಜಾತಿ ಪಾರ್ಟಿಗಳು ಟಿಕೇಟು ನೀಡಿ ಸ್ಪರ್ಧಿಸಲು ಅವಕಾಶ ನೀಡಬಾರದು.

೩. ದಲಿತರಿಗೆ ದೊರಕಿರುವಂತೆ ಇತರೆ ಹಿಂದುಳಿದ ಜಾತಿಗಳಿಗೂ ಶಾಸನ ಸಭೆ ಮತ್ತು ಸರ್ಕಾರಿ ಸೇವೆಗಳಲ್ಲಿ ಮೀಸಲಾತಿ ದೊರಕಬೇಕು.

೪. ರಾಜಕೀಯ ಮೀಸಲಾತಿ ೨೦ ವರ್ಷಗಳ ತನಕ ಇರಬೇಕು; ದಲಿತರು ಇಚ್ಛೆಪಟ್ಟರೆ ಮಾತ್ರ ಮುಂದುವರಿಯಬೇಕು.

೫. ಸರ್ಕಾರಿ ನೌಕರಿಗಳಲ್ಲಿರುವ ಮೀಸಲಾತಿಗೆ ಯಾವುದೇ ಕಾಲಮಿತಿ ಇರಬಾರದು. ನಿರಂತರವಾಗಿ ಮುಂದುವರಿಯಬೇಕು.

೬. ಸರ್ಕಾರಿ ನೌಕರಿಯ ಪ್ರತಿ ಹಂತದಲ್ಲೂ ನಿಗದಿತ ಮೀಸಲಾತಿ ಪ್ರಮಾಣವನ್ನು ಕಾಯ್ದುಕೊಳ್ಳಬೇಕು.

ಗಾಂಧೀಜಿಯವರು ಈ ಎಲ್ಲಾ ಷರತ್ತು ಮತ್ತು ನಿರ್ಣಯಗಳಿಗೆ ಒಪ್ಪಿದ ಮೇಲೆ ಅಂಬೇಡ್ಕರ್ ಅವರು ಯರವಾಡ ಜೈಲಿನಲ್ಲಿ ೧೯೩೨ ಸೆಪ್ಟೆಂಬರ್, ೨೪ರಂದು ಒಪ್ಪಂದಕ್ಕೆ ಸಹಿ ಹಾಕುತ್ತಾರೆ. ಅದೇ "ಪೂನಾ ಒಪ್ಪಂದ." ಪೂನಾ ಒಪ್ಪಂದದ ತರುವಾಯ ಪತ್ರಕರ್ತರು ಅಂಬೇಡ್ಕರ್ ಅವರನ್ನು, "ಪೂನಾ ಒಪ್ಪಂದದ ಮೂಲಕ ನಿಮಗೆ ದಕ್ಕಿದ್ದೇನು ?" ಎಂದು ಪ್ರಶ್ನಿಸಿದಾಗ ಅಂಬೇಡ್ಕರ್ ಅವರು, "ನಾನು ಲಂಡನ್‌ನಿಂದ ನನ್ನ ಜನರಿಗಾಗಿ ಹಣ್ಣೊಂದನ್ನು ತಂದೆ. ನನ್ನ ಕೈಯಿಂದ ಆ ಹಣ್ಣನ್ನು ಕಸಿದುಕೊಂಡ ಗಾಂಧಿ 'ಇದನ್ನು ಎಲ್ಲರೂ ಹಂಚಿಕೊಂಡು ತಿನ್ನೋಣ' ಎಂದರು. ಆದರೆ, ಆ ಹಣ್ಣನ್ನು ಚೆನ್ನಾಗಿ ಹಿಂಡಿದ ಗಾಂಧಿ ರಸವನ್ನು ತಮ್ಮ ಜಾತಿಯವರಿಗೆ ಕೊಟ್ಟರು. ಅದರ ಸಿಪ್ಪೆಯನ್ನು ನಮ್ಮ ಜನರ ಮುಖದ ಮೇಲೆ ಎಸೆದರು. ದುಂಡುಮೇಜಿನ ಸಭೆಯಲ್ಲಿ ಪಡೆದು ತಂದ ಅಧಿಕಾರ ಪೂನಾ ಒಪ್ಪಂದದಲ್ಲಿ ಕಳೆದುಹೋಯಿತು. ಮೊದಲು ಓಟು ಹಾಕುವ ಹಕ್ಕಿಲ್ಲದೆ ಗುಲಾಮರಾಗಿದ್ದೆವು. ಈಗ ಓಟು ಹಾಕುವ ಹಕ್ಕು ಪಡೆದ ಮೇಲೂ ಗುಲಾಮರಾದೆವು. ಸ್ವತಂತ್ರ ನಾಡಿನಲ್ಲೆ ದುಡಿಯುವ ಜೀತಗಾರರಾದೆವು" ಎಂದು ತುಂಬ ನೋವಿನಿಂದ ನುಡಿದರು.

ಪೂನಾ ಒಪ್ಪಂದದ ತರುವಾಯ ಗಾಂಧಿ ಮತ್ತು ಕಾಂಗ್ರೆಸಿಗರು, ಒಪ್ಪಂದದ ಪ್ರಕಾರ ನಡೆದುಕೊಳ್ಳಬೇಕಾಗಿದ್ದ ಷರತ್ತು, ನಿರ್ಣಯಗಳನ್ನು ಗಾಳಿಗೆ ತೂರಿ ಮೋಸ ಮಾಡಿದರು. ಪೂನಾ ಒಪ್ಪಂದದ ಪರಿಣಾಮ '೭೮ ವಿಶೇಷ ಮತ ಕ್ಷೇತ್ರ'ಗಳಿಗೆ ಬದಲಾಗಿ, '೧೫೧ ಮೀಸಲು ಕ್ಷೇತ್ರಗಳು ಲಭಿಸಿದವು. ಆ ಮೂಲಕ ದಲಿತರ ಜೀತ ರಾಜಕಾರಣ ಆರಂಭವಾಯಿತು. ದಲಿತ ರಾಜಕಾರಣಿಗಳು ಗುಲಾಮಗಿರಿಯಿಂದ ಚಮಚಾಗಿರಿಯ ಕಡೆಗೆ ಸಾಗುವಂತಾಯಿತು. ಮೀಸಲು ಕ್ಷೇತ್ರಗಳಲ್ಲಿ ದಲಿತ ಅಭ್ಯರ್ಥಿಗಳು ಗೆಲ್ಲಬೇಕಾದರೆ, ಆ ಕ್ಷೇತ್ರದ ಸವರ್ಣೀಯರ ವಿಶ್ವಾಸವನ್ನು ಗಳಿಸಬೇಕಿತ್ತು. ಸವರ್ಣೀಯರು ಸ್ವಾಭಿಮಾನಿ ದಲಿತ ಅಭ್ಯರ್ಥಿಗಳಿಗಿಂತ, ತಮ್ಮ ಜೀತ ಮಾಡುವ ಗುಲಾಮಿ ಮನಃಸ್ಥಿತಿಯ ದಲಿತ ಅಭ್ಯರ್ಥಿಗಳನ್ನು ಆರಿಸಿಕೊಳ್ಳುವ ಅವಕಾಶ ನಿರ್ಮಾಣವಾಯಿತು. ಪೂನಾ ಒಪ್ಪಂದದ ಪ್ರಕಾರ, ಮೀಸಲು ಕ್ಷೇತ್ರಗಳಲ್ಲಿ ತಮ್ಮ ಪಕ್ಷದ ಅಭ್ಯರ್ಥಿಗಳನ್ನು ನಿಲ್ಲಿಸುವುದಿಲ್ಲ ಎಂದು ಒಪ್ಪಿದ್ದ ಗಾಂಧಿ ಮತ್ತು ಕಾಂಗ್ರೆಸಿಗರು, ಕೊಟ್ಟ ಮಾತಿಗೆ ತಪ್ಪಿದರು. ೧೯೩೭ರಲ್ಲಿ ಕೇಂದ್ರ ಹಾಗೂ ಪ್ರಾಂತೀಯ ಸರ್ಕಾರಗಳಿಗೆ ಚುನಾವಣೆ ನಡೆದಾಗ ೧೫೧ ದಲಿತರ ಮೀಸಲು ಕ್ಷೇತ್ರಗಳಲ್ಲಿ ಕಾಂಗ್ರೆಸ್ ಪಕ್ಷದಿಂದ ಅನಕ್ಷರಸ್ಥ ದಲಿತರಿಗೆ ಪಕ್ಷದಿಂದ ಟಿಕೇಟು ನೀಡಿ ಚುನಾವಣೆಗೆ ನಿಲ್ಲಿಸಿದರು. ಈ ಚುನಾವಣೆಯಲ್ಲಿ ಅಂಬೇಡ್ಕರ್ ಅವರ 'ಸ್ವತಂತ್ರ ಕಾರ್ಮಿಕ ಪಕ್ಷ'ದಿಂದ ೧೭ ಜನ ಸ್ವಾಭಿಮಾನಿ ದಲಿತರು ಆರಿಸಿ ಬಂದರೆ, ಕಾಂಗ್ರೆಸ್ ಪಕ್ಷದಿಂದ ೭೮ ಜನ ಗುಲಾಮಿ ದಲಿತರು ಆರಿಸಿ ಬಂದರು. ಅಂಬೇಡ್ಕರ್ ಅವರು ಶಾಸನ ಸಭೆಯಲ್ಲಿ, "ಬಹುಜನ ಮಕ್ಕಳೆಲ್ಲರಿಗೂ ಉಚಿತ ಶಿಕ್ಷಣ ಮತ್ತು ಪ್ರತಿ ಹಳ್ಳಿಗೆ ಒಂದೊಂದು ಇಂಗ್ಲಿಷ್ ಮಾಧ್ಯಮ ಶಾಲೆ ಬೇಕು, ಭೂರಹಿತ ದಲಿತರಿಗೆ ಮತ್ತು ರೈತರಿಗೆ ಭೂಮಿ ಬೇಕು" ಎಂಬ ಬೇಡಿಕೆ ಇಟ್ಟರು. ಆದರೆ, ಕಾಂಗ್ರೆಸ್‌ನಿಂದ ಗೆದ್ದು ಬಂದಿದ್ದ ೭೮ ಜನ ದಲಿತ ಗುಲಾಮಿ ಶಾಸಕರು : "ಹಳ್ಳಿಗಳಲ್ಲಿ ಶಾಲೆಗಳು ಬಂದು ದಲಿತರೆಲ್ಲಾ ವಿದ್ಯಾವಂತರಾದರೆ ಬೇಸಾಯ ಮಾಡುವವರಾರು ? ದನ, ಕುರಿ ಕಾಯುವವರಾರು ? ಬಟ್ಟೆ ಒಗೆಯುವುದು, ಕ್ಷೌರ ಮಾಡುವುದು, ಕುಂಬಾರಿಕೆ, ಕಂಬಾರಿಕೆ ಮುಂತಾದ ಕೆಲಸ ಮಾಡುವವರಾರು ? ಶಾಲೆಗಳಿಂದ ಹಳ್ಳಿಗಳು ಹಾಳಾಗುತ್ತವೆ. ದಲಿತ ಮಕ್ಕಳು ವಿದ್ಯಾವಂತರಾಗುವ ಕಾಲ ಇನ್ನೂ ಬಂದಿಲ್ಲ. ಆದ್ದರಿಂದ ಹಳ್ಳಿಗಳಿಗೆ ಶಾಲೆಗಳು ಬೇಡ. ನಮ್ಮವರೆಲ್ಲಾ ಸ್ವಂತ ಭೂಮಿಯಲ್ಲಿ ದುಡಿದರೆ, ಇನ್ನುಳಿದ ಕೃಷಿ ಭೂಮಿಯೇನಾಗಬೇಕು ? ಇದರಿಂದ ದೇಶದ ಆರ್ಥಿಕ ಸ್ಥಿತಿ ಕೆಡುತ್ತದೆ. ಭೂಹೀನರಿಗೆ ಸ್ವಂತ ಭೂಮಿಗಿಂತ ಅವರ ದಿನಗೂಲಿ ಹೆಚ್ಚಿಸೋಣ" ಎಂದು ಹೇಳಿ ವಿರೋಧಿಸಿದರು. ಇದು ಕೂಡಾ ಪೂನಾ ಒಪ್ಪಂದದ ಪರಿಣಾಮವೇ ಆಗಿದೆ.

ಗಾಂಧೀಜಿಯವರ ಉಪವಾಸ ಸತ್ಯಾಗ್ರಹ ಹಾಗೂ ಪೂನಾ ಒಪ್ಪಂದವನ್ನು ಗೇಲ್ ಅಮ್‌ವೆಡ್ತ್ ಅವರು 'ನೈತಿಕ ಬ್ಲ್ಯಾಕ್‌ಮೇಲ್' ಎಂದು ಕರೆದಿದ್ದಾರೆ. ಗಾಂಧೀಜಿಯವರು ಇಂಗ್ಲೆಂಡಿಗೆ ಹೋದಾಗಲೆಲ್ಲಾ ಅವರನ್ನು ತಮ್ಮ ಮನೆಯಲ್ಲೇ ಉಳಿಸಿಕೊಂಡು ಉಪಚರಿಸುತ್ತಿದ್ದ, ಅಪಾರವಾಗಿ ಗೌರವಿಸುತ್ತಿದ್ದ, ಕಟ್ಟಾ ಅನುಯಾಯಿಯಾಗಿದ್ದ ವಿದೇಶಿ ವ್ಯಕ್ತಿಯೊಬ್ಬ ಗಾಂಧೀಜಿಯವರಿಗೆ ಪತ್ರ ಬರೆದು : "ದಲಿತರ ವಿಶೇಷ ಚುನಾಯಿಕಗಳ ಬಗೆಗೆ ನೀವು ತೆಗೆದುಕೊಂಡ ನಿಲುವಿಗೆ ನನ್ನ ಧಿಕ್ಕಾರ" ಎಂದು ಖಂಡಿಸುತ್ತಾನೆ. ಹಾಗಾಗಿ ಇವತ್ತಿನ ದಲಿತರ ಜೀತ ರಾಜಕಾರಣಕ್ಕೆ ಪೂನಾ ಒಪ್ಪಂದವೇ ಕಾರಣ. ಇದರ ಪರಿಣಾಮದಿಂದಾಗಿ, ಇಂದಿಗೂ ಒಬ್ಬ ದಲಿತ ರಾಜಕಾರಣಿ ಈ ದೇಶದ ಪ್ರಧಾನಿ ಆಗಲಿಕ್ಕೆ, ಈ ರಾಜ್ಯದ ಮುಖ್ಯಮಂತ್ರಿ ಆಗಲಿಕ್ಕೆ ಸಾಧ್ಯವಾಗಿಲ್ಲ.

ಪೂನಾ ಒಪ್ಪಂದ ಎಂದಾಕ್ಷಣ ಗಾಂಧಿ–ಅಂಬೇಡ್ಕರ್ ನೆನಪಾಗುವ ಹಾಗೆ, ಅದೇ ಸಂದರ್ಭದಲ್ಲಿ ಪುರಾಣದ ರಾಮ–ಶಂಬುಕ, ದ್ರೋಣ–ಏಕಲವ್ಯ ನೆನಪಾಗುತ್ತಾರೆ. ಕೆಳಜಾತಿಯವನಾದ ಶಂಬುಕ ವೇದ ಓದಿದ ಕಾರಣಕ್ಕಾಗಿ ಬ್ರಾಹ್ಮಣನ ಮಗ ಸತ್ತ ಎಂಬ ಕುಂಟು ನೆಪ ಒಡ್ಡಿ ರಾಮ ಶಂಬುಕನನ್ನು ಕೊಂದ. ಏಕಲವ್ಯ ಬೇಡ ಕುಲದವನೆಂದು ಪಾಠ ಹೇಳಿ ಕೊಡಲು ನಿರಾಕರಿಸಿದ ದ್ರೋಣ, ಒಂದು ದಿನವೂ ಪಾಠ ಹೇಳದೆ ಏಕಲವ್ಯನಿಂದ ಗುರುದಕ್ಷಿಣೆಯಾಗಿ ಬಲಗೈ ಹೆಬ್ಬೆರಳನ್ನು ಪಡೆದು ಅವನ ಬಿಲ್ವಿದ್ಯೆಯನ್ನು ನಾಶಮಾಡಿದ. ಹಾಗೆಯೇ, ಅಂಬೇಡ್ಕರ್ ಅವರು ತಮ್ಮ ಹೋರಾಟದ ಮೂಲಕ ದಲಿತರಿಗಾಗಿ ತಂದುಕೊಟ್ಟಿದ್ದ ವಿಶೇಷ ಮತದಾನದ ಹಕ್ಕನ್ನು ಗಾಂಧೀಜಿ ಕುತಂತ್ರದಿಂದ ಉಪವಾಸ ಮಾಡಿ 'ಪೂನಾ ಒಪ್ಪಂದ'ದ ಮೂಲಕ ನಾಶಮಾಡಿದರು. ಇವುಗಳ ಮೂಲ ಹುನ್ನಾರ, ಪರಂಪರೆಯ ಉದ್ದಕ್ಕೂ ಕೆಳಜಾತಿಯ ಜನರನ್ನು ಅಕ್ಷರ ಜ್ಞಾನ, ಅಧಿಕಾರದಿಂದ ವಂಚಿಸುವುದಾಗಿದೆ. 'ರಾಮ, ದ್ರೋಣ, ಪೂನಾ ಒಪ್ಪಂದದ ಗಾಂಧೀಜಿ' ಶೋಷಕ ಪ್ರಜ್ಞೆಯ ಸಂಕೇತವಾಗಿಯೂ; 'ವೇದ, ಬಿಲ್ವಿದ್ಯೆ, ವಿಶೇಷ ಮತದಾನ ಪದ್ಧತಿ' ಶೋಷಿತರ ಮೂಲಭೂತ ಹಕ್ಕುಗಳಾಗಿಯೂ; 'ಶಂಬುಕ, ಏಕಲವ್ಯ, ಅಂಬೇಡ್ಕರ್' ಶೋಷಿತ ಸಮುದಾಯಗಳ ಪ್ರತಿನಿಧಿಗಳಾಗಿ ನನಗೆ ಯಾವತ್ತೂ ಕಾಡುತ್ತಾರೆ.

**ಡಾ॥ ಅಪ್ಪಗೆರೆ ಸೋಮಶೇಖರ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ
ಸೆಂಟ್ರಲ್ ಯೂನಿವರ್ಸಿಟಿ ಆಫ್ ಕರ್ನಾಟಕ
ಗುಲಬರ್ಗಾ – ೫೮೫೧೦೬



# ಕಾಮನ್‌ವೆಲ್ತ್ ಕೂಟ–ಶ್ರೀಲಂಕಾ–ಭಾರತ

ಬ್ರಿಟಿಷ್ ಸಾಮ್ರಾಜ್ಯಶಾಹಿಯ ಪಳೆಯುಳಿಕೆಗಳಲ್ಲಿ ಒಂದು ಬ್ರಿಟಿಷ್ ಕಾಮನ್‌ವೆಲ್ತ್ ಸಂಸ್ಥೆ. ೧೯೩೧ರಲ್ಲಿ ಸ್ಥಾಪನೆಗೊಂಡ ಈ ಸಂಘಟನೆ ಬ್ರಿಟನ್ನಿನ ಎಲ್ಲ ವಸಾಹತುಗಳು, ಅಧೀನ ಪ್ರದೇಶಗಳನ್ನು ಒಳಗೊಂಡಿದ್ದು ಐವತ್ತಮೂರು ಸದಸ್ಯರನ್ನು ಹೊಂದಿದೆ. ಎರಡು ವರ್ಷಗಳಿಗೊಮ್ಮೆ ಇವುಗಳ ಆಡಳಿತ ನಡೆಸುತ್ತಿದ್ದವರು ಸೇರಿ ವಿಚಾರ ವಿನಿಮಯ ನಡೆಸುತ್ತಿದ್ದ ಕೂಟವಾಗಿತ್ತು ಇದು. ವಸಾಹತುಶಾಹಿ ಅಂತ್ಯಗೊಂಡು ಸ್ವತಂತ್ರ ರಾಷ್ಟ್ರಗಳು ಉದಯಗೊಂಡ ಮೇಲೆ ೧೯೪೯ರಲ್ಲಿ ಅದು 'ಕಾಮನ್‌ವೆಲ್ತ್' ಆಯಿತು. ಬ್ರಿಟನ್ನಿನ ಪ್ರತಿಷ್ಠೆಯ ಸಂಕೇತವಾಗಿರುವ ಈ ಸಂಸ್ಥೆ ಯಾವುದೇ ನಿರ್ದಿಷ್ಟ ಉದ್ದೇಶವನ್ನಾಗಲಿ, ನಿಯಮಾವಳಿಗಳನ್ನಾಗಲಿ ಕಚೇರಿಯನ್ನಾಗಲಿ ಹೊಂದಿಲ್ಲ. ಎರಡು ವರ್ಷಗಳಿಗೊಮ್ಮೆ ಸದಸ್ಯ ರಾಷ್ಟ್ರಗಳ ಅಧಿಪತಿಗಳ ಸಮಾವೇಶ ಯಾವುದಾದರೊಂದು ಸದಸ್ಯ ರಾಷ್ಟ್ರದಲ್ಲಿ ನಡೆಯುತ್ತದೆ. ಎರಡು ದಿನಗಳ ಕಲಾಪಗಳಲ್ಲಿ ಗಹನವಾದ ವಿಚಾರಗಳೇನೂ ಚರ್ಚೆಯಾಗುವುದಿಲ್ಲ, ನಿರ್ಣಯಗಳೂ ಆಗುವುದಿಲ್ಲ. ಇದರಲ್ಲಿ ಒಂದು ದಿನ ಮೋಜಿನಲ್ಲಿ ಕಳೆಯುತ್ತದೆ ಒಂದು ರಮಣೀಯ ಪ್ರದೇಶದಲ್ಲಿ. ಇವೆಲ್ಲ ಒಂದು ರೀತಿಯ ಕ್ಲಬ್ ಸಂಸ್ಕೃತಿ. ಪರಸ್ಪರರ ಭೇಟಿಗೆ ಅವಕಾಶ ಒಂದು ಬಿಟ್ಟರೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಯಾವುದೇ ಪ್ರಭಾವ ಹೊಂದಿಲ್ಲದ ಸಂಸ್ಥೆ ಇದು. ಸ್ವತಂತ್ರ ಭಾರತ ಈ ಕಾಮನ್‌ವೆಲ್ತ್ ಕೂಟದಿಂದ ಹೊರಬರಬೇಕೆಂದು ಕಳೆದ ಶತಮಾನದ ಐವತ್ತರ ದಶಕದಲ್ಲಿ ದೊಡ್ಡ ಚಳವಳಿಯೇ ನಡೆದಿತ್ತು. ಎಡಪಕ್ಷಗಳು, ಪ್ರಜಾಪ್ರಭುತ್ವವಾದಿಗಳು, ಬುದ್ಧಿಜೀವಿಗಳು ಈ ಚಳವಳಿಯಲ್ಲಿ ಪಾಲ್ಗೊಂಡಿದ್ದರು.

ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಅಸ್ತಿತ್ವದಲ್ಲಿರುವ ಈ ಸಂಘಟನೆಯಿಂದ ಸದಸ್ಯ ರಾಷ್ಟ್ರಗಳಿಗೆ ಪ್ರಯೋಜನವೇನಿಲ್ಲ. ಯಾವುದೇ ವಿವಾದಗಳನ್ನು ಬಗೆಹರಿಸುವುದರಲ್ಲಾಗಲಿ, ಮತ್ತಾವುದಾದರೂ ಅಭಿವೃದ್ಧಿ ಕಾರ್ಯದಲ್ಲಿ ನೆರವಾಗುವುದಾಗಲಿ ಅದಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ, ದಕ್ಷಿಣ ಆಫ್ರಿಕ ಸರಕಾರ ಅಪಾರ್ಥಿಡ್ (ವರ್ಣಭೇದ) ನೀತಿ ಅನುಸರಿಸುತ್ತಿದ್ದಾಗ ಕಾಮನ್‌ವೆಲ್ತ್ ಸಂಸ್ಥೆಗೆ ಏನೂ ಮಾಡಲಾಗಲಿಲ್ಲ. ಸದಸ್ಯ ರಾಷ್ಟ್ರದ ಒತ್ತಾಯಕ್ಕೆ ಮಣಿದು ದಕ್ಷಿಣ ಆಫ್ರಿಕದ ಸದಸ್ಯತ್ವವನ್ನು ರದ್ದುಗೊಳಿಸಲಾಯಿತು. ಬ್ರಿಟನ್ ಅದಕ್ಕೆ ತೀವ್ರವಿರೋಧ ವ್ಯಕ್ತಗೊಳಿಸಿತ್ತು. ತನ್ನ ಪ್ರಭಾವವನ್ನು ಮಾಜಿ ವಸಾಹತುಗಳ ಮೇಲೆ ಬೀರಲು ಬ್ರಿಟನ್ನಿಗೆ ಈ ಕಾಮನ್‌ವೆಲ್ತ್ ಸಂಸ್ಥೆಯಿಂದ ಅವಕಾಶವಾಗಿದೆಯೇ ಹೊರತು ಬೇರಾವ ರೀತಿಯಲ್ಲೂ ಸದಸ್ಯರಾಷ್ಟ್ರಗಳಿಗೆ ಉಪಯೋಗವಾಗಿಲ್ಲ.

ಈ ಹಿನ್ನೆಲೆ ಹೊಂದಿರುವ ಕಾಮನ್‌ವೆಲ್ತ್ ಕೂಟದ ಸಭೆ ಈಚೆಗೆ ಶ್ರೀಲಂಕಾದಲ್ಲಿ ನಡೆದು ಸಾಕಷ್ಟು ಸುದ್ದಿ ಮಾಡಿತು. ಸುದ್ದಿಯ ಕೇಂದ್ರ ಭಾರತದ ಪ್ರಧಾನಿಯ ಭಾಗವಹಿಸುವಿಕೆ. ಕಾಮನ್‌ವೆಲ್ತ್ ಸಭೆಗೆ ಪ್ರತಿಸಲ ಸದಸ್ಯ ರಾಷ್ಟ್ರದ ಅಧಿಪತಿಯ ಉಪಸ್ಥಿತಿ ಕಡ್ಡಾಯವೇನಲ್ಲ. ಹಾಗಿದ್ದರೂ ಶ್ರೀಲಂಕಾ ತಮಿಳರ ಮೇಲೆ ನಡೆದ ಹಿಂಸಾಚಾರದ ಕುರಿತ ವಿವಾದದಿಂದಾಗಿ ಭಾರತದ ಪ್ರಧಾನಿ ಮನಮೋಹನ ಸಿಂಗ್‌ರ ಹಾಜರಿ ಪ್ರಶ್ನೆ ಪ್ರಾಮುಖ್ಯತೆ ಪಡೆಯಿತು. ಇದಕ್ಕೆ ಸ್ವತಃ ಪ್ರಧಾನಿ ಹಾಗೂ ಕಾಂಗ್ರೆಸ್ ಪಕ್ಷದ ಸಂದರ್ಭಸಾಧಕತನವೇ ಕಾರಣ. ತಮಿಳು ಉಗ್ರಗಾಮಿ ಸಂಘಟನೆ ಎಲ್‌ಟಿಟಿಇಯ ಮೇಲೆ ಮಿಲಿಟರಿ ಕಾರ್ಯಾಚರಣೆಯಲ್ಲಿ ವಿಜೇತವಾದ ಶ್ರೀಲಂಕಾ ಸೇನೆ ನಡೆಸಿದ ದೌರ್ಜನ್ಯ, ಹಿಂಸಾಚಾರಗಳು, ಮಾನವಹಕ್ಕುಗಳ ಉಲ್ಲಂಘನೆಯ ವಿಚಾರಣೆಯಾಗಬೇಕೆಂಬುದೇ ವಿವಾದದ ಕೇಂದ್ರ ವಿಷಯ. ಈ ವಿಚಾರದಲ್ಲಿ ಬ್ರಿಟನ್ನಿನ ಪ್ರಧಾನಿಯ ಸೂಚನೆಗೆ ಶ್ರೀಲಂಕಾದ ಅಧ್ಯಕ್ಷ ರಾಜಪಕ್ಷೆ ಕಿಂಚಿತ್ ಮೌಲ್ಯವನ್ನೂ ಕೊಡದೆ ತಿರಸ್ಕರಿಸಿದ್ದಾರೆ. ಕಾಮನ್‌ವೆಲ್ತ್ ಸಭೆಯಲ್ಲಿ ಈ ವಿಷಯ ಚರ್ಚೆಗೆ ಬರಲೂ ಇಲ್ಲ. ತಮಿಳುನಾಡು ರಾಜಕೀಯದ ಚದುರಂಗದಲ್ಲಿ ಸಿಕ್ಕಿ ಮುಂಬರುವ ಚುನಾವಣೆಯನ್ನೂ ದೃಷ್ಟಿಯಲ್ಲಿರಿಸಿಕೊಂಡು ಕೊನೆಯ ಘಳಿಗೆಯವರೆಗೂ ಲೆಖ್ಖಾಚಾರ ಮಾಡಿ ಕಾಂಗ್ರೆಸ್ ಅಧ್ಯಕ್ಷರು ಮತ್ತು ಪ್ರಧಾನಿ ಕಾಮನ್‌ವೆಲ್ತ್ ಸಭೆಯಲ್ಲಿ ಭಾಗವಹಿಸದಿರಲು ನಿರ್ಧರಿಸಿದರು. ಒತ್ತಡಗಳಿಗೆ ಮಣಿದು ಕೈಗೊಂಡ ಈ ನಿರ್ಧಾರ ಭಾರತ – ಶ್ರೀಲಂಕಾ ದ್ವಿಪಕ್ಷೀಯ ಸಂಬಂಧಗಳ ಮೇಲೆ ಪರಿಣಾಮ ಬೀರುವುದು ಖಚಿತ. ಅಲ್ಲದೆ ಶ್ರೀಲಂಕಾ ತಮಿಳರ ಪ್ರಶ್ನೆ ಮತ್ತಷ್ಟು ಜಟಿಲಗೊಂಡು ಭಾರತದ ಪಾತ್ರವನ್ನು ನಗಣ್ಯವಾಗಿಸುವುದು. ಈ ಸಂದರ್ಭಸಾಧಕ ನಿಲುವಿನಿಂದ ಹೆಚ್ಚು ಬಾಧಕವಾಗುವುದೇ ಹೊರತು ಪ್ರಯೋಜನವೇನಿಲ್ಲ.



ಶ್ರೀಲಂಕಾ ತಮಿಳರ ಸಮಸ್ಯೆ ಇಂದು ನಿನ್ನೆಯದಲ್ಲ. ಸ್ವಾತಂತ್ರ್ಯಾನಂತರದ ಮೊದಲ ದಿನಗಳಿಂದಲೂ ಇದ್ದದ್ದೆ. ಶ್ರೀಲಂಕಾ ಸರಕಾರದ ವಿರುದ್ಧವಾಗಿ ತಮಿಳರು ನಡೆಸಿದ ಸಶಸ್ತ್ರ ಹೋರಾಟ ಈಗ ಇತಿಹಾಸ. ಆದರೆ ಸಮಸ್ಯೆ ಮಾತ್ರ ಇನ್ನೂ ಪೂರ್ಣವಾಗಿ ಇತ್ಯರ್ಥವಾಗಿಲ್ಲ. ಇದಕ್ಕೆ ಬೇಕಿರುವುದು ಭಾರತ ಸರಕಾರದ ಮಟ್ಟಿಗೆ ರಾಜತಾಂತ್ರಿಕ ಪ್ರಯತ್ನ. ತಮಿಳುನಾಡಿನ ರಾಜಕೀಯದಲ್ಲಿ ಶ್ರೀಲಂಕಾ ತಮಿಳರ ಪ್ರಶ್ನೆ ರಾಜಕೀಯ ಮೇಲಾಟದ ವಸ್ತು. ಶ್ರೀಲಂಕಾದಲ್ಲಿ ನಡೆಯುವ ಕಾಮನ್‌ವೆಲ್ತ್ ಸಭೆಯಲ್ಲಿ ಭಾರತ ಭಾಗವಹಿಸಕೂಡದು ಎನ್ನುವುದು ತಮಿಳುನಾಡಿನ ನಿಲುವು. ಈ ಮೂಲಕ ಶ್ರೀಲಂಕಾದ ತಮಿಳರ ಮೇಲೆ ನಡೆದಿರುವ ದೌರ್ಜನ್ಯಗಳಿಗೆ ಪ್ರತಿಭಟನೆ ತೋರಬೇಕು ಎಂಬುದು ಉದ್ದೇಶ. ಈ ವಿಷಯದಲ್ಲಿ ತಮಿಳುನಾಡು ಸರಕಾರ ಶಾಸನ ಸಭೆಯ ವಿಶೇಷ ಅಧಿವೇಶನ ನಡೆಸಿ ಸರ್ವಾನುಮತದಿಂದ ಭಾರತ, ಶ್ರೀಲಂಕಾದಲ್ಲಿ ನಡೆಯುವ ಕಾಮನ್‌ವೆಲ್ತ್ ಸಭೆಯಲ್ಲಿ ಭಾಗವಹಿಸಕೂಡದು ಎಂಬ ನಿರ್ಣಯವನ್ನು ಅಂಗೀಕರಿಸಿತ್ತು. ಕೇಂದ್ರ ಸರಕಾರದ ಮೇಲೆ ಒತ್ತಡ ತರಲು ಅನುಸರಿಸಿದ ತಂತ್ರ ಇದು. ಅದಕ್ಕೆ ತಲೆಬಾಗಿದ ಕಾಂಗ್ರೆಸ್ ಮತ್ತು ಸರಕಾರ ಪ್ರಧಾನಿಗೆ ಬದಲಾಗಿ ವಿದೇಶಾಂಗ ಸಚಿವರನ್ನು ಕಾಮನ್‌ವೆಲ್ತ್ ಸಭೆಗೆ ಕಳಿಸಿಕೊಟ್ಟಿತ್ತು.

ಈ ಎಲ್ಲ ಬೆಳವಣಿಗೆಗಳನ್ನು ಗಮನಿಸಿದಾಗ ಭಾರತ ಸರಕಾರ ತೆಗೆದುಕೊಂಡ ನಿಲುವು ನಿಜಕ್ಕೂ ರಾಷ್ಟ್ರೀಯ ಹಿತಾಸಕ್ತಿಗಳಿಗೆ ಮಾರಕ. ಮೊದಲೇ ಹೇಳಿರುವ ಹಾಗೆ ದ್ವಿಪಕ್ಷೀಯ ಸಂಬಂಧಗಳ ಮೇಲೆ ಪರಿಣಾಮ ಉಂಟಾಗುವುದರಲ್ಲಿ ಸಂದೇಹವಿಲ್ಲ. ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಸಂಕುಚಿತ ಧೋರಣೆ ತಳೆದಿರುವುದು ಸರಿಯಲ್ಲ. ಇಂಥ ನಿರ್ಧಾರಗಳನ್ನು ಕೈಗೊಳ್ಳುವುದರಲ್ಲಿ ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಸರಕಾರ ಈಚೆಗೆ ಹೊಸ ದಾಖಲೆಯನ್ನೇ ಸೃಷ್ಟಿಸಿದೆ. ಈಗಲೂ ಕಾಲ ಮಿಂಚಿಲ್ಲ. ನಿರರ್ಥಕವಾದ, ನಿಷ್ಪ್ರಯೋಜಕವಾದ ಕಾಮನ್‌ವೆಲ್ತ್ ಸಂಘಟನೆಯಿಂದ ಹೊರಬರುವುದು ಉಚಿತ. ಇದರಿಂದ ಏನೂ ನಷ್ಟವಾಗುವುದಿಲ್ಲ. ಬ್ರಿಟಿಷ್ ಸಾಮ್ರಾಜ್ಯದ ಕೊನೆಯ ಕೊಂಡಿ ಕಳಚಿಕೊಂಡಂತಾಗುತ್ತದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು – ೫೬೦ ೦೮೫








# ನೀತಿ ಸದಾಶಿವ ಮರ್ಜಿ



ಕು. ನೀತಿ ಸದಾಶಿವ ಮರ್ಜಿ ಪ್ರಸ್ತುತ ಹುಬ್ಬಳ್ಳಿಯ ಬಿ. ವಿ. ಭೂಮ ರೆಡ್ಡಿ ಅಭಿಯಾಂತ್ರಿಕ ಮತ್ತು ತಾಂತ್ರಿಕ ಮಹಾವಿದ್ಯಾಲಯದಲ್ಲಿ ವ್ಯಾಸಂಗ ಮಾಡುತ್ತಿರುವ ಬಿ. ಆರ್ಕ್ ಪದವಿ ಅಂತಿಮ ವರ್ಷದ ವಿದ್ಯಾರ್ಥಿನಿ. ಇವರು ರಚಿಸಿದ ಅಬ್‌ಸ್ಟ್ರ್ಯಾಕ್ಟ್ (Abstract), ಲ್ಯಾಂಡ್‌ಸ್ಕೇಪ್ ಹಾಗೂ ಥೀಮ್‌ಬೇಸ್ಡ್ ಮಾಧ್ಯಮದಲ್ಲಿ ರಚಿಸಿದ ಕೃತಿಗಳು ಮೆಚ್ಚುಗೆಗೆ ಪಾತ್ರವಾಗಿವೆ. ಹುಬ್ಬಳ್ಳಿ ಹಾಗೂ ಧಾರವಾಡಗಳಲ್ಲಿ ವಿವಿಧ ವೃತ್ತಿಪರ ಸಂಘಟನೆಗಳು ಸಂಘಟಿಸಿದ್ದ ಚಿತ್ರಕಲಾ ಪ್ರದರ್ಶನಗಳಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಮಹೇಶ ಆಚಾರ್ಯ ಅವರಿಂದ ಚಿತ್ರಕಲೆ ತರಬೇತಿ ಪಡೆದುಕೊಂಡಿರುವ ಕು. ನೀತಿ ಧಾರವಾಡದ ಚಿತ್ರಕಲಾ ಪರಿಸರದಲ್ಲಿ ಬೆಳೆಯುತ್ತಿರುವ ಉದಯೋನ್ಮುಖ ಕಲಾವಿದೆ. ಇವರು ವಿದ್ಯಾರ್ಥಿ ದೆಸೆಯಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದು ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗಲೇ ನವದೆಹಲಿಯ ಸೆಂಟರ್ ಫಾರ್ ಇಂಡಿಯನ್ ಆರ್ಚ್ ರಿಸೋರ್ಸಸ್ ಹಾಗೂ ಟ್ರೇನಿಂಗ್ ಸಂಸ್ಥೆಯಿಂದ ಚಿತ್ರಕಲೆಯಲ್ಲಿ ಬಂಗಾರದ ಪದಕ ಪಡೆದಿದ್ದಾರೆ.









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

